# ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ

ಡಾ. ಎ. ವಿ. ವೆಂಕಟರತ್ನಂ





ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಣೆ–೨೨೫
ಪಠ್ಯಪುಸ್ತಕ ಮಾಲೆ–೧೩೫

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ

ಡಾ. ಬಿ. ಷೇಕ್ ಅಲಿ

# ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ

# ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ

ಡಾ. ಎ. ವಿ. ವೆಂಕಟರತ್ನಂ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1974

VIJAYANAGARA SAMRAJYADALLI STHALIYA SARKARA (Local-self Government in Vijayanagara Empire) by A. V. Venkataratnam; Published by the Institute of Kannada Studies, University of Mysore, Manasa Gangotri, Mysore-570006. First Edition 1974; pp. xiv+209.

Published under the centrally sponsored scheme of Production of books and literature in regional languages at the University level, of the Government of India in the Ministry of Education and Social Welfare (Department of Culture), New Delhi.



ಬೆಲೆ : ಹತ್ತು ರೂಪಾಯಿಗಳು

ಮಾರಾಟಗಾರರು : ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–570006

ಮುದ್ರಕರು : ಡಿ. ರಾಜರತ್ನಂ, ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು-570001

# ಮುನ್ನುಡಿ

ಕನ್ನಡ ಭಾಷೆ, ಸಾಹಿತ್ಯಗಳ ಸರ್ವತೋಮುಖವಾದ ಬೆಳವಣಿಗೆಯನ್ನು ಸಾಧಿಸುವ ದೃಷ್ಟಿಯಿಂದ ೧೯೬೬ ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ಈಗ್ಗೆ ಹತ್ತು ಹನ್ನೆರಡು ವರ್ಷಗಳಿಗೆ ಹಿಂದೆ ರಾಷ್ಟ್ರಕವಿ ಕುವೆಂಪು ಅವರ ಮಾರ್ಗ ದರ್ಶನದಲ್ಲಿ ರೂಪುಗೊಂಡಿದ್ದ ಯೋಜನೆಗಳೆಲ್ಲ ಡಾ. ಶ್ರೀ ಮಾಲಿಯವರ ನೇತೃತ್ವದಲ್ಲಿ ಸಾಕಾರಗೊಳ್ಳತೊಡಗಿರುವುದಕ್ಕೆ ಕನ್ನಡ ಅಧ್ಯಯನ ಸಂಸ್ಥೆ ಸಾಕ್ಷಿಯಾಗಿದೆ. ಈಗ ಪ್ರೊಫೆಸರ್ ಜವರೇಗೌಡರು ನಮ್ಮ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರುವುದರಿಂದ ಕನ್ನಡ ಅಧ್ಯಯನ ಸಂಸ್ಥೆಯ ಚಟುವಟಿಕೆಗಳು ತೀವ್ರವಾಗಿ ಬೆಳೆಯುವುವೆಂದು ನಿರೀಕ್ಷಿಸಬಹುದಾಗಿದೆ. ಕನ್ನಡ ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಭಾಷಾವಿಜ್ಞಾನ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ದಕ್ಷಿಣ ಭಾರತೀಯ ಅಧ್ಯಯನ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಭಾಷಾಂತರ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಜಾನಪದ ಶಿಕ್ಷಣ ಮತ್ತು ಸಂಶೋಧನ ವಿಭಾಗ, ಸ್ನಾತಕೋತ್ತರ ಭಾಷಾಂತರ ಡಿಪ್ಲೊಮಾ ಶಿಕ್ಷಣ, ಸ್ನಾತಕೋತ್ತರ ಭಾರತೀಯ ಸಾಹಿತ್ಯ ಡಿಪ್ಲೊಮಾ ಶಿಕ್ಷಣ, ಸ್ನಾತಕೋತ್ತರ ಜಾನಪದ ಡಿಪ್ಲೊಮಾ ಶಿಕ್ಷಣ, ಕನ್ನಡೇತರರಿಗಾಗಿ ಕನ್ನಡ ಸರ್ಟಿಫಿಕೇಟ್ ಮತ್ತು ಡಿಪ್ಲೊಮಾ ಶಿಕ್ಷಣ—ಇವುಗಳ ಜೊತೆಗೆ ಇಂದು ಸಂಸ್ಥೆಯಲ್ಲಿ ಆರು ಪ್ರಮುಖ ವಿಭಾಗಗಳಿವೆ. (೧) ಸಂಪಾದನ ವಿಭಾಗ, (೨) ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, (೩) ಜಾನಪದ ವಿಭಾಗ, (೪) ಕನ್ನಡ ವಿಶ್ವಕೋಶ ವಿಭಾಗ, (೫) ಹರಿದಾಸ ಸಾಹಿತ್ಯ ಸಂಪಾದನ ಮತ್ತು ಸಂಶೋಧನ ವಿಭಾಗ ಮತ್ತು (೬) ಎಪಿಗ್ರಾಫಿಯ ಕರ್ನಾಟಿಕ ವಿಭಾಗ–ಸಂಸ್ಥೆಯ ಬಹುಮುಖವಾದ ಚಟುವಟಿಕೆಗಳ ಪ್ರತೀಕವಾಗಿವೆ ಈ ವಿಭಾಗಗಳು.

ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮ ವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಕೆಲವು ಸಂಸ್ಥೆಗಳಲ್ಲಿ ಸ್ನಾತಕಪೂರ್ವ ಮತ್ತು ಸ್ನಾತಕ ಹಂತಗಳಲ್ಲಿ ಕನ್ನಡ ಮಾಧ್ಯಮವನ್ನು ಒದಗಿಸಿರುವುದರ ಜೊತೆಗೆ, ಸ್ನಾತಕೋತ್ತರ ಹಂತದವರೆಗೆ ಯಾವ ಪರೀಕ್ಷೆಗೆ ಬೇಕಾದರೂ ಕನ್ನಡದಲ್ಲಿಯೇ ಉತ್ತರಿಸುವ ಸೌಲಭ್ಯವನ್ನೂ ಒದಗಿಸಿದೆ. ವಿಜ್ಞಾನ ಮತ್ತು ಮಾನವಿಕಗಳಿಗೆ ಸಂಬಂಧಿಸಿದ ಪಠ್ಯಪುಸ್ತಕ, ಆಕರಗ್ರಂಥ ಮತ್ತು ಸಂದರ್ಭ ಗ್ರಂಥಗಳನ್ನು ಹೊರತರುವ ದೃಷ್ಟಿಯಿಂದ ೧೯೬೭–೬೮ ರಲ್ಲಿಯೇ ಮೈಸೂರು ವಿಶ್ವವಿದ್ಯಾನಿಲಯ ಭಾಷಾಂತರ ಮತ್ತು ಪಠ್ಯ ಪುಸ್ತಕ ವಿಭಾಗವನ್ನು ಸ್ಥಾಪಿಸಿತು. ಇದಕ್ಕೂ ಮೊದಲು, ಸುಮಾರು ಒಂದು ದಶಕಕ್ಕೂ ಹೆಚ್ಚುಕಾಲ 'ಪ್ರಸಾರಾಂಗ' ತನ್ನ ಇತರ ಕಾರ್ಯಗಳ ಜೊತೆಯಲ್ಲಿ ಈ ಕಾರ್ಯವನ್ನೂ ನಡೆಸಿಕೊಂಡು ಬಂದಿತ್ತು. ೧೯೬೯–೭೦ ರಲ್ಲಿ ಕೇಂದ್ರ ಸರ್ಕಾರ

ಪ್ರಾದೇಶಿಕ ಭಾಷೆಗಳ ಅಭಿವೃದ್ಧಿ ಯೋಜನೆಯನ್ನು ಜಾರಿಗೆ ಕೊಟ್ಟಿದ್ದರಿಂದ ಈ ಕೆಲಸಕ್ಕೆ ಹೆಚ್ಚಿನ ಚಾಲನೆ ದೊರೆಯಿತು. ಇದರಿಂದ ಮತ್ತಷ್ಟು ವ್ಯಾಪಕವಾಗಿ, ಸಮಗ್ರವಾಗಿ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಯಿತು.

ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗಗಳ ಮುಖ್ಯರು ಸಲಹೆ–ಸೂಚನೆ, ವಿಭಾಗ ಸಂಪಾದಕತ್ವದ ಮೂಲಕ ಬಹುಮೂಲ್ಯ ನೆರವು ನೀಡುತ್ತಿದ್ದಾರೆ. ವಿಶ್ವವಿದ್ಯಾನಿಲಯ ಕಾಲೇಜುಗಳ, ಸ್ನಾತಕೋತ್ತರ ವಿಭಾಗಗಳ, ಮಾನ್ಯತೆ ಪಡೆದಿರುವ ಕಾಲೇಜುಗಳ ಅಧ್ಯಾಪಕರು, ಪ್ರಸಿದ್ಧ ಲೇಖಕರು ಮತ್ತು ಭಾಷಾಂತರಕಾರರು ಉತ್ಸಾಹದಿಂದ ಈ ಯೋಜನೆಯಲ್ಲಿ ಭಾಗವಹಿಸುತ್ತಿದ್ದಾರೆ. ಸಾಕಷ್ಟು ಗ್ರಂಥಗಳು ಹೊರಬರುತ್ತಿವೆ. "ವಿಜ್ಞಾನ ಲೇಖಕರ ಕಾರ್ಯಶಿಬಿರ" ದಂತಹ ತರಬೇತಿ ಕಾರ್ಯಕ್ರಮಗಳು ಮತ್ತು "ಬಹುಮಾನ ಯೋಜನೆ"ಯಂತಹ ಪ್ರೋತ್ಸಾಹದಾಯಕ ಕ್ರಮಗಳು ಉತ್ತಮ ಫಲ ನೀಡುತ್ತವೆಂಬುದರಲ್ಲಿ ಅನುಮಾನವಿಲ್ಲ. ರಾಜ್ಯದ ಇತರ ವಿಶ್ವವಿದ್ಯಾನಿಲಯಗಳೂ ಈ ಕಾರ್ಯದಲ್ಲಿ ತೊಡಗಿರುವುದರಿಂದ ಮುಂದಿನ ಕೆಲವು ವರ್ಷಗಳಲ್ಲಿ ಪಠ್ಯಪುಸ್ತಕಗಳ ಅಭಾವದ ಪ್ರಶ್ನೆ ಏಳದಂತಾಗುತ್ತದೆಂದು ಭಾವಿಸಬಹುದಾಗಿದೆ.

ಇತಿಹಾಸ ವಿಭಾಗ ಮುಖ್ಯರಾದ ಡಾ. ಬಿ. ಷೇಕ್ ಅಲಿಯವರ ಸಂಪಾದಕತ್ವದಲ್ಲಿ ಹೊರಬರುತ್ತಿರುವ ಇತಿಹಾಸ ಗ್ರಂಥಗಳಲ್ಲಿ ಡಾ. ಎ. ವಿ. ವೆಂಕಟರತ್ನಂ ಅವರ "ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ" ಗ್ರಂಥವೂ ಒಂದು. ಇದು "ಲೋಕಲ್ ಸೆಲ್ಫ್ ಗವರ್ನಮೆಂಟ್ ಇನ್ ವಿಜಯನಗರ ಎಂಪೈರ್" ಎಂಬ ಅವರ ಮಹಾ ನಿಬಂಧದ ಕನ್ನಡರೂಪ. ಇತಿಹಾಸ ಅಧ್ಯಾಪಕರಿಗೂ, ವಿದ್ಯಾರ್ಥಿಗಳಿಗೂ, ವಿಜಯನಗರ ಕಾಲದಲ್ಲಿನ ಕರ್ನಾಟಕದ ಇತಿಹಾಸ ಮತ್ತು ರಾಜಕೀಯ ವ್ಯವಸ್ಥೆಯ ಬಗ್ಗೆ ಆಸಕ್ತಿಯುಳ್ಳ ಜನಸಾಮಾನ್ಯರಿಗೂ ಆಕರಗ್ರಂಥದ ರೂಪದಲ್ಲಿ ಇದು ತುಂಬ ಉಪಯುಕ್ತವಾಗುತ್ತದೆಂದು ನಂಬಿದ್ದೇವೆ. ಇಂಥದೊಂದು ಪ್ರೌಢಗ್ರಂಥವನ್ನು ಅಧ್ಯಯನ ಸಂಸ್ಥೆಗಾಗಿ ಸಿದ್ಧಪಡಿಸಿಕೊಟ್ಟ ಡಾ. ವೆಂಕಟರತ್ನಂ ಅವರಿಗೂ, ಇದರ ಪ್ರಕಟಣೆಯಲ್ಲಿ ಸಹಕರಿಸಿರುವ ವಿಭಾಗ ಸಂಪಾದಕರಾದ ಡಾ. ಷೇಕ್ ಅಲಿ ಅವರಿಗೂ, ಹಸ್ತಪ್ರತಿಯ ಹಾಗೂ ಕರಡುಗಳ ಪರಿಶೀಲನೆಯಲ್ಲಿ ನೆರವಾಗಿರುವ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗದ ಶ್ರೀ ಡಿ. ಎಸ್. ಜಯಪ್ಪಗೌಡ ಅವರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ<br>
ಮಾನಸಗಂಗೋತ್ರಿ, ಮೈಸೂರು.

**ಹಾ. ಮಾ. ನಾಯಕ**<br>
ಪ್ರಧಾನ ಸಂಪಾದಕ.

## ವಿಭಾಗ ಸಂಪಾದಕರ ಮಾತು

ಇತಿಹಾಸ ಅಧ್ಯಯನದಲ್ಲಿ ವಿವಿಧ ಪ್ರಾಂತ್ಯಗಳ, ಪಟ್ಟಣಗಳ ಮತ್ತು ಗ್ರಾಮಗಳ ಸ್ಥಳೀಯ ಮಟ್ಟದ ಆಡಳಿತವನ್ನು ಅಲಕ್ಷಿಸಿ ಪ್ರತಿಯೊಂದು ಘಟನೆಯನ್ನು ಕೇಂದ್ರ ಸರ್ಕಾರವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡುವುದು ನಮ್ಮಲ್ಲಿರುವ ಪ್ರವೃತ್ತಿ. ರಾಜರು, ಆಸ್ಥಾನಗಳು ಮತ್ತು ಆಸ್ಥಾನಿಕರು ಮೊದಲಾದ ಪ್ರತಿಷ್ಠರಿಗೆ ಸಂಬಂಧಿಸಿದಂತೆ ರಾಜಕೀಯ, ಸೈನಿಕ, ಆಡಳಿತಾತ್ಮಕ ಮತ್ತು ಸಂವಿಧಾನಾತ್ಮಕ ವಿಷಯಗಳಲ್ಲಿ ನಾವು ಹೆಚ್ಚು ತಲ್ಲೀನರಾಗಿ ಸರ್ಕಾರದ ಅಧಿಕಾರಕ್ಕೆ ಬುನಾದಿಯಾದ ಸ್ಥಳೀಯ ಆಡಳಿತ ವ್ಯವಸ್ಥೆಯ ಬಗ್ಗೆ ಎಚ್ಚರಿಕೆಯಿಂದ ಪರಿಶೀಲಿಸುವುದನ್ನು ಮರೆತಿದ್ದೇವೆ. ಈ ಕ್ಲಿಷ್ಟ ಅಂಶದ ಬಗ್ಗೆ ಈ ತಲೆಮಾರಿನ ವಿದ್ವಾಂಸರು ಗಮನ ಹರಿಸುತ್ತಿರುವುದು ಸಂತೋಷಕರ ಸಂಗತಿ. ವಿಜಯನಗರ ನಮ್ಮ ಇತಿಹಾಸದಲ್ಲಿ ವಹಿಸಿದ ಅಮೋಘ ಮತ್ತು ಜೀವಂತ ಪಾತ್ರವನ್ನು ಗಮನಿಸಿದರೆ ಅದರ ಮೇಲೆ ಬಂದಿರುವ ಕೃತಿಗಳು ಅಷ್ಟು ವಿಪುಲವಾಗಿಲ್ಲ. ವಿಜಯನಗರ ಸಾಮ್ರಾಜ್ಯದ ಸ್ಥಳೀಯ ಸರ್ಕಾರದ ರಚನೆ ಮತ್ತು ಕಾರ್ಯನಿರ್ವಹಣೆಗಳಂಥ ವಿಷಯಗಳ ಬಗ್ಗೆ ಇರುವ ವಿಶಿಷ್ಟ ಸ್ವರೂಪದ ಕೃತಿಗಳು ಇನ್ನೂ ವಿರಳ. ದೀರ್ಘಕಾಲದಿಂದ ಕೊರತೆಯನ್ನನುಭವಿಸುತ್ತಿದ್ದ ಇಂಥ ವಿಷಯದ ಅಧ್ಯಯನವನ್ನು ಇತಿಹಾಸ ವಿಭಾಗದ ಡಾ. ಎ. ವಿ. ವೆಂಕಟರತ್ನಂ ಅವರು ಕೈಗೊಂಡರೆಂದು ತಿಳಿಸಲು ತುಂಬಾ ಸಂತೋಷವಾಗುತ್ತದೆ.

ಭಾರತದ ಆಡಳಿತ ವ್ಯವಸ್ಥೆ ಪ್ರಧಾನವಾಗಿ ವ್ಯವಸಾಯ ಜೀವನದ ಆಧಾರ ಹೊಂದಿದ್ದು ಯಾವಾಗಲೂ ಆಡಳಿತ ವಿಕೇಂದ್ರೀಕರಣದತ್ತ ವಾಲುವುದೇ ಹೆಚ್ಚು. ಇಲ್ಲಿನ ಗ್ರಾಮಗಳು, ಅಗ್ರಹಾರಗಳು, ದೇವಸ್ಥಾನಗಳು ಮತ್ತು ಮಠಗಳು ಬಹುಮಟ್ಟಿಗೆ ಸಂಪೂರ್ಣ ಸ್ವಾಯತ್ತತೆಯನ್ನು ಅನುಭವಿಸುತ್ತಿದ್ದವು. ಭಾರತದಲ್ಲಿ ಬ್ರಿಟಿಷ್ ಆಡಳಿತ ಪದ್ಧತಿ ಜಾರಿಗೆ ಬರುವುದಕ್ಕೆ ಬಹು ಮುಂಚೆಯೆ ಈ ದೇಶದಲ್ಲಿ ಗ್ರಾಮಗಳು ಮತ್ತು ಪಟ್ಟಣಗಳಿಗೆ ಸ್ವಯಮಾಡಳಿತವನ್ನು ನೀಡಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ರಾಜ್ಯದ ಆಡಳಿತ ಪದ್ಧತಿಯೊಂದು ರೂಪುಗೊಂಡಿತ್ತೆಂಬ ಅಂಶವನ್ನು ಪಾಶ್ಚಾತ್ಯ ವಿಮರ್ಶಕರು ಅಲಕ್ಷಿಸಿದ್ದಾರೆ. ನಮ್ಮ ಕೆಲವು ಭಾರತೀಯ ವಿದ್ವಾಂಸರು ಐತಿಹಾಸಿಕ ದಾಖಲೆಗಳನ್ನು ಸರಿಯಾಗಿ ಪರಿಶೀಲಿಸದೆ ಈ ವ್ಯಾಖ್ಯಾನದ ಬಲೆಗೆ ಬಿದ್ದು ಸ್ವಯಮಾಡಳಿತ ಸರ್ಕಾರ ಸ್ವದೇಶೀಯವಾದುದೋ ಅಥವಾ ಭಾರತಕ್ಕೆ ಬ್ರಿಟಿಷರ ಕೊಡುಗೆಯೋ ಎಂದು ಸಂದೇಹ ವ್ಯಕ್ತಪಡಿಸಿದ್ದಾರೆ. ಚೋಳರ ಕಾಲದಲ್ಲಿ ಬಹು ಉತ್ತಮ ಮಾದರಿಯ ಸ್ಥಳೀಯ ಸ್ವಯಮಾಡಳಿತ ಸರ್ಕಾರ ಭಾರತದಲ್ಲಿ ಅಸ್ತಿತ್ವದಲ್ಲಿ ಇತ್ತೆಂಬ ಅಭಿಪ್ರಾಯವನ್ನು ಈಗ ಇತಿಹಾಸಜ್ಞರು ಸಾಮಾನ್ಯವಾಗಿ ಒಪ್ಪಿಕೊಂಡಿದ್ದಾರೆ. ವಿಜಯನಗರ ಸಾಮ್ರಾಜ್ಯ ಹಿಂದೆ ಚೋಳರ ಅಧೀನದಲ್ಲಿದ್ದ ಪ್ರದೇಶಗಳಲ್ಲಷ್ಟೆ ಅಲ್ಲದೆ

ಕೃಷ್ಣಾ ನದಿಯ ದಕ್ಷಿಣಕ್ಕೆ ಸಮಗ್ರ ಪರ್ಯಾಯ ದ್ವೀಪದಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಿತ್ತು. ಆದುದರಿಂದ ಇಂಥ ಆಡಳಿತ ವ್ಯವಸ್ಥೆ ಚೋಳರ ಕಾಲದಲ್ಲಿ ಅಸ್ತಿತ್ವದಲ್ಲಿ ತ್ತೆಂಬುದು ಸ್ಪಷ್ಟವಾಗಿರುವುದರಿಂದ ತರುವಾಯದ ಕಾಲದಲ್ಲಿ ಅದು ಅಸ್ತಿತ್ವದಲ್ಲಿರಲಿಲ್ಲ ವೆಂದು ಸಂದೇಹಪಡಲು ಯಾವ ಕಾರಣವೂ ಇಲ್ಲ. ಶ್ರೀ ಕೆ. ವಿ. ಸುಬ್ರಹ್ಮಣ್ಯ ಅಯ್ಯರ್ ಮತ್ತು ಶ್ರೀ ಕೆ. ಎ. ನೀಲಕಂಠಶಾಸ್ತ್ರಿ ಅವರಂಥ ಕೆಲವು ವಿದ್ವಾಂಸರು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಈ ಸ್ಥಳೀಯ ಸಂಸ್ಥೆಗಳು ಅಸ್ತಿತ್ವದಲ್ಲಿದ್ದುದನ್ನು ಅಲ್ಲಗಳೆದರೂ ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಬಿ. ಎ. ಸಾಲೆತೊರೆ ಅವರಂಥ ಇತರ ವಿದ್ವಾಂಸರು ಆ ಕಾಲದಲ್ಲಿ ಅವು ಪ್ರವೃದ್ಧಮಾನವಾಗಿದ್ದವು ಎಂದು ದೃಢವಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಈ ವಿಷಯ ಚರ್ಚಾಸ್ಪದವಾಗಿದ್ದು ತಮ್ಮ ತಮ್ಮ ವಾದ ಗಳನ್ನು ಎರಡೂ ಕಡೆಯೂ ಭಾವಾವೇಶದಿಂದ ಮುಂದಿಟ್ಟರು. ಇದರಿಂದ ಸತ್ಯ ಸಂಗತಿ ಯನ್ನು ಮನಗಾಣಿಸುವಂಥ ಪ್ರಯತ್ನ ನಡೆಯಲಿಲ್ಲ. ಈ ವಿವಾದವನ್ನು ದೃಢವಾದ ಆಧಾರಗಳಿಂದ ಒಮ್ಮೆಗೇ ನಿರ್ಣಾಯಕವಾಗಿ ಬಗೆಹರಿಸುವ ಅಗತ್ಯ ಬಹಳವಿತ್ತು. ಈ ಕಾರ್ಯಕ್ಕಾಗಿ ತಿಳಿದಿರುವ ಎಲ್ಲ ದಾಖಲೆಗಳೊಂದಿಗೆ ಹೊಸ ದಾಖಲೆಗಳನ್ನು ಬಳಸಿ ಕೊಂಡು ಒಟ್ಟಾಗಿ ಒಂದು ಸಮಗ್ರ ಸಂಶೋಧನೆ ನಡೆಯಬೇಕಾಗಿತ್ತು. ಇಂಥ ಕಷ್ಟ ಸಾಧ್ಯ ಕಾರ್ಯದಲ್ಲಿ ಡಾ. ವೆಂಕಟರತ್ನಂ ಅವರು ಕೈಹಾಕಿ ಬಹು ಯಶಸ್ವಿಯಾಗಿ ಮುಗಿಸಿದ್ದಾರೆ.

ಡಾ. ವೆಂಕಟರತ್ನಂ ಅವರ ಈ ಸಮೀಕ್ಷೆಯಿಂದ ಸ್ಥಳೀಯ ಸಂಸ್ಥೆಗಳು ಚಾಲುಕ್ಯ-ಚೋಳರ ಕಾಲದಷ್ಟು ಉಚ್ಛ್ರಾಯ ಸ್ಥಿತಿಯಲ್ಲಿಲ್ಲದಿದ್ದರೂ ವಿಜಯನಗರ ಕಾಲದಲ್ಲಿ ಅವು ಜೀವಂತವಾಗಿದ್ದು ಕಾರ್ಯನಿರ್ವಹಿಸುತ್ತಿದ್ದವು ಎಂಬುದು ತಿಳಿಯುತ್ತದೆ. ಗ್ರಾಮಸಭೆಗಳು ವಿವಿಧ ಹೆಸರುಗಳಿಂದ ರೂಪುತಾಳಿ ಹಳ್ಳಿಗಳ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಆಡಳಿತ ವಿಷಯಗಳಲ್ಲಿ ಪರಿಣಾಮಕಾರಿ ಪಾತ್ರವಹಿಸುತ್ತಿದ್ದವು. ಹಾಗೆಯೆ ನಾಡು, ಮಹಾನಾಡುಗಳು ಗ್ರಾಮಗಳ ನಿರ್ದಿಷ್ಟ ಸಮೂಹಗಳ ಮೇಲೆ ಅಧಿಕಾರ ಪಡೆದಿದ್ದು ಸಮಾಜದ ಏಳಿಗೆಗಾಗಿ ಶ್ರಮಿಸುತ್ತಿದ್ದವು. ಪಟ್ಟಣಗಳಲ್ಲಿ ವಿವಿಧ ವೃತ್ತಿ ಸಂಘಗಳು ಮತ್ತು ಪುರಸಭೆಗಳು ನಾಗರಿಕರ ಜೀವನ ವ್ಯವಸ್ಥೆಯ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಈ ಸಭೆಗಳಲ್ಲಿ ಚರ್ಚೆ ನಡೆಯುತ್ತಿದ್ದುದು ತೀರ್ಮಾನ ಕೈಗೊಳ್ಳು ತ್ತಿದ್ದುದು ತುಂಬಾ ಗಮನಾರ್ಹ. ನಮ್ಮ ಲೇಖಕರು ಆಗಿನ ಸಂಘ ವ್ಯವಸ್ಥೆ ಪ್ರಶಂಸನೀಯವಾದುದೆಂದು ಮತ್ತು ಸ್ಥಳೀಯ ಸಂಘಗಳು ತಮ್ಮ ಧೋರಣೆ ರೂಪಿಸುವಲ್ಲಿ ಸಾರ್ವಜನಿಕ ಅಭಿಪ್ರಾಯ ಮುಖ್ಯ ಸಾಧನವಾಗಿತ್ತೆಂದು ನಿರ್ಣಯಿಸುತ್ತಾರೆ. ಆದರೆ ಈ ನಿರ್ಣಯ ತೀವ್ರ ಪರಿಶೀಲನೆಗೆ ಯೋಗ್ಯವಾಗಿದೆ; ಇದು ತುಸು ಆಧುನೀಕರಣ ಗೊಂಡಂತೆ ತೋರುತ್ತದೆ. ಆಗಿನ ಕಾಲದಲ್ಲಿದ್ದ ಗ್ರಾಮ ಮತ್ತು ಪಟ್ಟಣಗಳ ಸಮಸ್ಯೆಗಳು ಬಹು ಸರಳ ಸ್ವರೂಪದವು. ಜಾತಿ ಪದ್ಧತಿಯ ಸಾಮಾಜಿಕ ವ್ಯವಸ್ಥೆ ಜನರಲ್ಲಿ ಶಿಸ್ತನ್ನು ಮೂಡಿಸಿತ್ತು ಮತ್ತು ಪ್ರತಿ ನಾಗರಿಕನಿಗೂ ಒಳಿತು ಕೆಡಕುಗಳನ್ನು ಅರಿತು ನಡೆಯಲು

'ಧರ್ಮ'ದ ನಿಯಮ ನೈತಿಕ ಬುನಾದಿಯಾಗಿತ್ತು. ಆದ್ದರಿಂದ ನಾವು ಆ ಕಾಲದಲ್ಲಿ ಸಾರ್ವಜನಿಕ ಅಭಿಪ್ರಾಯಕ್ಕೆ ಸೂಕ್ತ ಮಾನ್ಯತೆ ನೀಡಲಾಗಿತ್ತೆಂದು ಮಾತ್ರ ಒಪ್ಪಬಹುದು.

ಒಟ್ಟನಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿದ್ದ ಸ್ಥಳೀಯ ಸಂಸ್ಥೆಗಳ ರಚನೆ, ರೂಪ ಮತ್ತು ಕಾರ್ಯನಿರ್ವಹಣೆ–ಇವುಗಳ ಬಗೆಗಿನ ಈ ಅಧ್ಯಯನ ಒಂದು ಅಮೂಲ್ಯ ಕಾಣಿಕೆಯಾಗಿದೆ. ಇದರಲ್ಲಿರುವ ಸರಳವಾದ, ವಿಮರ್ಶಾತ್ಮಕವಾದ, ವಿಶ್ಲೇಷಣಾತ್ಮಕವಾದ ಮತ್ತು ವ್ಯಾಖ್ಯಾತ್ಮಕವಾದ ದೃಷ್ಟಿ ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ. ಇದು ವಿದ್ವಾಂಸರಿಗೆ ಮಾತ್ರವಲ್ಲದೆ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಆಸಕ್ತಿಕರ ವಿಷಯವಾಗಿದೆ. ಹುದುಗಿಹೋಗಿದ್ದ ವಿಷಯದ ಬಗ್ಗೆ ಹೊಸ ಬೆಳಕನ್ನು ಚೆಲ್ಲುವ ಕಾರ್ಯವನ್ನು ಕೈಗೊಂಡ ಡಾ. ವೆಂಕಟರತ್ನಂ ಅವರಿಗೆ ನಮ್ಮ ಆತ್ಮೀಯ ವಂದನೆಗಳು ಸಲ್ಲುತ್ತವೆ. ಅವರ ಈ ಉನ್ನತ ಕೃತಿಯನ್ನು ಕನ್ನಡದಲ್ಲಿ ಹೊರತರುತ್ತಿರುವುದು ಸಂತೋಷದ ಸಂಗತಿ. ಈ ಕೃತಿಯನ್ನು ಕನ್ನಡದಲ್ಲಿ ಪ್ರಕಟಿಸುತ್ತಿರುವುದರಿಂದ ಕನ್ನಡ ಭಾಷೆಯ ಆಯಾಮ ಹೆಚ್ಚುವುದಲ್ಲದೆ ನಮ್ಮ ಗತಕಾಲದ ಭವ್ಯ ಪರಂಪರೆಯನ್ನು ಜನರಿಗೆ ತಿಳಿಸಲು ನೆರವಾಗುತ್ತದೆ. ಇಂಥ ಸ್ತುತ್ಯ ಕಾರ್ಯವನ್ನು ಕೈಗೊಂಡಿರುವ ಕನ್ನಡ ಅಧ್ಯಯನ ಸಂಸ್ಥೆಗೂ ನಮ್ಮ ವಂದನೆಗಳು ಸಲ್ಲುತ್ತವೆ.

**ಬಿ. ಷೇಕ್ ಅಲಿ.**
ವಿಭಾಗ ಸಂಪಾದಕ

# ಅರಿಕೆ

ಪ್ರಾಚೀನ ಭಾರತದ ರಾಜಕೀಯ ಸಂಸ್ಥೆಗಳನ್ನು ಅಧ್ಯಯನ ಮಾಡುವವರಿಗೆ ಚೋಳರ ಸ್ಥಳೀಯ ಸಭೆಗಳ ಪ್ರಜಾಪ್ರಭುತ್ವ ಲಕ್ಷಣಗಳು ಯಾವಾಗಲೂ ಆಕರ್ಷಣೀಯ ವಾಗಿರುತ್ತವೆ. ಚೋಳರ ಕಾಲದ ಸ್ವಾಯತ್ತ ಸಂಸ್ಥೆಗಳನ್ನು ಅಧ್ಯಯನ ಮಾಡುವಾಗ ಅದು ಸ್ಥಳೀಯ ಸ್ವಯಮಾಡಳಿತ ಸರ್ಕಾರದ ಸುವರ್ಣ ಯುಗವೆಂದು ಬಗೆಯುತ್ತೇವೆ. ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ತರುವಾಯದ ಕಾಲವನ್ನು–ಉದಾಹರಣೆಗೆ, ವಿಜಯನಗರ ಸಾಮ್ರಾಜ್ಯದ ಕಾಲವನ್ನು–ಕ್ಷೀಣತೆಯ ಮತ್ತು ಅವನತಿಯ ಕಾಲವೆಂದು ಪರಿಗಣಿಸಲಾಗಿತ್ತು. ವಿಜಯನಗರದ ಸ್ಥಳೀಯ ಸಂಸ್ಥೆಗಳನ್ನು ಅವುಗಳ ಸ್ವಾಯತ್ತತಾ ಲಕ್ಷಣಗಳಲ್ಲಿ ಚಾಲುಕ್ಯ–ಚೋಳರ ಕಾಲದಲ್ಲಿದ್ದ ಹಿಂದಿನ ಅಂಥವೇ ಸಂಸ್ಥೆಗಳೊಂದಿಗೆ ಹೋಲಿಸಲು ಸಾಧ್ಯವಿಲ್ಲ. ಆದರೆ ಆ ಸಂಸ್ಥೆಗಳು ವಿಜಯನಗರ ಕಾಲದಲ್ಲಿ ಇನ್ನೂ ಜೀವಂತವಾಗಿದ್ದವು ಮತ್ತು ಕ್ರಿಯಾತ್ಮಕವಾಗಿದ್ದವು ಎಂಬುದೇ ನನ್ನ ಈ ಮಹಾ ನಿಬಂಧದ ವಿಷಯ.

ಈ ಕಾಲದಲ್ಲಿ ಗ್ರಾಮಸಭೆಗಳು ವಿವಿಧ ಹೆಸರುಗಳಿಂದ ಕಾರ್ಯ ನಿರ್ವಹಿಸು ತ್ತಿದ್ದವು : ಅಂದರೆ, ಪ್ರಜೆ, ಹದಿನೆಂಟು ಜಾತಿ, ಹಲರು, ಮತ್ತು ಜಗತ್ ಇತ್ಯಾದಿ– ಇವೆಲ್ಲದರ ಅರ್ಥ ಸಮುದಾಯವೆಂದು. ಅಗ್ರಹಾರಗಳು ವಿಶಿಷ್ಟ ರೀತಿಯ ಹಳ್ಳಿ ಗಳಾಗಿದ್ದವು. ಅಲ್ಲಿ ಮಹಾಜನಗಳು ಸ್ವಯಮಾಡಳಿತದ ಅಧಿಕಾರಗಳನ್ನು ಪಡೆದಿದ್ದರು. ನಾಡಸಭೆಯು ಗ್ರಾಮಗಳ ನಿರ್ದಿಷ್ಟ ಗುಂಪಿನ ಮೇಲೆ ಅಧಿಕಾರ ಪಡೆದಿರುತ್ತಿತ್ತು. ಗ್ರಾಮದಲ್ಲಿ ಗ್ರಾಮಸಭೆ ಕಾರ್ಯ ನಿರ್ವಹಿಸುತ್ತಿದ್ದಂತೆ ಆದರ ಕ್ಷೇತ್ರದೊಳಗೆ ಅದು ಕಾರ್ಯ ನಿರ್ವಹಿಸುತ್ತಿತ್ತು. ಪಟ್ಟಣಗಳು ಮತ್ತು ನಗರಗಳು ಅವುಗಳದೇ ಆದ ಸಭೆಗಳನ್ನು ಪಡೆದಿದ್ದು ಅವು ಸ್ಥಳೀಯ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರದ ತೀರ್ಮಾನಗಳ ಮೇಲೆ ಪ್ರಭಾವಬೀರುತ್ತಿದ್ದವು. 'ದೇವಸ್ಥಾನಗಳು ಮತ್ತು ಮಠಗಳು' ಎಂಬ ಪುರವಣಿ, ತಿರುಪತಿ ದೇವಾಲಯ ಮತ್ತು ಶೃಂಗೇರಿ ಮಠ–ಈ ಎರಡು ಪ್ರಾತಿನಿಧಿಕ ಸಂಸ್ಥೆಗಳು ಹೇಗೆ ತಮ್ಮ ಸ್ವಯಮಾಡಳಿತ ಸಂಸ್ಥೆಗಳನ್ನು ಬೃಹತ್ತಾಗಿ ಬೆಳೆಸಿಕೊಂಡಿದ್ದವು ಎಂಬುದನ್ನು ತೋರಿಸುತ್ತದೆ. ಇದರಿಂದ ಈ ವರ್ಗಕ್ಕೆ ಸೇರಿದ ಸಂಸ್ಥೆಗಳ ಚಟುವಟಿಕೆ ಗಳನ್ನೂ ಕಾಣಬಹುದು.

ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ. ಹಾ. ಮಾ. ನಾಯಕ ಅವರು ನಮಗೆ ಯಾವಾಗಲೂ ಸ್ಫೂರ್ತಿಯಸೆಲೆಯಾಗಿದ್ದಾರೆ. ಅವರು ತೋರಿಸಿದ ಆಸಕ್ತಿಯಿಂದ ಈ ಕೃತಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಕಟವಾಯಿತು. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಇಂಗ್ಲಿಷಿನಲ್ಲಿ ಈ ಕೃತಿ ರಚನೆಯ ಪ್ರತಿಯೊಂದು ಹಂತದಲ್ಲೂ ಅವಿರತವಾಗಿ ನೆರವು ನೀಡಿದ ಪ್ರೊ. ಜಿ. ಎಸ್. ದೀಕ್ಷಿತ್ ಅವರಿಗೆ ನಾನು

ತುಂಬಾ ಆಭಾರಿಯಾಗಿದ್ದೇನೆ. ಡಾ. ಬಿ. ಷೇಕ್ ಅಲಿ ಅವರು ಈ ಗ್ರಂಥ ರಚನೆಯಲ್ಲಿ ಆಸಕ್ತಿ ವಹಿಸಿ ಪ್ರೋತ್ಸಾಹಕರವಾದ ಮಾತುಗಳನ್ನು ಬರೆದುಕೊಟ್ಟಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲುತ್ತವೆ. ಶ್ರೀ ಪ್ರಧಾನ್ ಗುರುದತ್ತ ಅವರು ಅನೇಕ ಅಮೂಲ್ಯ ಸಲಹೆಗಳನ್ನು ನೀಡಿದ್ದಾರೆ; ಶ್ರೀ ಡಿ. ಎಸ್. ಜಯಪ್ಪಗೌಡ ಅವರು ಹಸ್ತಪ್ರತಿಯನ್ನು ಪರಿಶೀಲಿಸಿ ಮುದ್ರಣಕ್ಕೆ ಸಿದ್ಧಪಡಿಸಿದ್ದಾರೆ; ಶ್ರೀಮತಿ ಭ್ರಮರಾ ರತ್ನಂ ಅವರು ಹಸ್ತಪ್ರತಿಯನ್ನು ಸಿದ್ಧಪಡಿಸುವುದರಲ್ಲಿ ನೆರವಾಗಿದ್ದಾರೆ; ಮತ್ತು ಕುಮಾರಿ ವಿ. ಜಯಶ್ರೀ ಅವರು ವಿಷಯ ಸೂಚಿಯನ್ನು ರಚಿಸಿದ್ದಾರೆ–ಇವರೆಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಮೈಸೂರು

ಎ. ವಿ. ವೆಂಕಟರತ್ನಂ

## ಪರಿವಿಡಿ

ಅಧ್ಯಾಯ ೧

# ಕೇಂದ್ರ ಸರ್ಕಾರ

**ಪೀಠಿಕೆ**

ವಿಜಯನಗರ ಸಾಮ್ರಾಜ್ಯದಲ್ಲಿದ್ದ ಸ್ಥಳೀಯ ಸರ್ಕಾರದ ರಚನೆ ಮತ್ತು ಅದು ಕೆಲಸಮಾಡುತ್ತಿದ್ದ ರೀತಿಯ ಅಧ್ಯಯನವೇ ಈ ಪ್ರಬಂಧದ ವಿಷಯ. ಇದು ವಿವಾದಾಸ್ಪದವಾದ ವಿಷಯವಾಗಿದೆ. ಕೆ. ವಿ. ಸುಬ್ರಹ್ಮಣ್ಯ ಅಯ್ಯರ್, ಕೆ. ಎ. ನೀಲಕಂಠಶಾಸ್ತ್ರಿ ಮುಂತಾದ ಹಲವು ವಿದ್ವಾಂಸರು ವಿಜಯನಗರ ಕಾಲದಲ್ಲಿ ಸ್ವಯಂ ಆಡಳಿತ ನಡೆಸುತ್ತಿದ್ದ ಸ್ಥಳೀಯ ಸಂಸ್ಥೆಗಳು ಅಸ್ತಿತ್ವದಲ್ಲಿ ಇರಲಿಲ್ಲವೆಂಬ ಅಭಿಪ್ರಾಯಹೊಂದಿದ್ದಾರೆ. ಆದರೆ ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್, ಬಿ.ಎ., ಸಾಲತೂರ್ ಮುಂತಾದ ವಿದ್ವಾಂಸರು, ಆ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳು ಅಸ್ತಿತ್ವದಲ್ಲಿದ್ದು ಉಚ್ಛ್ರಾಯಸ್ಥಿತಿಯಲ್ಲಿದ್ದುವೆಂದೂ ಮತ್ತು ವಿಜಯನಗರ ಸಾಮ್ರಾಟರು ಅವುಗಳಿಗೆ ಉತ್ತೇಜನ ನೀಡುತ್ತಿದ್ದರೆಂದೂ ಅಭಿಪ್ರಾಯಪಟ್ಟಿದ್ದಾರೆ. ಟಿ. ವಿ. ಮಹಾಲಿಂಗಂರವರು, ಕ್ರಿ.ಶ. ೧೫ ಮತ್ತು ೧೬ ನೆಯ ಶತಮಾನಗಳಲ್ಲಿನ ಗ್ರಾಮ ಗಣರಾಜ್ಯಗಳು ಅವನತಿಹೊಂದುವ ಮತ್ತು ಅಳಿಸಿಹೋಗುವ ಚಿನ್ಹೆಗಳನ್ನು ತೋರುವುವೆಂದೂ, ವಿಜಯನಗರ ಸಾಮ್ರಾಜ್ಯದ ಕಡೆಗಾಲದಲ್ಲಿ ಸ್ಥಳೀಯ ಸಂಸ್ಥೆಗಳು ಇದ್ದುದಕ್ಕೆ ದಾಖಲೆಗಳಿದ್ದರೂ ಅವು ಆ ವೇಳೆಗೆ ತಮ್ಮ ಚೈತನ್ಯವನ್ನು ಕಳೆದುಕೊಂಡಿದ್ದವೆಂದೂ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಎ. ಕೃಷ್ಣಸ್ವಾಮಿಯವರು ವಿಜಯನಗರ ಸಾಮ್ರಾಟರು ಅಸ್ತಿತ್ವದಲ್ಲಿದ್ದ ಸ್ಥಳೀಯ ಸಂಸ್ಥೆಗಳನ್ನು ಮುಂದುವರಿಸಿದರೆಂದೂ ಆದರೆ ಅವುಗಳ ಬೆಳವಣಿಗೆಗೆ ಉತ್ತೇಜನ ನೀಡಲಿಲ್ಲವೆಂದೂ ತಿಳಿಸುತ್ತಾರೆ. ಈ ಭಿನ್ನಾಭಿಪ್ರಾಯಗಳ ಸತ್ಯಾಂಶವನ್ನು ಮತ್ತು ಸ್ಥಳೀಯ ಸಂಸ್ಥೆಗಳ ರೀತಿಯನ್ನು ತಿಳಿಯಲು ಅವುಗಳ ಪೂರ್ಣ ವಿಶ್ಲೇಷಣೆ ಆವಶ್ಯಕ.

ಕ್ರಿ. ಶ. ಹದಿನಾಲ್ಕನೆಯ ಶತಮಾನದ ಮೂರನೆಯ ದಶಕದಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಇತಿಹಾಸದಲ್ಲಿ ಒಂದು ನವೀನ ಅಧ್ಯಾಯವನ್ನು ಆರಂಭಿಸಿತು. ಕ್ರಿ.ಶ. ೧೫೬೫ ರ ಜನವರಿ ೨೩ ರಂದು ತಾಳೀಕೋಟೆ ಕದನದಲ್ಲಿ ಬಿಜಾಪುರ, ಅಹಮದ್‌ನಗರ, ಗೋಲ್ಕೊಂಡ ಮತ್ತು ಬಿದರೆ ಸುಲ್ತಾನರ ಸಂಯುಕ್ತ ಸೈನ್ಯವು ವಿಜಯನಗರ ಸೈನ್ಯವನ್ನು ಸಂಪೂರ್ಣವಾಗಿ ನಾಶಮಾಡಿತು. ಆ ದುರಂತವು ದಕ್ಷಿಣ ಭಾರತದ ಇತಿಹಾಸವನ್ನೇ ಬದಲಾಯಿಸಿತು. ಈ ಕಾರಣದಿಂದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಿಂದ ಕ್ರಿ.ಶ. ೧೫೬೫ ರವರೆಗೆ ವಿಜಯನಗರ ಸಾಮ್ರಾಜ್ಯದ ಸ್ಥಳೀಯ ಸಂಸ್ಥೆಗಳ ಅಧ್ಯಯನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ತಾಳೀಕೋಟೆ ಕದನದ ನಂತರ, ಅರವೀಡು ಮನೆತನದ ಅರಸರು ವಿಜಯನಗರ

ಸಾಮ್ರಾಜ್ಯದ ಆಳ್ವಿಕೆಯನ್ನು ಸುಮಾರು ಮತ್ತೊಂದು ಶತಮಾನ ಮುಂದುವರಿಸಿ, ಸಾಮ್ರಾಜ್ಯವು ಸಂಪೂರ್ಣವಾಗಿ ಛಿದ್ರವಾಗುವುದನ್ನು ತಪ್ಪಿಸಿದರು. ಆದರೆ ಸಾಮ್ರಾಜ್ಯವು ತನ್ನ ಮುಂಚಿನ ಉಚ್ಛ್ರಾಯಸ್ಥಿತಿಗೆ ಬರಲಿಲ್ಲ. ಈ ಪ್ರಬಂಧದಲ್ಲಿ ಕ್ರಿ.ಶ. ೧೫೬೫ ರ ವರೆಗಿನ ಸ್ಥಳೀಯ ಸಂಸ್ಥೆಗಳನ್ನು ಚರ್ಚಿಸಿದ್ದರೂ ಅರವೀಡು ಮನೆತನದ ಕಾಲವನ್ನು ಸಂಪೂರ್ಣವಾಗಿ ಕಡೆಗಣಿಸಿಲ್ಲ.

ಈ ಪ್ರಬಂಧವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಒಂದನೆಯ ಅಧ್ಯಾಯದಲ್ಲಿ, ಸ್ಥಳೀಯ ಸಂಸ್ಥೆಗಳ ಅಧ್ಯಯನಕ್ಕೆ ಆಧಾರಗಳು ಮತ್ತು ಹಿನ್ನೆಲೆಯಾಗಿ ಕೇಂದ್ರ ಸರ್ಕಾರದ ಸಂಕ್ಷಿಪ್ತ ವಿಮರ್ಶೆಕೊಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ, ಅಧಿಕೃತ ಮತ್ತು ಊಳಿಗಮಾನ್ಯ ಪದ್ಧತಿಯ ಪ್ರಾಂತ್ಯ ಸರ್ಕಾರದ ವಿವರಣೆಯನ್ನು ಕೊಡಲಾಗಿದೆ. ವಿಜಯನಗರ ಸಾಮ್ರಾಜ್ಯದ ರಾಜಕೀಯ ವಿಭಾಗಗಳು ಅವುಗಳ ವ್ಯವಸ್ಥೆ ಮತ್ತು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿಲ್ಲದಿದ್ದ ಕೆಳದಿ ಮತ್ತು ಮದುರೆ ಪಾಳೆಯಗಾರರ ಉದಾಹರಣೆಗಳೊಡನೆ ಊಳಿಗಮಾನ್ಯ ಪದ್ಧತಿಯನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯವು ಗ್ರಾಮ ಮತ್ತು ಅಗ್ರಹಾರಗಳಿಗೆ ಸಂಬಂಧಿಸಿದುದಾಗಿದೆ. ಗ್ರಾಮಸಭೆಗಳು, ಗ್ರಾಮಕಾರ್ಯಶಾಖೆ ಮತ್ತು ಗ್ರಾಮಸಭೆಗಳ ಕರ್ತವ್ಯಗಳನ್ನು, ಹಲವು ಗ್ರಾಮಸಭೆಗಳ ಚಟುವಟಿಕೆಗಳೊಡನೆ ಚರ್ಚಿಸಲಾಗಿದೆ. ಅಗ್ರಹಾರಗಳ ರಚನೆ, ಅವುಗಳ ಅಧಿಕಾರಿ ವರ್ಗ, ಅಗ್ರಹಾರದಲ್ಲಿದ್ದ ಮಹಾಜನ ಸಭೆ ಮತ್ತು ಅದರ ಕರ್ತವ್ಯಗಳನ್ನು ವಿವರಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಕುಡುವಳ್ಳಿ ಅಗ್ರಹಾರದ ಚರಿತ್ರೆಯನ್ನು, ಉಪೇಂದ್ರಪುರ, ನರಸಿಂಹ ಚತುರ್ವೇದಿಮಂಗಳ ಮತ್ತು ಕಳಸದ ಮಹಾಜನಸಭೆಗಳ ಚಟುವಟಿಕೆಗಳನ್ನು ತಿಳಿಸಲಾಗಿದೆ. ಸ್ಥಳೀಯ ಆಡಳಿತದಲ್ಲಿ ದೇವಸ್ಥಾನಗಳು ಮತ್ತು ಮಠಗಳು ಪಾತ್ರಹೊಂದಿದ್ದುವು. ಇದನ್ನು ತಿರುಪತಿ ದೇವಸ್ಥಾನ ಮತ್ತು ಶೃಂಗೇರಿ ಮಠ ಇವುಗಳ ಆಡಳಿತದ ಉದಾಹರಣೆಗಳಿಂದ ಪುರವಣಿಯಲ್ಲಿ ವಿವರಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ, ಮಹಾನಾಡು ಮತ್ತು ನಾಡು ಸಭೆಗಳ ವಿವರಗಳನ್ನು ಕೊಡಲಾಗಿದೆ. ನಾಡು ಸಭೆಯ ಅಧಿಕಾರವರ್ಗ, ಅವರ ಸಂಭಾವನೆ ಮತ್ತು ಕರ್ತವ್ಯಗಳನ್ನು ತಿಳಿಸಲಾಗಿದೆ. ಈ ಅಧ್ಯಾಯದ ಕೊನೆಗೆ ಪ್ರತಿನಿಧಿ ಸಂಸ್ಥೆಗಳನ್ನು ಹೊಂದಿದ್ದ ಆರಗ-೧೮ ಕಂಪಣಗಳ ಸಭೆಗಳ ಚಟುವಟಿಕೆಗಳನ್ನು ವಿವರಿಸಲಾಗಿದೆ. ಐದನೆಯ ಅಧ್ಯಾಯವು, ಪಟ್ಟಣಗಳು ಮತ್ತು ಶ್ರೇಣಿಗಳಿಗೆ ಸೇರಿದುದು. ವಿಜಯನಗರ ಮತ್ತು ಇತರ ಕೆಲವು ಪಟ್ಟಣಗಳನ್ನು ಉದಾಹರಿಸಿ, ಪಟ್ಟಣಗಳ ರಚನೆ ಮತ್ತು ಬೆಳವಣಿಗೆ, ಪೌರಸಭೆಗಳು, ಅವುಗಳ ಅಧಿಕಾರವರ್ಗ ಮತ್ತು ಕರ್ತವ್ಯಗಳು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಶ್ರೇಣಿಗಳು, ಇತರ ಹಲವು ಶ್ರೇಣಿಗಳ ವಿವರಣೆ ಮತ್ತು ಪೌರ ಆಡಳಿತದಲ್ಲಿ ಅವುಗಳ ಪಾತ್ರವನ್ನು ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಈ ಅಧ್ಯಯನದ ಫಲಿತಾಂಶಗಳನ್ನು ಕೊಡಲಾಗಿದೆ.

## ಆಧಾರಗಳ ಸಮೀಕ್ಷೆ

**ಶಾಸನಗಳು :** ಈ ಅಧ್ಯಯನಕ್ಕೆ ಶಾಸನಗಳು ಅತ್ಯಂತ ನಂಬಿಕೆಗೆ ಅರ್ಹವಾದ ಆಧಾರವಾಗಿವೆ. ಇವು ಬಂಡೆಗಳು ಮತ್ತು ತಾಮ್ರದ ತಗಡುಗಳ ಮೇಲಿವೆ. ಅವುಗಳಲ್ಲಿ ಅನೇಕವು ದಾನದ ಉದ್ದಿಶ್ಯದಿಂದ ಮಾಡಿದ ಕೊಡುಗೆಗಳ ದಾಖಲೆಗಳಾಗಿವೆ. ಆದರೂ ದಾನಮಾಡಿದ ದಾಖಲೆಗಳು, ಅವರು ದಾನಿಗೆ ಮಾಫಿ ಮಾಡಿದ ತೆರಿಗೆಗಳು ಮತ್ತು ನೀಡಿದ ಹಕ್ಕುಗಳನ್ನು ತಿಳಿಸುತ್ತವೆ. ಅವು ಆಡಳಿತದ ರೂಪ ಮತ್ತು ಧೋರಣೆಗಳನ್ನು ತಿಳಿಸುತ್ತವೆ. ದಾನಿ, ದಾನ ಪಡೆದವರು ಮತ್ತು ದಾನ ನೀಡಿದ ವಿವರಗಳು ನಮ್ಮ ಅಧ್ಯಯನಕ್ಕೆ ಬಹಳ ಉಪಯುಕ್ತವಾಗಿವೆ. ದಾನಿಗಳು ರಾಜನಲ್ಲದೆ ಆತನ ಅಧಿಕಾರಿಗಳು ಅಥವಾ ಗ್ರಾಮಸಭೆ ಅಥವಾ ಮಹಾಜನ ಸಭೆ; ವ್ಯಾಪಾರಿಗಳ ಶ್ರೇಣಿಗಳು ಅಥವಾ ಸಾಮಾನ್ಯ ಜನರೂ ಆಗಿರಬಹುದು. ಪ್ರತಿಗ್ರಹಿಯು ಒಬ್ಬ ಮನುಷ್ಯ ಅಥವಾ ಒಂದು ಸಮೂಹ ಅಥವಾ ಒಂದು ಸಂಸ್ಥೆಯಾಗಿರಬಹುದು. ಶಾಸನಗಳಲ್ಲಿ ದಾನವಾಗಿ ಕೊಟ್ಟ ಹಣ, ತೆರಿಗೆಗಳು ಮತ್ತು ಭೂಮಿಯ ಎಲ್ಲೆಗಳ ವಿವರಗಳು ದೊರಕುತ್ತವೆ. ದಾನ ಶಾಸನಗಳು ಸೀಮೆ ಅಥವಾ ನಾಡು, ಗ್ರಾಮ, ಅಗ್ರಹಾರ, ನಗರ ಅಥವಾ ಪಟ್ಟಣ ಮುಂತಾದ ಆಡಳಿತ ವಿಭಾಗಗಳನ್ನು ತಿಳಿಸುತ್ತವೆ. ಶಾಸನಗಳು ನಾನಾ ಆಡಳಿತ ವಿಭಾಗಗಳಲ್ಲಿದ್ದ ಜನಪ್ರಿಯ ಸಭೆಗಳು, ಅವುಗಳ ಅಧಿಕಾರ ವರ್ಗ, ಅವುಗಳಲ್ಲಿದ್ದ ಸಭೆಗಳು ಮತ್ತು ಅವುಗಳ ಕರ್ತವ್ಯವನ್ನು ತಿಳಿಸುತ್ತವೆ. ರೈಸ್‌ರವರು ಶಾಸನಗಳು ಆಡಳಿತದ ವಿವಿಧ ಲಕ್ಷಣಗಳನ್ನು ಮತ್ತು ವೈಶಿಷ್ಟ್ಯಗಳನ್ನು ತಿಳಿಸುತ್ತವೆ ಎಂದು ಹೇಳಿರುವುದು ಸತ್ಯದ ಮಾತು.[1]

**ಸಾಹಿತ್ಯ :** ಸಾಹಿತ್ಯದ ರುಜುವಾತು ಮತ್ತೊಂದು ಮುಖ್ಯ ಆಧಾರ. ಇದರಲ್ಲಿ ದೇಶೀಯರ ಮತ್ತು ವಿದೇಶೀಯರ ಬರವಣಿಗೆಗಳು ಸೇರಿವೆ. ವಿಜಯನಗರದ ಅರಸರು ತಮ್ಮ ಶಾಸನಗಳಲ್ಲಿ "ಪೂರ್ವದ ಮರ್ಯಾದೆ"ಯನ್ನು ಅವಲಂಬಿಸುವವರೆಂದು ಹೇಳಿರುವುದರಿಂದ, ವಿಜಯನಗರ ಕಾಲದ ಮುಂಚಿನ ಸಾಹಿತ್ಯವು ನಮಗೆ ಬೆಲೆಯುಳ್ಳದ್ದಾಗಿದೆ. ಸ್ಥಳೀಯ ಸರ್ಕಾರದಲ್ಲಿ ಶ್ರೇಣಿಗಳ ಪಾತ್ರದ ಅಧ್ಯಯನಕ್ಕೆ ವಿಜ್ಞಾನೇಶ್ವರರ "ಮಿತಾಕ್ಷರ", ಹಾಗೂ ರಾಜ್ಯಾಡಳಿತ ಕ್ರಮದ ಅಧ್ಯಯನಕ್ಕೆ ಮುಮ್ಮಡಿ ಸೋಮೇಶ್ವರನ "ಮಾನಸೋಲ್ಲಾಸ" ಎಂಬ ವಿಶ್ವಕೋಶ ಉಪಯುಕ್ತವಾಗಿವೆ. ಮೊದಲನೆಯ ಬುಕ್ಕನ ಮಂತ್ರಿ ಮಾಧವ, ಪರಾಶರದ ಕೃತಿಗೆ ಬರೆದ "ಪರಾಶರ ಮಾಧವೀಯ" ಎಂಬ ವ್ಯಾಖ್ಯಾನವು, ರಾಜಧರ್ಮ, ಕಾನೂನು, ನೀತಿಶಾಸ್ತ್ರ ಮತ್ತು ಮತಗಳ ಅಧ್ಯಯನಕ್ಕೆ ಆವಶ್ಯಕ.[2] ಕೃಷ್ಣದೇವರಾಯ ಸಾಮ್ರಾಟನು ಬರೆದ ತೆಲಗು ಕಾವ್ಯ

---

1. Rice, Lewis B. : *Mysore and Coorg from the Inscriptions* (London, 1909), p. 184.
2. *Parasara-Madhaviya*, edited by Venkanna, Chincholi (Bangalore, 1890) pp. 259-279.

"ಆಮುಕ್ತಮಾಲ್ಯದ", ಆತನು ಆಡಳಿತದಲ್ಲಿ ಅಭ್ಯಸಿಸಿದ ತತ್ವಗಳನ್ನು ಪ್ರತಿಪಾದಿಸಿದೆ. ಕ್ರಿ.ಶ. ೧೫೦೮ ರಲ್ಲಿ ಭಾಸ್ಕರಾಚಾರ್ಯರು ಬರೆದ ತೆಲುಗು ಪದ್ಯ ಕಾವ್ಯ "ವೈಶ್ಯ ಪುರಾಣಮು" ಪಟ್ಟಣಗಳ ಮತ್ತು ಶ್ರೇಣಿಗಳ ಅಧ್ಯಯನಕ್ಕೆ ಆವಶ್ಯಕ. ದೇಶೀಯ ಸಾಹಿತ್ಯದ ವಿವರಗಳನ್ನು ಮದ್ರಾಸು ವಿಶ್ವವಿದ್ಯಾನಿಲಯ ಎರಡು ಸಂಪುಟಗಳಲ್ಲಿ ಪ್ರಕಟಿಸಿದೆ.[1]

ವಿದೇಶೀಯ ಬರಹವು ನಮಗೆ ಉಪಯುಕ್ತವಾಗಿದೆ. ಕ್ರಿ.ಶ. ೧೪೨೦ ಅಥವಾ ೧೪೨೧ ರಲ್ಲಿ ವಿಜಯನಗರಕ್ಕೆ ಬಂದ ಇಟಲಿ ದೇಶದ ಪ್ರವಾಸಿಗ ನಿಕೊಲೊ ಕಂಟಿ ಯೂರೋಪ್ ಖಂಡದಿಂದ ಬಂದವರಲ್ಲಿ ಮೊದಲಿಗ. ಪರ್ಶಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್ ವಿಜಯನಗರಕ್ಕೆ ಸುಮಾರು ಅದೇ ಕಾಲದಲ್ಲಿ ಬಂದನು. ರಷ್ಯಾ ದೇಶದ ವ್ಯಾಪಾರಿ ಅಥನೇಸಿಯಸ್ ನಿಕಿಟಿನ್ ಸುಮಾರು ಕ್ರಿ. ಶ. ೧೪೭೦ ರಲ್ಲಿ ದಕ್ಷಿಣ ಭಾರತದಲ್ಲಿ ಸ್ವಲ್ಪ ಕಾಲವಿದ್ದನು. ಕ್ರಿ. ಶ. ೧೬ ನೆಯ ಶತಮಾನದ ವಿಜಯನಗರದ ಚರಿತ್ರೆಗೆ ಪೋರ್ಚುಗೀಸ್ ಆಧಾರವು ಅತಿ ಮುಖ್ಯ. ದು ಆರ್ತೆ ಬಾರ್ಬೋಸ ಕ್ರಿ. ಶ. ೧೫೦೦ ರಿಂದ ಕ್ರಿ. ಶ. ೧೫೧೬ ರವರೆಗೆ ಭಾರತದಲ್ಲಿದ್ದನು ಮತ್ತು ನ್ಯೂನಿಜ್ಸ್ ಕ್ರಿ. ಶ. ೧೫೩೫ ರಿಂದ ೩೭ ರವರೆಗೆ ಮೂರು ವರ್ಷಗಳ ಕಾಲವನ್ನು ವಿಜಯನಗರದಲ್ಲಿ ಕಳೆದನು. ಇವರೆಲ್ಲರ ಬರವಣಿಗೆಗಳು ಆ ಕಾಲದ ಚರಿತ್ರೆಗೆ ಮಾತ್ರವೇ ಅಲ್ಲದೆ, ಆಡಳಿತ ಮತ್ತು ಸಮಾಜದ ಸ್ಥಿತಿಗತಿಗಳನ್ನು ತಿಳಿಯಲು ಆವಶ್ಯಕ.[2] ಮತ್ತೊಬ್ಬ ಪೋರ್ಚುಗೀಸ್ ಸಂದರ್ಶಕ ಪೈರ್ಸ್ ಕ್ರಿ. ಶ. ೧೫೧೧ ರಿಂದ ೧೫೧೮ ರ ಒಳಗೆ ಬರೆದಿದ್ದನ್ನು ಕ್ರಿ. ಶ. ೧೬ ನೆಯ ಶತಮಾನದ ಮಧ್ಯದಲ್ಲಿ ಪ್ರಕಟಿಸಿದನು.[3]

## ಕೇಂದ್ರ ಸರ್ಕಾರ

ಸ್ಥಳೀಯ ಸರ್ಕಾರದ ಅಧ್ಯಯನಕ್ಕೆ ಹಿನ್ನೆಲೆಯಾಗಿ ಕೇಂದ್ರ ಸರ್ಕಾರದ ಆಡಳಿತ ಯಂತ್ರದ ವಿವರಣೆಯು ಆವಶ್ಯಕ. ಎಸ್. ಕೆ. ಐಯ್ಯಂಗಾರ್‌ರವರು ವಿಜಯನಗರ ಸಾಮ್ರಾಜ್ಯದಲ್ಲಿ ಕೇಂದ್ರ ಮತ್ತು ಸ್ಥಳೀಯ ಸರ್ಕಾರಗಳ ಸಂಬಂಧವನ್ನು ಚರ್ಚಿಸಿ, ಆ ಸಾಮ್ರಾಜ್ಯದ ಸಾರ್ವಜನಿಕ ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳು ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ತಾವೇ ಆಡಳಿತವನ್ನು ನಡೆಸುತ್ತಿದ್ದರೆಂದೂ ಮತ್ತು ಅಧಿಕಾರಿಗಳು ಆವಶ್ಯಕವಾದಾಗ ಮಾತ್ರ ಪ್ರವೇಶಿಸುತ್ತಿದ್ದರೆಂದೂ ತಿಳಿಸಿದ್ದಾರೆ.[4]

---

1. (ಅ) Aiyangar, S. K.: *Sources of Vijayanagara History* (Madras, 1919).
   (ಆ) Nilakantasastri, K. A. and Venkataramanayya, N.: Further sources of Vijayanagara History (Madras, 1946).
2. Sewell, Robert: *A Forgotten Empire* (First Indian Ed. 1962).
3. Lach, Donald, F.: *India in the Eyes of Europe, The Sixteenth Century* (Chicago, 1968).
4. Aiyangar, S. K.: Some Contributions of South India to Indian Culture (Calcutta, 1923), pp. 301-2, 410-411.

ರಾಜತ್ವ: ಕೇಂದ್ರ ಸರ್ಕಾರದ ಅಧ್ಯಯನದಲ್ಲಿ ನಾವು ಮೊದಲು ರಾಜತ್ವವನ್ನು ಪರಿಶೀಲಿಸಬಹುದು. ವಿಜಯನಗರದ ಕಾಲದಲ್ಲಿ ಸಾಮ್ರಾಟನ ಪಟ್ಟಾಭಿಷೇಕ ಮಹೋತ್ಸವವನ್ನು ವಿಧಿವತ್ತಾಗಿ ಆಚರಿಸಲಾಗುತ್ತಿತ್ತು. ಇದರಿಂದ ಸಾಮ್ರಾಟನಿಗೆ ಆಳಲು ನ್ಯಾಯಬದ್ಧವಾದ ಹಕ್ಕು ದೊರೆಯುತ್ತಿತ್ತು. ಈ ವಿಷಯವನ್ನು ಆ ಕಾಲದ ವಿದೇಶೀಯ ಪ್ರವಾಸಿಗರ ಬರವಣಿಗೆ ಮತ್ತು ಶಾಸನಗಳು ಮನದಟ್ಟುಮಾಡಿಕೊಡುತ್ತವೆ. ಪಟ್ಟಾಭಿಷೇಕ ಮಹೋತ್ಸವದಲ್ಲಿ ಅಧಿಕಾರಿಗಳಲ್ಲದೆ ಅಧೀನ ರಾಜರು ಮತ್ತು ಸಮಾಜದ ಮುಖಂಡರು ಹಾಜರಿರುತ್ತಿದ್ದರು. ಕುಮಾರ ಧೂರ್ಜಟಿಯ "ಕೃಷ್ಣರಾಜ ವಿಜಯ"ದ ಪ್ರಕಾರ ಕೃಷ್ಣದೇವರಾಯನ ಪಟ್ಟಾಭಿಷೇಕದಲ್ಲಿ ಅನೇಕ ಅಧೀನ ರಾಜರು ಹಾಜರಿದ್ದರು.[1] ಪಟ್ಟಾಭಿಷೇಕ ಮಹೋತ್ಸವಕ್ಕೆ ರಾಜ್ಯಾಂಗದ ದೃಷ್ಟಿಯಿಂದ ವಿಶೇಷ ಮಹತ್ವವಿದ್ದು, ಅದಾದನಂತರ ರಾಜನು ತನ್ನ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದನು. ಕೃಷ್ಣದೇವರಾಯ ತಾನು ಬರೆದ "ಆಮುಕ್ತಮಾಲ್ಯದ"ದಲ್ಲಿ ರಾಜನ ಕರ್ತವ್ಯವನ್ನು ಕುರಿತು ಬರೆದಿದ್ದಾನೆ. ರಾಜನು ಬಹಳ ಎಚ್ಚರಿಕೆಯಿಂದ ಮತ್ತು ತನ್ನ ಸಾಮರ್ಥ್ಯದಿಂದ ದುಷ್ಟ ನಿಗ್ರಹವನ್ನು ಮತ್ತು ಶಿಷ್ಟಪರಿಪಾಲನೆಯನ್ನೂ ಮಾಡಬೇಕು, ಅಲ್ಲದೆ ಕಿರೀಟ ಧಾರಿಣಿಯಾದ ರಾಜನು ಧರ್ಮದಿಂದ ಆಳಿ ಯಶಸ್ಸನ್ನು ಗಳಿಸಬೇಕು.[2]

ಕೃಷ್ಣದೇವರಾಯನು, ರಾಜನ ಸಾಮಾನ್ಯ ನಡತೆಯ ವಿಷಯವಾಗಿ ಹಲವು ನಿಯಮಗಳನ್ನು "ಆಮುಕ್ತಮಾಲ್ಯ"ದಲ್ಲಿ ಬರೆದಿದ್ದಾನೆ. ರಾಜನು ರಾಜ್ಯತಂತ್ರದಲ್ಲಿ ನಿಪುಣರಾದವರ ಮೂಲಕ ಆಳಬೇಕು. ಪ್ರಜೆಗಳ ಮೇಲೆ ತೆರಿಗೆ ಸಾಧಾರಣವಾಗಿರಬೇಕು. ಶತ್ರುಗಳನ್ನು ಬಲಪ್ರಯೋಗದಿಂದ ಅಡಗಿಸಬೇಕು. ಪ್ರಜೆಗಳಲ್ಲಿ ಜಾತಿಗಳ ಬೆರಕೆಗೆ ಅವಕಾಶ ಕೊಡಕೂಡದು. ಎಂದು ತಿಳಿಸುತ್ತಾನೆ.[3] ರಾಜನು ಜಾತಿಗಳ "ಸ್ವಧರ್ಮ"ವನ್ನು ಕಾಪಾಡಲು "ಸಮಯಾಚಾರ್ಯ"ರೆಂಬ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ರಾಜ್ಯದಲ್ಲಿ ಮಠಗಳನ್ನು ನಡೆಸಿಕೊಂಡು ಬಂದು, ಅವುಗಳಿಗೆ ರಾಜರು ಧನ ಸಹಾಯ ಮಾಡುತ್ತಿದ್ದರು. ಪ್ರಜೆಗಳ ಆರ್ಥಿಕ ಏಳಿಗೆಗೆ ಗಮನ ಕೊಡುತ್ತಿದ್ದರು. ವ್ಯವಸಾಯಾಭಿವೃದ್ಧಿಗೆ ಹೊಸ ಗ್ರಾಮಗಳನ್ನು ಸ್ಥಾಪಿಸಿ ಹೊಸದಾಗಿ ಭೂಮಿಯನ್ನು ಸಾಗುವಳಿಗೆ ತರುತ್ತಿದ್ದರು. ನ್ಯಾಯಪರಿಪಾಲನೆ ರಾಜನ ಕರ್ತವ್ಯವಾಗಿದ್ದು ಆತನೇ ಶ್ರೇಷ್ಠ ನ್ಯಾಯಾಧೀಶನಾಗಿದ್ದನು.

ಯುವರಾಜ: ವಿಜಯನಗರ ಸಾಮ್ರಾಟರು ಆಡಳಿತ ಯಂತ್ರದ ಪರಿಚಯ ಹೊಂದಿರಲು ಸಾಮಾನ್ಯವಾಗಿ ತಮ್ಮ ಉತ್ತರಾಧಿಕಾರಿಗಳನ್ನು ನೇಮಿಸುತ್ತಿದ್ದರು.

---

1. Aiyangar. S. K.: Sources of Vijayanagara History (Madras, 1919), p. 129.
2. *Amuktamalyada*, Canto IV, translated by Rangasvami Sarasvati, in JIH., IV., p. iii, Verse 285.
3. JIH., IV, p iii, V, 270.

ಉತ್ತರಾಧಿಕಾರಿಗೆ ಯುವರಾಜನಾಗಿ ಪಟ್ಟಾಭಿಷೇಕ ಮಾಡುತ್ತಿದ್ದರು. ಎರಡನೆಯ ಹರಿಹರನ ಒಂದು ತಾಮ್ರ ಶಾಸನವು ಮೊದಲನೆಯ ಹರಿಹರನು ತನ್ನ ತಮ್ಮ ಬುಕ್ಕ ರಾಜನನ್ನು ಯುವರಾಜನನ್ನಾಗಿ ನೇಮಿಸಿದ್ದನೆಂದು ತಿಳಿಸುತ್ತದೆ.[1] ಉತ್ತರಾಧಿಕಾರಿ ಅಥವಾ ಯುವರಾಜನನ್ನು ಮತ್ತು ಇತರ ರಾಜಕುಮಾರರನ್ನು ಪ್ರಾಂತ್ಯಾಧಿಕಾರಿ ಗಳನ್ನಾಗಿ ನೇಮಿಸುತ್ತಿದ್ದರು. ಈ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಈ ಪದ್ಧತಿಯು ಅಸ್ತಿತ್ವದಲ್ಲಿ ಇದ್ದುದಕ್ಕೆ ಸಾಹಿತ್ಯದ ಸಾಕ್ಷ್ಯವಿದೆ. ರಾಜನಾಥ ಡಿಂಡಿಮನ "ಅಚ್ಯುತರಾಯಾಭ್ಯುದಯ" ಅಚ್ಯುತನು ಸಾಮ್ರಾಟನಾಗಿ ಅಭಿಷಿಕ್ತನಾದ ಮೇಲೆ ತನ್ನ ಮಗ ಪಿನವೆಂಕಟಾದ್ರಿಯನ್ನು ಯುವರಾಜನನ್ನಾಗಿ ಮಾಡಿದನೆಂದು ತಿಳಿಸುತ್ತದೆ.[2] ರಾಜಕುಮಾರನು ಪ್ರಾಪ್ತವಯಸ್ಕನಾದ ಮೇಲೆ ಪ್ರಾಂತ್ಯಾಧಿಕಾರಿಯಾಗಿ ನೇಮಿಸಲ್ಪಡುತ್ತಿದ್ದನು. ಇದರಿಂದ ಅವನಿಗೆ ರಾಜ್ಯದ ಸಮಸ್ಯೆಗಳ ಅರಿವು ಮತ್ತು ಆಡಳಿತ ತರಬೇತಿ ಸಿಗುತ್ತಿತ್ತು.[3] ಆಳುವ ಸಾಮ್ರಾಟನ ಪುತ್ರರನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸಿ ಅವರಲ್ಲೊಬ್ಬನನ್ನು ಯುವರಾಜ ಅಥವಾ ಸಹ-ರಾಜನನ್ನಾಗಿ (Co-ruler) ನೇಮಿಸುವ ರೂಢಿ ಇದ್ದಿತು.

ಡಾ. ಮಹಾಲಿಂಗಂರವರು, ವಿಜಯನಗರ ಸಾಮ್ರಾಜ್ಯದಲ್ಲಿ ಉತ್ತರಾಧಿಕಾರಿಯ (ಯುವರಾಜನ) ಆಯ್ಕೆಯ ಸಮಯದಲ್ಲಿ ಮಂತ್ರಿಗಳು ಮತ್ತು ಶ್ರೀಮಂತರು ಹಾಜರಿ ರುತ್ತಿದ್ದರೆಂದು ಅಭಿಪ್ರಾಯಪಟ್ಟಿದ್ದಾರೆ. ಬರಡಾಸ್ ಕೂಡ ಈ ಪದ್ಧತಿ ಇದ್ದಿತೆಂದು ತಿಳಿಸುತ್ತಾನೆ. ಅವನ ಬರವಣಿಗೆಯಲ್ಲಿ, ಎರಡನೆಯ ವೆಂಕಟನು ತನ್ನ ಮರಣಕ್ಕೆ ಮೂರು ದಿನಗಳ ಮೊದಲು ತನ್ನ ಸೋದರಳಿಯ ಚಿಕ್ಕರಾಯನನ್ನು ಕರೆದು ರಾಜ್ಯದ ಹಲವು ಶ್ರೀಮಂತರ ಸಮ್ಮುಖದಲ್ಲಿ ರಾಜಮುದ್ರೆಯುಳ್ಳ ತನ್ನ ಉಂಗುರವನ್ನು ತೆಗೆದು ಕೊಡುವ ಹಾಗೆ ಅವನ ಕಡೆಗೆ ಕೈಚಾಚಿ, ನಂತರ ಉಂಗುರವನ್ನು ಚಿಕ್ಕರಾಯನಿಗೆ ನೀಡಿದನೆಂದು ತಿಳಿಸುತ್ತಾನೆ. ಚಿಕ್ಕರಾಯನು ನೆರೆದಿದ್ದವರ ಒಪ್ಪಿಗೆಯನ್ನು ಪಡೆದು ಉಂಗುರವನ್ನು ಸ್ವೀಕರಿಸಲು, ಕೂಡಲೇ ಅವನನ್ನು ರಾಜನನ್ನಾಗಿ ಘೋಷಿಸ ಲಾಯಿತು.[4] ವಿಜಯನಗರ ಕಾಲದಲ್ಲಿ ಸಾಮ್ರಾಟನ ಮರಣಾನಂತರ ಉತ್ತರಾಧಿಕಾರ ಕ್ಕಾಗಿ ನಡೆವ ಘರ್ಷಣೆ ತಪ್ಪಿಸಲು ಸಾಮ್ರಾಟನು ಜೀವಂತವಾಗಿರುವಾಗಲೇ ಉತ್ತರಾಧಿಕಾರಿಯನ್ನು ನೇಮಿಸುತ್ತಿದ್ದನು.

ವಿಜಯನಗರದ ಚರಿತ್ರೆಯಲ್ಲಿ ಕೇಂದ್ರ ಸರ್ಕಾರಕ್ಕೆ ಸಂಬಂಧಿಸಿದ ಒಂದು ಸಮಸ್ಯೆ ರಾಜಪ್ರತಿನಿಧಿಯ (Regency) ಪದವಿಗೆ ಸೇರಿದುದಾಗಿದ್ದಿತು. ರಾಜನು ಅಪ್ರಾಪ್ತ ವಯಸ್ಕನಾಗಿದ್ದಾಗ, ಪ್ರಾಪ್ತ ವಯಸ್ಕನಾಗುವವರೆವಿಗೆ ರಾಜ ಪ್ರತಿನಿಧಿಯು ನೋಡಿ

1. EC, V, Cn. 256.
2. Aiyangar, S. K. : Sources, p. 158.
3. Mahalingam. : *Administration*, p. 12.
4. Sewell, Robert. : *op. cit.*, pp. 214-215.

ಕೊಳ್ಳುತ್ತಿದ್ದನು. ವಿಜಯನಗರದ ಚರಿತ್ರೆಯಲ್ಲಿ ರಾಜ ಪ್ರತಿನಿಧಿ ಪದವಿಯನ್ನು ದುರುಪಯೋಗಪಡಿಸಿಕೊಂಡ ನಿದರ್ಶನಗಳಿವೆ. ರಾಜ ಪ್ರತಿನಿಧಿ ವೀರ ನರಸಿಂಹನು ಸಿಂಹಾಸನವನ್ನು ಆಕ್ರಮಿಸಿಕೊಂಡು ತುಳುವ ವಂಶದ ಆಳ್ವಿಕೆಯನ್ನು ಸ್ಥಾಪಿಸಿದನು. ಸದಾಶಿವರಾಯನು ಹೆಸರಿಗೆ ಮಾತ್ರ ರಾಜನಾಗಿದ್ದು ನಿಜವಾದ ಅಧಿಕಾರ ರಾಮರಾಯ ಮತ್ತು ಆತನ ಇಬ್ಬರು ಸಹೋದರರು ತಿರುಮಲ ಮತ್ತು ವೆಂಕಟಾದ್ರಿಯವರಿಗೆ ಸೇರಿದ್ದಿತು.

**ಸಾಮ್ರಾಟನ ನಿರಂಕುಶತ್ವಕ್ಕೆ ಪ್ರತಿಬಂಧಕಗಳು :** ವಿಜಯನಗರ ಸಾಮ್ರಾಟನು ನಿರಂಕುಶ ಪ್ರಭುವಾಗಿರಲಿಲ್ಲ. ಡಾ. ಮಹಾಲಿಂಗಂ ಹೇಳಿರುವ ಹಾಗೆ, ನಿರಂಕುಶ ಪ್ರಭುತ್ವಕ್ಕೆ ಸಂಪ್ರದಾಯಬದ್ಧವಾದ ಅನೇಕ ಅಡಚಣೆಗಳಿದ್ದುವು. ಮೊದಲನೆಯದಾಗಿ ಹಿಂದೆ ತಿಳಿಸಿರುವಂತೆ ಧರ್ಮವು ಅಡ್ಡಿಯಾಗಿದ್ದಿತು. ರಾಜತ್ವವು ಧರ್ಮದ ಆಳ್ವಿಕೆಗೆ ಒಳಪಟ್ಟಿತ್ತು. ಧರ್ಮವನ್ನು ಪರಿಪಾಲಿಸುವುದು ರಾಜನ ಮುಖ್ಯ ಕರ್ತವ್ಯವಾಗಿತ್ತು. ವಾಡಿಕೆ ಮತ್ತು ಸಾರ್ವಜನಿಕ ಅಭಿಪ್ರಾಯವು ನಿರಂಕುಶತ್ವಕ್ಕೆ ಅಡಚಣೆಗಳಾಗಿದ್ದುವು. ತೆರಿಗೆಯನ್ನು ವಾಡಿಕೆಯ ಆಧಾರದ ಮೇಲೆ ವಿಧಿಸಲಾಗುತ್ತಿತ್ತು.[1] ಕ್ರಿ.ಶ. ೧೫೧೦ ರಲ್ಲಿ ಸಾರ್ವಜನಿಕ ಅಭಿಪ್ರಾಯವು ವಿವಾಹ ತೆರಿಗೆಗೆ ವಿರುದ್ಧವಾಗಿದ್ದುದರಿಂದ, ಕೃಷ್ಣದೇವರಾಯನು ಅದನ್ನು ರದ್ದುಗೊಳಿಸಿದನು.[2] ವ್ಯವಸ್ಥಾಬದ್ಧವಾದ ಜನಸಮೂದಾಯವು ಮತ್ತೊಂದು ಅಡ್ಡಿಯಾಗಿದ್ದಿತು. ವಿಜಯನಗರ ಸಾಮ್ರಾಜ್ಯದಲ್ಲಿ ಸಂಘಗಳು ಮತ್ತು ಶ್ರೇಣಿಗಳಿದ್ದುವು. ಸಂಘ ಜೀವನ, ಕಾರ್ಮಿಕ ಸಂಘಗಳು, ವೃತ್ತಿ ಸಂಘಗಳು ಮತ್ತು ಪ್ರಜಾ ಸಂಘಗಳು ಹೆಚ್ಚು ಪ್ರಭಾವ ಬೀರುತ್ತಿದ್ದವು.[3] "ನಾನಾ ದೇಶಿ" ಸಂಘಗಳು, "ನಾಡು"ಗಳು, ಐಯ್ಯಾಟಳೆ, ವೃತ್ತಿ ಶ್ರೇಣಿಗಳು ಮುಂತಾದುವು ನಿರ್ದಿಷ್ಟ ವ್ಯವಸ್ಥೆ ಹೊಂದಿದ್ದುವು. ಇವೆಲ್ಲವೂ ತಾವೇ ರೂಪಿಸಿದ ನಿಬಂಧನೆಗಳನ್ನು ಹೊಂದಿದ್ದು ರಾಜನಿಗೆ ಅವುಗಳನ್ನು ಜಾರಿಗೆ ತರುವ ಕರ್ತವ್ಯವಿದ್ದಿತು. ಸರ್ಕಾರವು ಅಗತ್ಯವಾದರೆ ಸೌಹಾರ್ದವನ್ನೇರ್ಪಡಿಸಲು ಮಾತ್ರ ಪ್ರವೇಶಿಸುತ್ತಿತ್ತು. ಇದರಿಂದ ಕೇಂದ್ರ ಸರ್ಕಾರವು ಮೇಲ್ವಿಚಾರಣೆಯನ್ನು ಹೊಂದಿತ್ತೆಂದು ತಿಳಿಯುತ್ತದೆ.

**ಮಂತ್ರಿಮಂಡಲ :** ಮಂತ್ರಿಮಂಡಲವು ಸಾಮ್ರಾಟನ ನಿರಂಕುಶತ್ವಕ್ಕೆ ಅಡ್ಡಿಯಾಗಿದ್ದಿತು. ಸಾಮ್ರಾಟನ ಸಹಾಯಕ್ಕೆ ಮಂತ್ರಿಮಂಡಲವಿದ್ದಿತು.[4] ಮಂತ್ರಿಮಂಡಲದಲ್ಲಿ ರಾಜನಿಂದ ನೇಮಿತರಾದ ಮಂತ್ರಿಗಳು ಮತ್ತು ರಾಜ್ಯದ ಪ್ರಭಾವಯುತ ಆಗರ್ಭ ಶ್ರೀಮಂತ ವರ್ಗದವರಿದ್ದರು. ಸಾಮ್ರಾಟನು ರಾಜ್ಯಾಡಳಿತಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಮಂತ್ರಿಮಂಡಲದ ಸಲಹೆ ಪಡೆಯುತ್ತಿದ್ದನು. ಅಬ್ದುಲ್ ರಜಾಕ್ ಮಂತ್ರಾಲಯ

1. Mahalingam. : *Admn*. p. 5.
2. *EC*, XII, Mg. 64.
3. Mahalingam : *Admn*., p. 22.
4. Sewell : *op.cit*., pp. 309-310 : *Amuktamalyada*., *op. cit*., v, p. 209.

ವನ್ನು ಕಂಡಿದ್ದನೆಂದು ತನ್ನ ಬರವಣಿಗೆಯಲ್ಲಿ ತಿಳಿಸಿದ್ದಾನೆ. ರಾಜನ ಅರಮನೆಯ ಬಲಗಡೆ ಮಂತ್ರಾಲಯವಿದ್ದಿತು.[1] ರಾಜತ್ವ ಪದ್ಧತಿಯ ಸರ್ಕಾರದಲ್ಲಿ ರಾಜನ ವ್ಯಕ್ತಿತ್ವವು ಮುಖ್ಯವಾಗಿದ್ದಿತು. ವಿಜಯನಗರ ಸಾಮ್ರಾಜ್ಯದಲ್ಲಿ ಪ್ರಾಂತ್ಯಾಧಿಕಾರಿಗಳು, ತಮ್ಮ ಪ್ರಾಂತ್ಯಗಳಲ್ಲಿ ಕರ್ತವ್ಯ ಪರಿಪಾಲನೆ ಮಾಡುತ್ತಿದ್ದರೆ ಕೇಂದ್ರ ಸರ್ಕಾರವು ಮಧ್ಯೆ ಪ್ರವೇಶಿಸುತ್ತಿರಲಿಲ್ಲ. ಪ್ರಾಂತ್ಯಾಧಿಕಾರಿಗಳು ವಿಶೇಷವಾದ ಸ್ವಯಮಾಧಿಪತ್ಯವನ್ನು ಹೊಂದಿದ್ದರು. ಈ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಅಧ್ಯಾಯ ೨

# ಪ್ರಾಂತ್ಯ ಸರ್ಕಾರ

### ಅಧಿಕೃತ

**ಸಾಮ್ರಾಜ್ಯದ ವಿಸ್ತೀರ್ಣ :** ವಿಜಯನಗರ ಸಾಮ್ರಾಜ್ಯವನ್ನು ಹರಿಹರ, ಕಂಪ, ಬುಕ್ಕ, ಮಾರಪ್ಪ ಮತ್ತು ಮುದ್ದಪ್ಪರೆಂಬ ಐವರು ಸಹೋದರರು ಕ್ರಿ.ಶ. 14 ನೆಯ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪಿಸಿದರು. ಅವರು ರಾಜ್ಯವನ್ನು ಎಲ್ಲಾ ದಿಕ್ಕಿನಲ್ಲಿಯೂ ವಿಸ್ತರಿಸಿ ಪ್ರತಿಯೊಬ್ಬರೂ ಒಂದೊಂದು ಭಾಗವನ್ನು ಆಳುತ್ತಿದ್ದರು. ಬುಕ್ಕನ ಮಗ, ಕುಮಾರಕಂಪಣ ಸಾಮ್ರಾಜ್ಯವನ್ನು ಮದುರೆಯವರೆಗೆ ಹರಡಿದನು.

ವಿಜಯನಗರ ಸಾಮ್ರಾಜ್ಯವು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಅದು ಕೃಷ್ಣಾ ನದಿಯ ದಕ್ಷಿಣಕ್ಕೆ ಭಾರತವನ್ನೆಲ್ಲಾ ಒಳಗೊಂಡಿತ್ತು. ಇಮ್ಮಡಿ ದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯದ ಎಲ್ಲೆಯನ್ನು ಪರ್ಶಿಯ ದೇಶದ ರಾಯಭಾರಿ ಅಬ್ದುಲ್ ರಜಾಕ್ ವಿವರಿಸಿದ್ದಾನೆ. ಅವನ ಪ್ರಕಾರ ಅದು ಸರದೀಪ್ (ಸಿಂಹಳ) ಗಡಿಯಿಂದ ಕುಲ್ಬರ್ಗದ ವರೆಗೆ (ಗುಲ್ಬರ್ಗ) ಮತ್ತು ಬಂಗಾಳದಿಂದ ಮಲಬಾರ್‌ವರೆಗೆ ಒಂದುಸಾವಿರ "ಪರಸಂಗ್"ಗಳನ್ನು ಒಳಗೊಂಡಿದ್ದಿತು.[2] ಕೃಷ್ಣದೇವರಾಯ ತನ್ನ ಆಕ್ರಮಣದಿಂದ ದಕ್ಷಿಣ ಭಾರತವನ್ನೆಲ್ಲಾ ವಿಜಯನಗರದ ಹತೋಟಿಗೆ ತಂದನು.[3] ಪೋರ್ಚುಗೀಸ್ ಪ್ರವಾಸಿಗ ಪೇಸ್ ಇದನ್ನು ದೃಢೀಕರಿಸಿದ್ದಾನೆ.[4] ಅಚ್ಯುತರಾಯನು ಸಾಮ್ರಾಜ್ಯದ ಭದ್ರತೆಯನ್ನು ಕಾಪಾಡಿದನು. ಆದರೆ ಕ್ರಿ.ಶ. ೧೫೬೫ ರಲ್ಲಿ ಸಾಮ್ರಾಜ್ಯಕ್ಕೆ ವಿಧಿಯೊಡನೆ ಕಡೆಯ ಸೆಣಸಾಟ ಉಂಟಾಯಿತು. ರಕ್ಕಸತಂಗಡಿ (ತಾಳೀ ಕೋಟೆ) ಕದನದಲ್ಲಿ ವಿಜಯನಗರವು ಅಪಯಶಸ್ಸಿನ ಸೋಲನ್ನನುಭವಿಸಿತು.

---

1. Elliot: *History of India* (London, 1905), IV, p. 107.
2. Elliot: *History of India* IV, p. 105.
3. Sewell: op. cit., p. 108.
4. *Ibid.*, pp. 231-232.

**ಪ್ರಾಂತ್ಯ ವಿಭಾಗಗಳು :** ವಿಜಯನಗರ ಸಾಮ್ರಾಜ್ಯವನ್ನು ಆಡಳಿತಾನುಕೂಲ ಕ್ಕೋಸ್ಕರ ರಾಜ್ಯಗಳೆಂಬ ಅನೇಕ ಪ್ರಾಂತ್ಯಗಳನ್ನಾಗಿ ವಿಂಗಡಿಸಲಾಗಿತ್ತು. ಅವುಗಳನ್ನು ಮಂಡಲಗಳು[1] ಮತ್ತು ನಾಡುಗಳೆಂದು[2] ಕರೆಯಲಾಗುತ್ತಿತ್ತು. ಡಾ. ಮಹಾಲಿಂಗಂ ಹೇಳಿರುವ ಹಾಗೆ ಮಂಡಲವೆಂಬ ಹೆಸರನ್ನು ಆಗಾಗ್ಗೆ ಉಪಯೋಗಿಸಲಾಗುತ್ತಿದ್ದರೂ ಅದಕ್ಕೆ ಯಾವುದೇ ರೀತಿಯ ಆಡಳಿತ ಪ್ರಾಮುಖ್ಯ ಇರಲಿಲ್ಲ.[3] ಜಯಂಗೊಂಡ ಚೋಳ ಮಂಡಲಂ, ತೊಂಡೈಮಂಡಲಂ ಮತ್ತು ಚೋಳಮಂಡಲಂ, ಬನವಾಸಿ ೧೨೦೦೦ ಅಥವಾ ಬನವಾಸಿ ಮಂಡಲ ಇದಕ್ಕೆ ಉದಾಹರಣೆಗಳು. ಅವುಗಳನ್ನು ಮಂಡಲವೆಂದು ಕರೆದರೂ ಅವು ಕ್ರಮಬದ್ಧವಾದ ರಾಜಕೀಯ ವಿಭಾಗಗಳಾಗಿರಲಿಲ್ಲ.

ವಿಜಯನಗರ ಸಾಮ್ರಾಜ್ಯವು ಮೊದಲನೆಯ ಹರಿಹರ ಮತ್ತು ಮೊದಲನೆಯ ಬುಕ್ಕರ ಕಾಲದಲ್ಲಿಯೇ ಅನೇಕ ಪಾಳೆಯಪಟ್ಟುಗಳು ಮತ್ತು ವಿಭಾಗಗಳನ್ನು ಹೊಂದಿದ್ದಿತು. ಅವುಗಳಲ್ಲಿ ಹಲವನ್ನು ರಾಜಪ್ರತಿನಿಧಿಗಳು (ವೈಸ್‌ರಾಯ್) ಮತ್ತು ಆಳುತ್ತಿದ್ದ ವಂಶದ ರಾಜಕುಮಾರರು ನೋಡಿಕೊಳ್ಳುತ್ತಿದ್ದರು. ಉಳಿದವನ್ನು ಸಾಮ್ರಾಟರೇ ನೋಡಿಕೊಳ್ಳುತ್ತಿದ್ದರು.[4]

(೧) ತುಳುವ ದೇಶದಲ್ಲಿ ಎರಡು ರಾಜ್ಯಗಳಿದ್ದುವು. ತುಳು ದೇಶದ ಉತ್ತರ ಭಾಗದಲ್ಲಿ ಬಾರಕೂರು ಒಂದು ಮುಖ್ಯ ನಗರವಾಗಿದ್ದು, ಅದು ಉತ್ತರ ಭಾಗಕ್ಕೆ ಪ್ರಾಂತ್ಯಾಧಿಕಾರಿಯ ರಾಜಧಾನಿಯಾಗಿತ್ತು. ದಕ್ಷಿಣ ತುಳು ರಾಜ್ಯಕ್ಕೆ ಮಂಗಳೂರು ರಾಜಧಾನಿಯಾಗಿತ್ತು. (೨) ಆರಗ, ಆರಗ ಗುತ್ತಿ ಅಥವಾ ಮಲೆ ರಾಜ್ಯ (ಶಿವಮೊಗ್ಗ ಜಿಲ್ಲೆ), ಸಾಂತಲಿಗೆ ಒಂದು ಸಾವಿರ (ಶಿವಮೊಗ್ಗ ಜಿಲ್ಲೆಯ ಒಂದು ಭಾಗ) ಮತ್ತೊಂದು ಪ್ರಾಂತ್ಯವಾಗಿತ್ತು. (೩) ಉದಯಗಿರಿ ರಾಜ್ಯ, (೪) ಪೆನುಗೊಂಡ ರಾಜ್ಯ. (೫) ಮುಳು ವಾಯಿ ರಾಜ್ಯ ಮತ್ತು (೬) ರಾಜಗಂಭೀರ ರಾಜ್ಯ ಇತರ ಪ್ರಾಂತ್ಯಗಳಾಗಿದ್ದವು.[5] ರಾಜ ಗಂಭೀರ ರಾಜ್ಯದ ದಕ್ಷಿಣಕ್ಕೆ ತಿರುವಡಿಗೈ ರಾಜ್ಯ ಮತ್ತು ಪಾಂಡ್ಯ ಅಥವಾ ಮದುರೈ ರಾಜ್ಯಗಳಿದ್ದುವು. ರಾಜ್ಯಗಳ ಸಂಖ್ಯೆಯು ಕಾಲಾನುಕಾಲಕ್ಕೆ ಮಾರ್ಪಾಡಾಗುತ್ತಿತ್ತು. ಆಡಳಿತಾನುಕೂಲವನ್ನು ಅವಲಂಬಿಸಿ ಹೊಸ ರಾಜ್ಯಗಳು ಸ್ಥಾಪಿತವಾಗುತ್ತಿದ್ದುವು. ಅಲ್ಲದೆ, ಹಲವು ರಾಜ್ಯಗಳು ತಮ್ಮ ಪ್ರಾಮುಖ್ಯವನ್ನು ಕಳೆದುಕೊಳ್ಳುತ್ತಿದ್ದುವು. ಉದಾಹರಣೆಗೆ, ಕೃಷ್ಣದೇವರಾಯನ ಆಳ್ವಿಕೆಯ ಪ್ರಾರಂಭದಲ್ಲಿದ್ದ ಗುತ್ತಿ ರಾಜ್ಯವು ಆತನ ಆಳ್ವಿಕೆಯ ಕೊನೆಯ ವೇಳೆಗೆ ಪೆನುಗೊಂಡ ರಾಜ್ಯದ ಒಂದು ಭಾಗವಾಯಿತು.[6]

---

1. Mahalingam: *Admn.*, pp. 279-80.
2. Saletore: Social and political life in the Vijayanagara Empire (2 Vols. Madras, 1934), I, p. 328.
3. Mahalingam: *SIP*, p. 306.
4. *ASI*, 1907-1908, p. 237.
5. *Ibid.*, pp. 234-254.
6. *EC*, XII, Mi. 64: 332 of 1926.

ಹೊಸದಾಗಿ ರಚಿಸಿದ ರಾಜ್ಯಗಳು, ಶ್ರೀಶೈಲ ರಾಜ್ಯ, ತಿರುವಡಿ ರಾಜ್ಯ (ತಿರುವಾಂಕೂರು) ಮತ್ತು ಕೊಂಡವೀಡು.[1]

ಈ ಸಂದರ್ಭದಲ್ಲಿ ವಿಜಯನಗರ ಕಾಲದಲ್ಲಿನ ಕರ್ನಾಟಕದ ಮುಖ್ಯ ವಿಭಾಗಗಳ ಪಟ್ಟಿಯನ್ನು ಕೊಡಬಹುದು[2] :

(೧) ಹೈವೆ ರಾಜ್ಯ : ಉತ್ತರ ಕನ್ನಡ ಜಿಲ್ಲೆಯ ದಕ್ಷಿಣ ಭಾಗ.

(೨) ನಗಿರೆ ರಾಜ್ಯ : ಉತ್ತರ ಕನ್ನಡದ ಆಗ್ನೇಯ ತುದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಈಶಾನ್ಯ ತುದಿಯ ಭಾಗಗಳು.

(೩) ಹಾಡುವಳ್ಳಿ ರಾಜ್ಯ : ಉತ್ತರ ಕನ್ನಡ ಜಿಲ್ಲೆಯ ನೈರುತ್ಯ ಭಾಗದ ತುದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವಾಯುವ್ಯ ತುದಿ.

(೪) ಬಾರಕೂರು ರಾಜ್ಯ : ದಕ್ಷಿಣ ಕನ್ನಡ ಜಿಲ್ಲೆಯ ಉತ್ತರಾರ್ಧ.

(೫) ಮಂಗಳೂರು ರಾಜ್ಯ : ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣಾರ್ಧ.

(೬) ಕಳಸ-ಕಾರ್ಕಳ ರಾಜ್ಯ : ಕಾರ್ಕಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಭಾಗ, ಚಿಕ್ಕಮಗಳೂರು ಜಿಲ್ಲೆಯ ಕಳಸ.

(೭) ಆರಗ ರಾಜ್ಯ : ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ, ಶಿಕಾರಿಪುರ, ನಗರ, ತೀರ್ಥಹಳ್ಳಿ ಮತ್ತು ಸೊರಬ ತಾಲ್ಲೂಕುಗಳು ಮತ್ತು ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕು.

(೮) ಚಂದ್ರಗುತ್ತಿ ಅಥವಾ ಗುತ್ತಿ ರಾಜ್ಯ : ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕು ಮತ್ತು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ಮತ್ತು ಸಾಗರ ತಾಲ್ಲೂಕುಗಳ ಭಾಗಗಳು.

(೯) ಹಸ್ತಿನಾವತಿ ವಳಿತ : ಬಳ್ಳಾರಿ ಜಿಲ್ಲೆ.

(೧೦) ಹೊಯ್ಸಣ ರಾಜ್ಯ ಅಥವಾ ಹೊಯ್ಸಣ ನಾಡು ಅಥವಾ ಹೊಸಣದೇಶ : ವಿಜಯನಗರದ ಸ್ಥಾಪನೆಗೆ ಮೊದಲು ಹೊಯ್ಸಳರ ಆಳ್ವಿಕೆಯಲ್ಲಿದ್ದ ಕರ್ನಾಟಕದ ಮತ್ತು ಮದರಾಸು ರಾಜ್ಯದ ಭಾಗಗಳು.

(೧೧) ಯಕ್ಕಟಿ ಸೀಮೆ : ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು ಮತ್ತು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕು.

(೧೨) ಕೊಟ್ಟೂರ ಚಾವಡಿ : ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ಮತ್ತು ಹರಿಹರ ತಾಲ್ಲೂಕುಗಳು.

(೧೩) ವಸುಧಾರೆಯ ಸೀಮೆ : ಚಿಕ್ಕಮಗಳೂರು ತಾಲ್ಲೂಕು ಮತ್ತು ಜಿಲ್ಲೆ.

---

1. C. Hayavadana Rao : Mysore Gazetteer (Bangalore, 1930) II, iii, p. 1530.
2. K. V. Ramesh : Vijayanagara and Territorial Readjustments in Karnataka (Kannada Studies, III, No. 1), pp. 39-51.

(೧೪) ಪೆನುಗೊಂಡೆ ರಾಜ್ಯ : ತುಮಕೂರು ಜಿಲ್ಲೆಯ ಸಿರಾ ಮತ್ತು ಪಾವಗಡ ತಾಲ್ಲೂಕುಗಳು, ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕು ಮತ್ತು ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಭಾಗಗಳು. (ಪೆನುಕೊಂಡ ತಾಲ್ಲೂಕು ಸೇರಿ)

(೧೫) ಹೊನ್ನಾವಳಿ ಸೀಮೆ : ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕು ಮತ್ತು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು.

(೧೬) ಹಾಸನ ಸೀಮೆ : ಹಾಸನ ಜಿಲ್ಲೆ.

(೧೭) ಸಾದಲಿಯ ರಾಜ್ಯ : ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ಮತ್ತು ಶಿಡ್ಲಘಟ್ಟ ತಾಲ್ಲೂಕುಗಳು.

(೧೮) ಮುಳುವಾಯ ಅಥವಾ ಮುಳಬಾಗಿಲ ರಾಜ್ಯ : ಕೋಲಾರ ಜಿಲ್ಲೆಯ ಮುಳಬಾಗಿಲ ತಾಲ್ಲೂಕು ಮತ್ತು ಬೆಂಗಳೂರು ಜಿಲ್ಲೆಯ ಹೊಸಕೋಟೆ ಮತ್ತು ಆನೇಕಲ್ಲು ತಾಲ್ಲೂಕುಗಳು.

(೧೯) ನಲ್ಲೂರ ರಾಜ್ಯ : ಬೆಂಗಳೂರು ಜಿಲ್ಲೆಯ ಹೊಸಕೋಟೆ ಮತ್ತು ಬೆಂಗಳೂರು ತಾಲ್ಲೂಕುಗಳು.

(೨೦) ಚನ್ನಪಟ್ಟಣ ರಾಜ್ಯ : ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಗಳು.

(೨೧) ಅರುಳಹಾಳ ರಾಜ್ಯ : ಬೆಂಗಳೂರು ಜಿಲ್ಲೆಯ ಕಾನಕಾನಹಳ್ಳಿ ತಾಲ್ಲೂಕು.

(೨೨) ಚಂಗನಾಡು : ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕು ಮತ್ತು ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕು.

(೨೩) ಕೋಟೆ ಸೀಮೆ : ಮೈಸೂರು ಜಿಲ್ಲೆಯ ಹುಣಸೂರು ಮತ್ತು ಹೆಗ್ಗಡದೇವನಕೋಟೆ ತಾಲ್ಲೂಕುಗಳು.

(೨೪) ತೆರಕಣಾಂಬಿ ರಾಜ್ಯ : ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕು.

ಕೃಷ್ಣದೇವರಾವರಾಯನ ಆಳ್ವಿಕೆಯಲ್ಲಿ ತಮಿಳುನಾಡನ್ನು ೫ ರಾಜ್ಯಗಳನ್ನಾಗಿ ವಿಂಗಡಿಸಲಾಗಿತ್ತು. ಅವು : (ಅ) ಚಂದ್ರಗಿರಿರಾಜ್ಯ, (ಆ) ಪಡೈವೀಡುರಾಜ್ಯ, (ಇ) ತಿರುವಡಿಗೈ ರಾಜ್ಯ, (ಈ) ಚೋಳ ರಾಜ್ಯ, (ಉ) ಮದುರೆ ರಾಜ್ಯ ಅಥವಾ ಪಾಂಡ್ಯ ರಾಜ್ಯ.[1]

ಅನೇಕ ಶಾಸನಗಳಲ್ಲಿ " ರಾಜ್ಯ"ದ ಬದಲು, ಸೀಮೆ, ಸ್ಥಳ, ವಳಿತ ಮತ್ತು ವೇಂತೆ ಎಂಬ ಪದಗಳನ್ನು ಉಪಯೋಗಿಸಲಾಗಿದೆ. ಹಲವು ಸ್ಥಳಗಳಲ್ಲಿ ಅವುಗಳನ್ನು ರಾಜ್ಯದೊಳಗಿನ ಸಣ್ಣ ವಿಭಾಗಗಳನ್ನು ಸೂಚಿಸಲು ಉಪಯೋಗಿಸಲಾಗಿದೆ.

ಪ್ರಾಂತ್ಯ ವ್ಯವಸ್ಥೆ : ಪ್ರತಿ ಪ್ರಾಂತ್ಯಕ್ಕೂ ಒಬ್ಬ ಪ್ರಾಂತ್ಯಾಧಿಕಾರಿಯನ್ನು ನೇಮಿಸಲಾಗುತ್ತಿತ್ತು. ಪ್ರಾಂತ್ಯಾಧಿಕಾರಿಗಳು ಸಾಮಾನ್ಯವಾಗಿ ರಾಜವಂಶಕ್ಕೆ ಸೇರಿದವ

---

1. Krishnaswami A. : The Tamil Country udner Vijayanagara (Annamalai University, 1964), p. 161.

ರಾಗಿರುತ್ತಿದ್ದರು. ವಿಜಯನಗರವನ್ನು ಆಳಿದ ಮೊದಲನೆಯ ವಂಶದ ರಾಜಕುಮಾರರು ಪ್ರಾಂತ್ಯಾಧಿಕಾರಿಗಳಾಗಿ ನೇಮಿಸಲ್ಪಟ್ಟವರು, ಒಡೆಯ ಅಥವಾ ಒಡೆಯರ್ ಎಂಬ ಬಿರುವನ್ನು ಪಡೆದುಕೊಳ್ಳುತ್ತಿದ್ದರು. ಮೊದಲನೆಯ ಹರಿಹರನು ರಾಜನಾಗಿದ್ದಾಗ ಮಾರಪ್ಪ, ಆರಗದ ಪ್ರಾಂತ್ಯಾಧಿಕಾರಿಯಾಗಿ ಚಂದ್ರಗುತ್ತಿಯನ್ನು ರಾಜಧಾನಿಯನ್ನಾಗಿ ಹೊಂದಿದ್ದನು.[1] ಮೊದಲನೆಯ ಕಂಪಣನು ಉದಯಗಿರಿ ರಾಜ್ಯದ ಪ್ರಾಂತ್ಯಾಧಿಕಾರಿ ಯಾಗಿದ್ದನು.[2] ಎರಡನೆಯ ಹರಿಹರನ ಮಗ ವಿರೂಪಾಕ್ಷನು ತುಂಡೀರ, ಚೋಳ ಮತ್ತು ಪಾಂಡ್ಯ ರಾಜ್ಯಗಳ ಅಧಿಕಾರವನ್ನು ಹೊಂದಿದ್ದು ಸಿಂಹಳವನ್ನು ಆಕ್ರಮಿಸಿ ಕೊಂಡನು.[3] ತಿರುಮಲನು ತನ್ನ ಮಗ ಎರಡನೆಯ ಶ್ರೀರಂಗನನ್ನು ಪೆನುಕೊಂಡ ಪ್ರಾಂತ್ಯದ ಪ್ರಾಂತ್ಯಾಧಿಕಾರಿಯಾಗಿ ನೇಮಿಸಿದನು.[4] ತಿರುಮಲ ಸಾಮ್ರಾಟನ ಇನ್ನೊಬ್ಬ ಮಗ ರಾಮ, ಶ್ರೀರಂಗಪಟ್ಟಣ ಪ್ರದೇಶದ ಪ್ರಾಂತ್ಯಾಧಿಕಾರಿಯಾಗಿದ್ದನು.[5] ತಿರುಮಲನ ನಾಲ್ಕನೆಯ ಮಗ ಎರಡನೆಯ ವೆಂಕಟನಿಗೆ ಚಂದ್ರಗಿರಿಯು ಮುಖ್ಯ ಕೇಂದ್ರವಾಗಿತ್ತು. ಅವನು ತಮಿಳುರಾಜ್ಯದಲ್ಲಿ ಅನೇಕ ಸಾಮಂತರುಗಳನ್ನು ಹೊಂದಿ ಆಳುತ್ತಿದ್ದನು.[6] ಹೀಗೆ ಪಲ್ಲವರು, ಚೋಳರು ಮತ್ತು ಹೊಯ್ಸಳರು ರಾಜವಂಶದವ ರನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ಅಥವಾ ಮಹಾಮಂಡಲೇಶ್ವರರಾಗಿ ನೇಮಿಸುತ್ತಿದ್ದ ಪದ್ಧತಿಯನ್ನು ವಿಜಯನಗರ ಸಾಮ್ರಾಟರು ಮುಂದುವರಿಸಿದರು.

ಇಮ್ಮಡಿ ದೇವರಾಯನ ಕಾಲದಿಂದ ಪ್ರಾಂತ್ಯಾಧಿಕಾರಿಗಳ ನೇಮಕದ ನೀತಿಯಲ್ಲಿ ಬದಲಾವಣೆಗಳನ್ನು ಕಾಣುತ್ತೇವೆ. ರಾಜವಂಶದವರಲ್ಲದೆ ಸಾಮಂತ ರಾಜರ ಮತ್ತು ಶ್ರೀಮಂತ ಮನೆತನಕ್ಕೆ ಸೇರಿದವರನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸಲಾಗುತ್ತಿತ್ತು. ಇದಕ್ಕೆ ಹಲವು ಕಾರಣಗಳಿದ್ದುವು. ರಾಜ್ಯದ ಉನ್ನತ ಅಧಿಕಾರಿಗಳು ಅರ್ಹರಾಗಿದ್ದರೆ ಅವರನ್ನು ನೇಮಿಸಲಾಗುತ್ತಿತ್ತು. ಮೊದಲನೆಯದಾಗಿ, ಪ್ರಾಂತ್ಯಾಧಿಕಾರಿಗಳ ಕರ್ತವ್ಯ ಗಳನ್ನು ನಿರ್ವಹಿಸಬಲ್ಲವರು ರಾಜವಂಶದಲ್ಲಿ ಸಾಕಷ್ಟು ಸಿಕ್ಕುತ್ತಿರಲಿಲ್ಲ. ಎರಡನೆಯ ದಾಗಿ, ಸಾಮ್ರಾಜ್ಯವು ವಿಸ್ತರಿಸುತ್ತ ಪ್ರಾಂತ್ಯಗಳು ಹೆಚ್ಚಿದುದರಿಂದ ಹೆಚ್ಚಿನ ಪ್ರಾಂತ್ಯಾಧಿ ಕಾರಿಗಳನ್ನು ನೇಮಿಸುವ ಆವಶ್ಯಕತೆಯುಂಟಾಯಿತು. ಪ್ರಾಂತ್ಯಾಧಿಕಾರಿಗಳಲ್ಲನೇಕರು ಸೇನಾ ನಾಯಕತ್ವ ಮತ್ತು ಸಚಿವ (ಮಹಾ ಪ್ರಧಾನ) ಹುದ್ದೆಗಳೆರಡನ್ನೂ ಹೊಂದಿ, ಅನೇಕ ವೇಳೆ ಒಂದಕ್ಕಿಂತ ಹೆಚ್ಚಿನ ಪ್ರಾಂತ್ಯಗಳ ಅಧಿಕಾರ ಹೊಂದಿದ್ದರು. ಕ್ರಿ. ಶ. ೧೪೭೫ ರ ಉಡುಪಿ ತಾಲ್ಲೂಕು ಚೊಕ್ಕಡಿ ಗ್ರಾಮದ ಒಂದು ಶಾಸನವು, ಮಹಾ ಪ್ರಧಾನ ಸಿಂಗಣ್ಣ ದಂಡನಾಯಕನ ಆಜ್ಞಾನುಸಾರ ವಿಠ್ಠರಸ ಒಡೆಯ ಬಾರಕೂರು

1. *E.C*, VIII, Sb. 375.
2. Nel. Ins., II, Nl. 28.
3. *EI*, XII, pp. 227-228.
4. *EI*, XII, pp. 173 and 186.
5. Aiyangar, S. K.: Sources, p. 221: EC 4, Yl. 16.
6. *Ibid*: p. 302.

ಮತ್ತು ಮಂಗಳೂರು ರಾಜ್ಯಗಳನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.[1] ಅವರು ಸಾಮ್ರಾಜ್ಯಕ್ಕೆ ನಿಷ್ಠೆಹೊಂದಿದ್ದರು. ಹೀಗೆ ನೇಮಿಸಿದ ಪ್ರಾಂತ್ಯಾಧಿಕಾರಿಗಳನ್ನು ದುರ್ಗ ದಣ್ಣಾಯಕರೆಂದು ಕರೆಯುತ್ತಿದ್ದರು.[2] ಡಾ. ಮಹಾಲಿಂಗಂ ಪ್ರಕಾರ ಅವರು ತಮ್ಮ ಕರ್ತವ್ಯಗಳನ್ನು ಸರಿಯಾಗಿ ನೆರವೇರಿಸುತ್ತಿದ್ದರೆ ಕೇಂದ್ರ ಸರ್ಕಾರದ ಪ್ರವೇಶವಿಲ್ಲದೆ ಅವರು ಸಾಕಷ್ಟು ಸ್ಥಳೀಯ ಸ್ವಯಮಾಧಿಪತ್ಯವನ್ನು ಹೊಂದಿರುತ್ತಿದ್ದರು.[3] ಅವರು ತಮ್ಮದೇ ಆದ ನ್ಯಾಯಾಲಯಗಳನ್ನು ಹೊಂದಿದ್ದರು, ತಮ್ಮ ಅಧಿಕಾರಿಗಳನ್ನು ನೇಮಿಸುತ್ತಿದ್ದರು ಮತ್ತು ತಮ್ಮದೇ ಆದ ಸೈನ್ಯಗಳನ್ನು ಹೊಂದಿದ್ದರು. ಅವರ ಅಧಿಕಾರಕ್ಕೆ ನಿಗದಿಯಾದ ಅವಧಿಯಿರಲಿಲ್ಲ. ಅದು ಅವರ ಸಾಮರ್ಥ್ಯ, ಸ್ಥಳೀಯ ಆವಶ್ಯಕತೆ ಮತ್ತು ಸಾಮ್ರಾಟನ ಇಚ್ಛೆಯನ್ನು ಅವಲಂಬಿಸಿತ್ತು. ಅವರಿಗೆ ಸಾಮಾನ್ಯ ವಾಗಿ ಅಲ್ಪ ಮೌಲ್ಯದ ನಾಣ್ಯಗಳನ್ನು ಮುದ್ರಿಸಿ ಚಲಾವಣೆಗೆ ತರುವ ಹಕ್ಕನ್ನು ಕೊಡಲಾಗಿದ್ದಿತು. ಲಕ್ಕಣ ದಂಡನಾಯಕನು ಚಲಾವಣೆಗೆ ತಂದ ಒಂದು ತಾಮ್ರದ ನಾಣ್ಯದ ಹಿಂಭಾಗದಲ್ಲಿ ಆನೆಯ ಚಿತ್ರವೂ ಮತ್ತು 'ಲ' ಎಂಬ ಅಕ್ಷರವೂ ಮತ್ತು ಮುಂಭಾಗದಲ್ಲಿ **ಮನ ದಣಾಯಕರು** ಎಂಬ ಲೇಖನವೂ ಕಾಣುತ್ತದೆ.[4]

ಈ ಪ್ರಾಂತ್ಯಾಧಿಕಾರಿಗಳು ನಾಣ್ಯಗಳನ್ನು ಮುದ್ರಿಸುವ ಅಧಿಕಾರವನ್ನು ಹೊಂದಿದ್ದರೆಂದು ಸೀಸರ್ ಫ್ರೆಡ್‌ರಿಕ್ ತನ್ನ ಬರವಣಿಗೆಯಲ್ಲಿ ತಿಳಿಸಿದ್ದಾನೆ.[5] ಪ್ರಾಂತ್ಯಾಧಿಕಾರಿಯ ಮುಖ್ಯ ಕರ್ತವ್ಯ ತನ್ನ ಪ್ರಾಂತ್ಯವನ್ನು ಶತ್ರುಗಳ ಆಕ್ರಮಣದಿಂದ ರಕ್ಷಿಸುವುದಾಗಿತ್ತು. ಅವನು ಪ್ರಾಂತ್ಯದ ಕಂದಾಯದ ಅಧಿಕಾರಿ ಮತ್ತು ಮುಖ್ಯ ದಂಡಾಧಿಕಾರಿಯಾಗಿಯೂ ಇದ್ದನು. ಪ್ರಾಂತ್ಯದಲ್ಲಿ ಶಾಂತಿಪಾಲನೆಯ ಜವಾಬ್ದಾರಿ ಹೊಂದಿದ್ದನು. ಹೊಸ ತೆರಿಗೆಗಳನ್ನು ಹೇರಲು ಮತ್ತು ಹಳೆಯದನ್ನು ಮಾಫಿಮಾಡುವ ಅಧಿಕಾರವನ್ನು ಹೊಂದಿದ್ದನು. ಕ್ರಿ.ಶ. ೧೩೭೦ ರ ಚಾಮರಾಜನಗರ ತಾಲ್ಲೂಕಿನ ಒಂದು ಶಾಸನವು ಚಿಕ್ಕ ಕಂಪಣ ಒಡೆಯರು ಹಟ್ಟಲ ಕೋಟೆಯ ಅಧಿಕಾರಿಗಳು ಮತ್ತು ಕೈಕ್ಕೋಳರಿಗೆ ತೆರಿಗೆಗಳ ಪಾವತಿಗೆ ಮತ್ತು ಕೈಕ್ಕೋಳರ ಮೇಲೆ ವಿಧಿಸಿದ್ದ ದಂಡದ ವಿನಾಯಿತಿಗೆ ಸಂಬಂಧಪಟ್ಟ ನಿಯಮಗಳನ್ನೊಳಗೊಂಡ ಒಂದು ಸನ್ನದನ್ನು ದಾಖಲೆಮಾಡಿದೆ.[6] ಪ್ರಾಂತ್ಯಾಧಿಕಾರಿಗಳು ರಾಜ್ಯಬೊಕ್ಕಸಕ್ಕೆ ಒಂದು ಗೊತ್ತಾದ ಮೊತ್ತದ ಹಣವನ್ನು ಪಾವತಿಮಾಡಬೇಕಾಗಿದ್ದಿತು. ಅಲ್ಲದೆ ಅವರು ಸಾಮ್ರಾಟನಿಗೋಸ್ಕರ ನಿರ್ದಿಷ್ಟಸಂಖ್ಯೆಯ

---

1. *SII*. VII, No. 194 : 579 of 1929-30.
2. N. Venkataramanayya—Studies in the History of the third dynasty of Vijayanagara (Madras, 1935) p. 149.
3. Mahalingam, *SIP*, p. 317.
4. *ARSIE*, 1905, para 31 : *IA*, XX, p. 304.
5. Purchas, Samuel : His Pilgrims (Twenty Vols, Glasgow 1905-1907), X, p, 99, quoted in *Admn.*, p. 188.
6. *EC* IV, Ch. 97.

ಸೈನ್ಯವನ್ನು ಹೊಂದಿರಬೇಕಾಗಿತ್ತು. ನ್ಯೂನಿಜ್ಸ್, ರಾಜ್ಯದ ಹಲವು ಪ್ರಾಂತ್ಯಾಧಿಕಾರಿಗಳ ಹೆಸರನ್ನು, ಅವರ ಪ್ರಾಂತ್ಯಗಳ ಹೆಸರನ್ನು, ಅದರ ವರಮಾನವನ್ನು ಮತ್ತು ಸಾರ್ವಭೌಮ ಸರ್ಕಾರಕ್ಕೆ ಅವರು ಸಲ್ಲಿಸಬೇಕಾದ ಸೈನಿಕ ಮತ್ತು ಹಣಕಾಸಿನ ಕರ್ತವ್ಯಗಳನ್ನೂ ತಿಳಿಸಿರುತ್ತಾನೆ.[1] ಆದರೆ ಕೇಂದ್ರ ಸರ್ಕಾರವು ತೆರಿಗೆಗಳ ವಿವರ ಮತ್ತು ವಸೂಲಿಯ ಕ್ರಮದಲ್ಲಿ ಪ್ರವೇಶಿಸುತ್ತಿರಲಿಲ್ಲ.[2] ಕೇಂದ್ರ ಸರ್ಕಾರವು ದುರಾಡಳಿತ ಅಥವಾ ಪ್ರಾಂತ್ಯಾಧಿಕಾರಿಗಳಿಂದ ದಬ್ಬಾಳಿಕೆ ಇದ್ದರೆ ಮಧ್ಯೆ ಪ್ರವೇಶಿಸುತ್ತಿದ್ದಿತು. ಈ ರೀತಿಯ ಒಂದು ದೃಷ್ಟಾಂತವು ಎರಡನೆಯ ದೇವರಾಯನ ಆಡಳಿತದಲ್ಲಿ ದೊರಕುತ್ತದೆ. ರಾಷ್ಟ್ರದಲ್ಲಿ ಉಪದ್ರವ ಒಂದು ಹಬ್ಬಿದ್ದಿತು. ಅನೇಕ ಜನರು ಮಡಿದರು ಅಥವಾ ಕಷ್ಟಕ್ಕೊಳಗಾದರು. ಆಗ ರಾಜನು ಮಧ್ಯೆ ಪ್ರವೇಶಿಸಿ ಸುಲಿಗೆಯನ್ನು ತಡೆದನು.[3]

## ಊಳಿಗಮಾನ್ಯ ಪದ್ಧತಿ

**ನಾಯಂಕರ ಪದ್ಧತಿ :** ವಿಜಯನಗರ ಸಾಮ್ರಾಜ್ಯದಲ್ಲಿ ಭಾಗಶಃ ಸ್ವಾತಂತ್ರ್ಯವನ್ನು ಹೊಂದಿದ್ದ ಸಾಮಂತರಿದ್ದರು. ಅವರಿಗೆ ಸಾಮಂತ, ನಾಯಕ, ದಂಡನಾಯಕ, ಮಂಡಲೇಶ್ವರರಾಜ, ಮಹಾರಾಜ, ಒಡೆಯರ್ ಮುಂತಾದ ವಿವಿಧ ಹೆಸರುಗಳಿದ್ದುವು. ಅವರಿಗೆ ಸಮದರ್ಜೆ ಮತ್ತು ಅಧಿಕಾರವಿದ್ದಿತು. ರಾಜನು ಒಬ್ಬ ನಾಯಕನಿಗೆ ಅಥವಾ ಪಾಳೆಯಗಾರನಿಗೆ ಸೈನಿಕ ಸೇವೆಯ ಷರತ್ತಿನ ಮೇಲೆ ಭೂಮಿಯನ್ನು ಕೊಡುತ್ತಿದ್ದುದೇ ನಾಯಂಕರ ಪದ್ಧತಿ. ವಿಜಯನಗರ ರಾಜರು ತಮ್ಮ ದಂಡಯಾತ್ರೆಯ ಕಾಲದಲ್ಲಿ ಯುದ್ಧದಲ್ಲಿ ಅಪಜಯ ಹೊಂದಿದ ಅನೇಕ ರಾಜರನ್ನು ತಮಗೆ ಕಪ್ಪ ಕೊಟ್ಟು ಸಾಮಂತ ರಾಜರಾಗಿರಲು ಒಪ್ಪಿದರೆ ಅವರಿಗೆ ತಮ್ಮ ರಾಜ್ಯವನ್ನು ಹಿಂದಿರುಗಿಸುತ್ತಿದ್ದರು. ಹೀಗೆ ಪಾಳೆಯಗಳನ್ನು ಹೊಂದಿದವರನ್ನು ಪಾಳೆಯಗಾರರೆನ್ನುತ್ತಿದ್ದರು.[4] ಸಾಮಂತರ ಮೂಲಕ ಸಾಮ್ರಾಜ್ಯದ ಆಡಳಿತ ಪದ್ಧತಿಗೆ ನಾಯಂಕರ ಪದ್ಧತಿ ಎಂದು ಹೆಸರಾಯಿತು. ಇದರ ಪ್ರಕಾರ ಸಾಮ್ರಾಟನು ಭೂಮಿಗೆಲ್ಲಾ ಒಡೆಯ. ಅವನು ತನ್ನ ಆಶ್ರಿತರಿಗೆ ಭೂಮಿಯನ್ನು ಹಂಚುತ್ತಿದ್ದನು. ಹೀಗೆ ರಾಜನಿಂದ ಭೂಮಿಯನ್ನು ಪಡೆದವರನ್ನು ನಾಯಕರೆನ್ನಲಾಗುತ್ತಿತ್ತು[5]. ಅವರ ಪ್ರದೇಶವನ್ನು ಅಮರಂ ಅಥವಾ ನಾಯಕಟ್ಟನಂ ಎಂದು ಕರೆಯಲಾಗುತ್ತಿತ್ತು. ಡಾ. ವೆಂಕಟರಮಣಯ್ಯನವರ ಪ್ರಕಾರ, ಒಂದು ನಿಗದಿಯಾದ ಆದಾಯವನ್ನು ತರುತ್ತಿದ್ದ ಪ್ರದೇಶವನ್ನು ಒಬ್ಬ ಸೈನಿಕ ನಾಯಕನಿಗೆ ವಿಜಯನಗರ ರಾಜರು ಕೊಡುತ್ತಿದ್ದುದು ಅಮರ ನಾಯಂಕರ ಪದ್ಧತಿ.[6] ಅವರು ಕೇಂದ್ರ ಸರ್ಕಾರಕ್ಕೆ

1. Sewell : op. cit., pp. 365-370.
2. Mahalingam : *Admn.*, p. 189.
3. *ARSIE*, 1905. II, para 30.
4. Rice, Lewis : Mysore Gazetteer I vol. (London, 1897), p. 578.
5. Mahalingam : *SIP*, p. 320.
6. Venkataramanayya : *Studies*, op. Cit., p. 179.

ಒಂದು ನಿಗದಿಯಾದ ವಾರ್ಷಿಕ ಹಣವನ್ನು ಸಂದಾಯಮಾಡಬೇಕಾಗಿದ್ದಿತು. ಅದೂ ಅಲ್ಲದೆ ಸಾಮ್ರಾಜ್ಯದ ರಕ್ಷಣೆಗೆ ಗೊತ್ತಾದ ಸಂಖ್ಯೆಯ ಸೈನಿಕರು ಅಶ್ವಗಳು ಮತ್ತು ಆನೆಗಳನ್ನು ಒದಗಿಸಬೇಕಾಗಿತ್ತು. ಹೀಗೆ ರಾಜನಿಗೆ ಜನ ಮತ್ತು ದ್ರವ್ಯಗಳನ್ನು ಒದಗಿಸುವುದು ನಾಯಕರ ಕರ್ತವ್ಯವಾಗಿದ್ದಿತು.

ನ್ಯೂನಿಜ್ಸ್, ವಿಜಯನಗರ ಸಾಮ್ರಾಜ್ಯವು ಅಚ್ಯುತರಾಯನ ಕಾಲದಲ್ಲಿ ೨೦೦ ಕ್ಕಿಂತ ಹೆಚ್ಚು ನಾಯಕರಿಗೆ ಭಾಗ ಮಾಡಲಾಗಿತ್ತೆಂದು ತಿಳಿಸುತ್ತಾನೆ. ಅಲ್ಲದೆ ಅವನ ಬರವಣಿಗೆಯಿಂದ ಭೂಮಿಯೆಲ್ಲ ರಾಜನಿಗೆ ಸೇರಿದ್ದುದೆಂದೂ ಮತ್ತು ಅವನಿಂದ ನಾಯಕರು ಸ್ವೀಕರಿಸುತ್ತಿದ್ದರೆಂದೂ ತಿಳಿಯುತ್ತದೆ.[1] ನಾಯಕರ ವರಮಾನದ ಆಧಾರದ ಮೇಲೆ ರಾಜನು ತನಗೆ ಸಲ್ಲಬೇಕಾಗಿದ್ದ ಕಪ್ಪವನ್ನು ನಿಗದಿ ಮಾಡುತ್ತಿದ್ದನೆಂದು ಪೇಸ್ ತಿಳಿಸುತ್ತಾನೆ.[2] ನ್ಯೂನಿಜ್ಸ್ ಪ್ರಕಾರ ನಾಯಕರೆಲ್ಲ ಒಟ್ಟು ೬ ಲಕ್ಷ ಪದಾತಿ ದಳವನ್ನು ಮತ್ತು ೨೪ ಸಾವಿರ ಅಶ್ವಗಳನ್ನು ಹೊಂದಿರಬೇಕಾಗಿತ್ತು. ಅವರು ಪ್ರತಿ ವರ್ಷವೂ ರಾಜನಿಗೆ ೬೦ ಲಕ್ಷ ಹಣವನ್ನು ಕೊಡಬೇಕಾಗಿತ್ತು. ಅವರ ಒಟ್ಟು ವರಮಾನ ೧೨೦ 'ಪರ್ದ'ಗಳಾಗಿದ್ದುವು. ಅದರಲ್ಲಿ ೬೦ ಲಕ್ಷವನ್ನು ರಾಜನಿಗೆ ಕೊಟ್ಟು ಉಳಿದುದರಲ್ಲಿ ಸೈನ್ಯದ ವೆಚ್ಚವನ್ನು ಮಾಡಬೇಕಾಗಿತ್ತು.[3]

ರಾಜನ ಮತ್ತು ನಾಯಕನ ಸಂಬಂಧವು ಊಳಿಗಮಾನ್ಯ ಪದ್ಧತಿಯಲ್ಲಿನ ಪ್ರಭು ಮತ್ತು ಸಾಮಂತನ ಸಂಬಂಧವಾಗಿತ್ತು. ನಾಯಕರು ಅವರ ಅಧೀನ ವರ್ಜೆಯನ್ನು ಅವರ ಸನ್ನದ್ದಿನಲ್ಲಿ ಮತ್ತು ಶಾಸನದಲ್ಲಿ ಮೊದಲು ತಮ್ಮ ಪ್ರಭುವನ್ನು ಹೆಸರಿಸುವುದರಿಂದ ತಿಳಿಸುತ್ತಿದ್ದರು. ಪೇಸ್ ಪ್ರಕಾರ ನಾಯಕರಲ್ಲದೆ ವಿಜಯನಗರ ಸಾಮ್ರಾಟರಿಗೆ ಐವರು ಸಾಮಂತ ರಾಜರಿದ್ದರು. ಅವರು ನೂತನ ವರ್ಷಾರಂಭದ ದಿನ, ರಾಜನಿಗೆ ಪುತ್ರ ಅಥವಾ ಪುತ್ರಿಯ ಜನನವಾದಾಗ ಮತ್ತು ರಾಜನ ವರ್ಧಂತ್ಯೋತ್ಸವದಲ್ಲಿ ಕಾಣಿಕೆ ನೀಡಬೇಕಾಗಿತ್ತು. ಸಾಮಂತರು ಮತ್ತು ನಾಯಕರು ಕರ್ತವ್ಯ ಪರಿಪಾಲನೆ ಮಾಡದಿದ್ದರೆ ಶಿಕ್ಷೆಗೊಳಗಾಗುತ್ತಿದ್ದರು. ನ್ಯೂನಿಜ್ಸ್ ಪ್ರಕಾರ ಅವರ ಭೂಮಿಯನ್ನು ವಶಪಡಿಸಿಕೊಳ್ಳಲಾಗುತ್ತಿತ್ತು.[4]

ಈ ಸಂದರ್ಭದಲ್ಲಿ ನಾಯಕನಿಗೂ ಮತ್ತು ಪ್ರಾಂತ್ಯಾಧಿಕಾರಿಯಾಗಿ ಸಾಮಾನ್ಯವಾಗಿ ದಂಡನಾಯಕನೆಂದು ಕರೆಯಲ್ಪಡುತ್ತಿದ್ದವನಿಗೂ ಇದ್ದ ವ್ಯತ್ಯಾಸವನ್ನು ತಿಳಿಸುವುದು ಆವಶ್ಯಕ. ನಾಯಕ ಮತ್ತು ದಂಡನಾಯಕರಿಬ್ಬರೂ ಪ್ರಾಂತ್ಯಾಧಿಕಾರಿಗಳಾಗಿದ್ದರು. ಆದರೆ ಅವರ ರಾಜ್ಯವ್ಯವಸ್ಥೆಯು ಮತ್ತು ರಾಜಕೀಯ ಸ್ಥಾನಮಾನಗಳು ಬೇರೆಯಾಗಿದ್ದವು. ಮೊದಲನೆಯದಾಗಿ, ದಂಡನಾಯಕ ಅಥವಾ ಪ್ರಾಂತ್ಯಾಧಿಕಾರಿ ತನ್ನ

---

1. **Sewell: op. Cit., pp. 360-370,**
2. ***Ibid.*, p. 370.**
3. ***Ibid.*, III, p. 354.**
4. ***Ibid.*, III, p. 55.**

ಪ್ರಾಂತ್ಯದಲ್ಲಿ ರಾಜನನ್ನು ಪ್ರತಿನಿಧಿಸುತ್ತಿದ್ದನು. ಅವನು ರಾಜನ ಪರವಾಗಿ ಪ್ರಾಂತ್ಯವನ್ನು ಆಳುತ್ತಿದ್ದನು. ಆದರೆ ನಾಯಕ ಸೈನಿಕ ಸೇವೆ ಸಲ್ಲಿಸಬೇಕಾಗಿದ್ದ ಒಬ್ಬ ಸಾಮಂತ. ಅವನು ದ್ರವ್ಯ ಮತ್ತು ಸೈನಿಕ ಸೇವೆ ಸಲ್ಲಿಸಲು ಒಂದು ಅಮರಂ ಅಥವಾ ಭೂಮಿಯನ್ನು, ಪಡೆಯುತ್ತಿದ್ದನು. ಎರಡನೆಯದಾಗಿ, ಪ್ರಾಂತ್ಯಾಧಿಕಾರಿಗಳು ಒಂದು ಪ್ರಾಂತ್ಯದಿಂದ ಮತ್ತೊಂದು ಪ್ರಾಂತ್ಯಕ್ಕೆ ವರ್ಗವಾಗಬಹುದಿದ್ದಿತು. ಅವಿಧೇಯತೆ ಮತ್ತು ಅವರಲ್ಲಿ ಪರಸ್ಪರ ಜಗಳಗಳನ್ನು ತಪ್ಪಿಸಲು ಹೀಗೆ ಮಾಡಲಾಗುತ್ತಿತ್ತು. ಆದರೆ ಸಾಮಾನ್ಯವಾಗಿ ನಾಯಕನು ವರ್ಗಕ್ಕೊಳಗಾಗುತ್ತಿರಲಿಲ್ಲ. ಮೂರನೆಯದಾಗಿ, ನಾಯಕತನವು ಪ್ರಾರಂಭದಲ್ಲಿ ವೈಯುಕ್ತಿಕವಾಗಿದ್ದಿತು. ಆದರೆ ಕಾಲ ಕ್ರಮೇಣ ಕೇಂದ್ರ ಸರ್ಕಾರದ ದುರ್ಬಲತೆಯಿಂದ ವಂಶಪಾರಂಪರ್ಯವಾಯಿತು. ಆಗ ರಾಜರು ಅವರಿಗೆ ಶಾಶ್ವತವಾಗಿ ಭೂಮಿಯನ್ನು ಕೊಡುತ್ತಿದ್ದರು. ಇದಕ್ಕೆ ಅಮರನಾಯಕತನ ಅಥವಾ ಅಮರಮಾಗಣೆ ಎಂದು ಕರೆಯಲ್ಪಡುತ್ತಿದ್ದಿತು. ಕ್ರಿ.ಶ. ೧೫೨೯ ರಲ್ಲಿ ಕೃಷ್ಣದೇವ ರಾಯನ ಮರಣಾನಂತರ ಮತ್ತು ಕ್ರಿ.ಶ. ೧೫೬೪ ರಲ್ಲಿ ರಕ್ಕಸತಂಗಡಿ ಕದನದ (ತಾಳೀಕೋಟೆ) ಮಧ್ಯಕಾಲದಲ್ಲಿ ನಾಯಕರು ತಮಗೆ ಗೌರವ ಮತ್ತು ರಕ್ಷಣೆಯನ್ನು ನೀಡಿದ್ದ ಸಾಮ್ರಾಜ್ಯವನ್ನು ಬುಡಮೇಲು ಮಾಡಿದರು.

ನಾಯಕರು ರಾಜಾಸ್ಥಾನದಲ್ಲಿ ಇಬ್ಬರು ಅಧಿಕಾರಿಗಳನ್ನು ಹೊಂದಿದ್ದರೆಂದು ಕಾಣುತ್ತದೆ. ಅವರಲ್ಲೊಬ್ಬನು ರಾಜಧಾನಿಯಲ್ಲಿ ನಾಯಕನು ಹೊಂದಿದ್ದ ಸೈನ್ಯದ ಹತೋಟಿ ಹೊಂದಿದ್ದನು. ಮತ್ತೊಬ್ಬ ಅಧಿಕಾರಿಯು ಸ್ಥಾನಪತಿ ಎಂದು ಕರೆಯಲ್ಪಟ್ಟು ನಾಯಕನ ಲೌಕಿಕ ನಿಯೋಗಿಯಾಗಿ ರಾಜಧಾನಿಯಲ್ಲಿ ನಾಯಕನ ಹಿತಾಸಕ್ತಿಗಳನ್ನು ಸಂರಕ್ಷಿಸುತ್ತಿದ್ದನು. ನ್ಯೂನಿಜ್ಸ್ ಈ ಅಧಿಕಾರಿಗಳ ವಿಚಾರವನ್ನು ತಿಳಿಸುತ್ತಾನೆ. ಅವನ ಪ್ರಕಾರ ನಾಯಕರು ಮತ್ತು ಇತರ ಶ್ರೀಮಂತರು ರಾಜಧಾನಿಯಲ್ಲಿ ಕಾರ್ಯದರ್ಶಿಗಳನ್ನು ಹೊಂದಿದ್ದರು. ಅವರು ಪ್ರತಿನಿತ್ಯವು ಅರಮನೆಯಲ್ಲಿದ್ದುಕೊಂಡು, ಆಗುಹೋಗುಗಳ ವರದಿಗಳನ್ನು ಕಳುಹಿಸುತ್ತಿದ್ದರು.[1] ರಾಯವಾಚಕಮುವಿನ ಪ್ರಕಾರ ಮದುರೆಯ ವಿಶ್ವನಾಥ ನಾಯಕನು ವಿಜಯನಗರದಲ್ಲಿ ಒಬ್ಬ ಸ್ಥಾನಪತಿಯನ್ನು ಹೊಂದಿದ್ದನು. ಆತನು ಕೃಷ್ಣದೇವರಾಯನ ಆಳ್ವಿಕೆಯ ವಿವರಗಳನ್ನು ನೀಡುವ ರಾಯವಾಚಕಮುವನ್ನು ಬರೆದನು.[2] ಡಾ. ಕೃಷ್ಣಸ್ವಾಮಿಯವರ ಪ್ರಕಾರ ವಿಜಯನಗರ ಸಾಮ್ರಾಟರು ಈ ಇಬ್ಬರು ಅಧಿಕಾರಿಗಳ ಮೂಲಕ ದೂರ ಪ್ರಾಂತ್ಯಗಳ ಮೇಲಿನ ಹತೋಟಿ ಹೊಂದಿದ್ದರು. ಅವರು ಕೇಂದ್ರ ಮತ್ತು ಪ್ರಾಂತ್ಯ ಸರ್ಕಾರ, ಅಲ್ಲದೆ ಕೇಂದ್ರ ಮತ್ತು ಸ್ಥಳೀಯ ವ್ಯವಸ್ಥೆಗಳ ಸಂಪರ್ಕಾಧಿಕಾರಿಗಳಾಗಿದ್ದರು.[3] ಕೇಂದ್ರ ಸರ್ಕಾರವು

1. Ibid., op. Cit., p. 355.
2. Aiyangar, S.K.: Sources, pp. 110-111.
3. Krishnaswamy, A.: The Tamil Country under Vijayanagar (Annamalai Nagar 1964), p. 180.

ಪ್ರಾಂತ್ಯ ಸರ್ಕಾರಗಳನ್ನು ತನ್ನ ನಿಯೋಗಿಗಳ ಮೂಲಕ ಮುಂದೆ ತಿಳಿಸಿರುವ ರೀತಿಯಲ್ಲಿ ಹತೋಟಿಯಲ್ಲಿಟ್ಟುಕೊಂಡಿದ್ದಿತು.

**ಪ್ರಾಂತ್ಯ ವ್ಯವಸ್ಥೆಯ ಹತೋಟಿ :** ಕೇಂದ್ರ ಸರ್ಕಾರವು ತ್ವರಿತವಾದ ಮತ್ತು ವಿಶೇಷ ಕೆಲಸಗಳ ಮೇಲೆ ಸಾಮ್ರಾಜ್ಯದ ಎಲ್ಲಾ ಭಾಗಗಳಿಗೂ **ಅವಸರಂ** ಎಂಬ ವಿಶೇಷ ನಿಯೋಗಿಗಳನ್ನು ಕಳುಹಿಸುತ್ತಿದ್ದಿತು.[1] ಸಾಮಂತರ ಇಲಾಖೆಯ ಮೇಲ್ವಿಚಾರಣೆಗೆ ಸಾಮಂತಾಧಿಕಾರಿಗಳು[2] ಮತ್ತು ಮಹಾನಾಯಕಾಚಾರ್ಯರೆಂಬ[3] ಅಧಿಕಾರಿಗಳಿದ್ದರು. ವಿಜಯನಗರ ಕಾಲದಲ್ಲಿ ನಾಯಕರುಗಳನ್ನು ಹತೋಟಿಯಲ್ಲಿಡಲು ವಿಶೇಷ ಅಧಿಕಾರಿಗಳನ್ನು ನೇಮಿಸಲಾಗುತ್ತಿದ್ದಿತು.[4] ಉದಾಹರಣೆಗೆ, ರಾಮರಾಜ ವಿಠ್ಠಲನು ದಕ್ಷಿಣ ಭಾರತದ ತುದಿಯ ಪ್ರದೇಶದ ಮೇಲೆ ಹತೋಟಿ ಹೊಂದಿದ್ದನು ಮತ್ತು ಆ ಪ್ರದೇಶದ ನಾಯಕರು ಅವನಿಗೆ ಅಧೀನರಾಗಿದ್ದರು.[5] ಹೀಗೆ ಪ್ರಾಂತ್ಯಾಧಿಕಾರಿಗಳಾಗಿದ್ದ ದಂಡನಾಯಕರು ಸಾಕಷ್ಟು ಸ್ವಯಮಾಧಿಪತ್ಯ ಹೊಂದಿದ್ದರು ಮತ್ತು ನಾಯಕರು ಭಾಗಶಃ ಸ್ವತಂತ್ರ ದರ್ಜೆಯನ್ನು ಹೊಂದಿದ್ದರು.

**ಪ್ರಾಂತ್ಯ ಸರ್ಕಾರದಲ್ಲಿ ಊಳಿಗಮಾನ್ಯ ಪದ್ಧತಿ :** ವಿಜಯನಗರ ಸಾಮ್ರಾಜ್ಯವು ತಂಜಾವೂರು, ಜಿಂಜಿ, ಮದುರೆ, ಕೆಳದಿ, ಬೇಲೂರು, ಮೈಸೂರು, ಉಳ್ಳಾಲ, ನಗಿರೆ, ಹಾಡುವಳ್ಳಿ ಮುಂತಾದ ಅನೇಕ ಪಾಳೆಯಪಟ್ಟುಗಳು ತಲೆಎತ್ತಲು ಅವಕಾಶಮಾಡಿಕೊಟ್ಟಿತು. ಈ ರಾಜ್ಯಗಳನ್ನಾಳುತ್ತಿದ್ದ ಸಾಮಂತರು ಬೇರೆಬೇರೆ ಮಟ್ಟದ ಸ್ವಯಮಾಧಿಪತ್ಯವನ್ನು ಹೊಂದಿದ್ದರು. ಬೇನಿ ಪ್ರಸಾದ್ ಹೇಳಿರುವಂತೆ ವಿಜಯನಗರ ಸಾಮ್ರಾಜ್ಯವು ಪ್ರಾಚೀನ ಹಿಂದೂ ಮಾದರಿಯ ಊಳಿಗಮಾನ್ಯ ಸಂಯುಕ್ತ ರಾಷ್ಟ್ರವಾಗಿತ್ತು.[6] ಈ ವ್ಯವಸ್ಥೆಯನ್ನು ಕೆಳದಿ ಮತ್ತು ಮದುರೆ ನಾಯಕರ ದೃಷ್ಟಾಂತಗಳಿಂದ ವಿವರಿಸಬಹುದು.

**ಕೆಳದಿ ನಾಯಕರು :** ಕರ್ನಾಟಕದಲ್ಲಿ ಮೊದಲು ಕೆಳದಿ ನಂತರ ಇಕ್ಕೇರಿ ಎಂದು ಕರೆಯಲ್ಪಟ್ಟ ರಾಜ್ಯವು ವಿಜಯನಗರ ಸಾಮ್ರಾಜ್ಯಕ್ಕೆ ಕ್ರಿ.ಶ. ೧೬ ನೆಯ ಶತಮಾನದಲ್ಲಿ ನಿಷ್ಠೆಹೊಂದಿದ್ದ ರಾಜ್ಯವಾಗಿತ್ತು. ಈ ಸಾಮಂತ ಸಂಸ್ಥಾನವು ವಿಜಯನಗರ ಸಾಮ್ರಾಟರ ಅಧೀನದಲ್ಲಿದ್ದು ನಂತರ ಸ್ವತಂತ್ರ ಸಂಸ್ಥಾನವಾಯಿತು. ಈ ಸಂಸ್ಥಾನವು ಕ್ರಿ.ಶ. ೧೫೦೦ ರಿಂದ ೧೭೬೩ ರವರೆಗೆ ಸುಮಾರು ೨೫೦ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದಿತು. ಅದು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ, ಉತ್ತರದಲ್ಲಿ ಗೋವಾದವರೆಗೆ, ದಕ್ಷಿಣದಲ್ಲಿ ಕಣ್ಣಾನೂರಿನವರೆಗೆ ಹಬ್ಬಿದ್ದಿತು. ಈಗಿನ ಶಿವಮೊಗ್ಗ ಜಿಲ್ಲೆ, ಹಾಸನ ಜಿಲ್ಲೆಯ ಒಂದು

1. Mahalingam SIP, p. 331.
2. EC, IX, Dv. 29 : IA, X, No 97.
3. 297 of 1926.
4. Mahalingam. SIP, 331.
5. 273 of 1902 : 140 of 1895 : SII, V, No 704.
6. Beni Prasad : *The State in Ancient India* (Allahabad, 1928), p. 470.

ಭಾಗ ಮತ್ತು ತುಳು ರಾಜ್ಯಗಳನ್ನೊಳಗೊಂಡಿತ್ತು. ಈ ಸಂಸ್ಥಾನದ ಸ್ಥಾಪನೆಯು ಚೌಡಪ್ಪನೆಂಬುವನು ಉಳುತ್ತಿದ್ದಾಗ ಒಂದು ಬಚ್ಚಿಟ್ಟ ನಿಧಿಯು ದೊರಕಿದುದರಿಂದ ಆಯಿತೆಂಬ ಪ್ರತೀತಿ ಇದೆ. 'ಕೆಳದಿ ನೃಪವಿಜಯ' ಮತ್ತು 'ಶಿವತತ್ವ ರತ್ನಾಕರ' ಎಂಬ ಎರಡು ಗ್ರಂಥಗಳು, ಕೆಳದಿ ಸಂಸ್ಥಾನವನ್ನು ಒಬ್ಬ ವೀರಶೈವ ರೈತನ ಮಕ್ಕಳಾದ ಚೌಡ ಮತ್ತು ಭದ್ರ ಎಂಬುವರು ಸಾಗರದ ಸಮೀಪದಲ್ಲಿ ತಮ್ಮ ಹೊಲದಲ್ಲಿ ಸಿಕ್ಕಿದ ನಿಧಿಯಿಂದ ಸ್ಥಾಪಿಸಿದರೆಂದು ತಿಳಿಸುತ್ತವೆ.

ಕ್ರಿ.ಶ. ೧೫೦೬ ರ ಒಂದು ಶಾಸನದ ಪ್ರಕಾರ ಚೌಡಪ್ಪನು ಯಾವ ಸಾರ್ವಭೌಮ ರಾಜನನ್ನೂ ಹೆಸರಿಸದೆ ತನ್ನ ಹೆಸರಿನಲ್ಲಿಯೇ ಒಂದು ದಾನಮಾಡಿದ್ದಾನೆ.[1] ಕೆಳದಿ ನೃಪ ವಿಜಯದ ಪ್ರಕಾರ ಕೃಷ್ಣದೇವರಾಯ ತನ್ನ ಆಸ್ಥಾನಕ್ಕೆ ಚೌಡಪ್ಪನನ್ನು ಬರಹೇಳಿ ಆ ಸಹೋದರರನ್ನು ತನ್ನ ದಂಗೆಕೋರ ನಾಯಕರನ್ನು ಅಡಗಿಸಲು ನೇಮಿಸಿಕೊಂಡನು.[2] ಶಿವತತ್ವರತ್ನಾಕರವು ಚೌಡಪ್ಪನನ್ನು ಬರಹೇಳಿದ ರಾಜನ ಹೆಸರನ್ನು ತಿಳಿಸುವುದಿಲ್ಲ. ಆ ಸಹೋದರರು ತಮ್ಮ ಕಾರ್ಯದಲ್ಲಿ ಯಶಸ್ವಿಯಾಗಲು, ರಾಜನು ಚೌಡಪ್ಪನನ್ನು ಅವರು ಆಕ್ರಮಿಸಿಕೊಂಡಿದ್ದ ಸ್ಥಳಗಳ ಮತ್ತು ಕೆಳದಿಯ ನಾಯಕನನ್ನಾಗಿ ನೇಮಿಸಿದನು.[3]

ಚೌಡಪ್ಪನ ಉತ್ತರಾಧಿಕಾರಿ ಸದಾಶಿವ ನಾಯಕ ಕ್ರಿ. ಶ. ೧೫೬೫ ರವರೆಗೆ ಆಳಿದನು. ಸದಾಶಿವರಾಯನ ಆಳ್ವಿಕೆಯಲ್ಲಿ ಕಲ್ಯಾಣ ಮತ್ತು ಗುಲ್ಬರ್ಗ ರಾಜರ ವಿರುದ್ಧದ ದಂಡಯಾತ್ರೆಗೆ ಸೈನ್ಯದ ನಾಯಕನನ್ನಾಗಿ ನೇಮಿಸಿದನು. ಸದಾಶಿವ ನಾಯಕನು ಇದರೊಂದಿಗೆ ಬಿದರೆಯ ಸುಲ್ತಾನ, ತುಳು ಮತ್ತು ಕೇರಳದಲ್ಲಿನ ದಂಗೆ ಕೋರ ನಾಯಕರು ಮತ್ತು ಬಂಕಾಪುರದ ಮಾದರಸನನ್ನು ಸೋಲಿಸಿದನು.[4] ಕ್ರಿ. ಶ. ೧೫೬೩ ರ ಒಂದು ಶಾಸನದ ಪ್ರಕಾರ ಕೆಳದಿ ಸಂಸ್ಥಾನವು ಆರಗ, ಗುತ್ತಿ ೩೬ ಕಂಪಣ ಗಳು, ತುಳು ರಾಜ್ಯ, ಬಾರಕೂರು ಮತ್ತು ಮಂಗಳೂರುಗಳನ್ನೊಳಗೊಂಡು ೫೬ ಗಾವುದಗಳಾಗಿದ್ದಿತು.[5] ಕೆಳದಿಯ ಮತ್ತೊಬ್ಬ ದೊರೆ ಇಮ್ಮಡಿ ಸದಾಶಿವ, ರಾಮ ರಾಯನ ಬಂಧು ವಿಠ್ಠಲನೊಡನೆ ಪೋರ್ಚುಗೀಸರ ವಿರುದ್ಧ ಹೋರಾಡಿದನು.[6] ಕೆಳದಿಯ ಮತ್ತೊಬ್ಬ ನಾಯಕ, ವೆಂಕಟಪ್ಪನಾಯಕ (ಕ್ರಿ. ಶ. ೧೫೮೬-೧೬೨೯), ಕ್ರಿ. ಶ. ೧೬೧೩ ರವರೆವಿಗೆ ಮೊದಲನೆಯ ವೆಂಕಟಪತಿದೇವ ಮಹಾರಾಯರ ಸಾರ್ವ ಭೌಮತ್ವವನ್ನು ಅಂಗೀಕರಿಸಿದ್ದನು.[7] ಅನಂತರ ಸ್ವತಂತ್ರನಾದನು.

---

1. *MAR*, 1930, No. 65
2. *KNV*, Canto I, Stanza 82
3. *Vijayanagara Sexcentenary Commemoration Volume*, (Dharwar, 1936), p. 256
4. *Ibid.*, 258
5. 487 of 1928-29
6. *Vijayanagara Sexcentenary Commemoration Volume*, p. 260
7. *SII*, VIII No. 297

ಕ್ರಿ. ಶ. ೧೬೪೫ ರಿಂದ ೧೬೬೦ ರವರೆವಿಗೆ ಆಳಿದ ಶಿವಪ್ಪನಾಯಕನು ಕೆಳದಿ ಮನೆತನದ ಒಬ್ಬ ಪ್ರಮುಖ ರಾಜ. ಅವನು ಶ್ರೀರಂಗರಾಯನಿಂದ ಬಿಜಾಪುರ ಮತ್ತು ಗೋಲ್ಕೊಂಡ ಸೈನ್ಯಗಳು ಆಕ್ರಮಿಸಿಕೊಂಡಿದ್ದ ವೆಲ್ಲೂರನ್ನು ವಶಪಡಿಸಿಕೊಂಡನು.[1] ನೆಲೆ ಇಲ್ಲದೆ ಅಲೆದಾಡುತ್ತಿದ್ದ ಶ್ರೀರಂಗನು ವೆಲ್ಲೂರಿಗೆ ಹಿಂದಿರುಗಿ ಶಿವಪ್ಪನಾಯಕನಿಗೆ ಬಿರುದು ಬಾವಲಿಗಳನ್ನು ಕೊಟ್ಟು ಗೌರವಿಸಿದನು. ಇಕ್ಕೇರಿಯು ವಿಜಯನಗರ ಸಾಮ್ರಾಜ್ಯದ ಪತನವಾದ ನಂತರ ಹಿಂದೂ ಸಂಸ್ಕೃತಿಯನ್ನು ರಕ್ಷಿಸುವ ಪಾತ್ರವನ್ನು ವಹಿಸಿಕೊಂಡಿತು.

ಹೀಗೆ ಕೆಳದಿ ನಾಯಕರು ಕೃಷ್ಣದೇವರಾಯನ ಕಾಲದಿಂದ ಕ್ರಿ.ಶ. ೧೬೧೩ ರ ವರೆವಿಗೆ ವಿಜಯನಗರಕ್ಕೆ ನಿಷ್ಠೆಹೊಂದಿದ ಸಾಮಂತರಾಗಿದ್ದರು. ಗೋವಾದಿಂದ ಇಕ್ಕೇರಿಗೆ ಬಂದು ಪೋರ್ಚುಗೀಸ್ ನಿಯೋಗದೊಂದಿಗೆ ಹೋದ ಇಟಲಿಯ ಪ್ರವಾಸಿಗ ಪೀಟ್ರೋಡೆಲಾವೆಲ್ಲೆ ಈ ವಿಷಯವನ್ನು ಸಮರ್ಥಿಸಿದ್ದಾನೆ.[2]

**ಮದುರೆ ನಾಯಕರು :** ಮಧುರೆಯ ನಾಯಕರು ಸುಮಾರು ಕ್ರಿ.ಶ. ೧೬೧೦ ರ ವರೆಗೆ ವಿಜಯನಗರ ರಾಜರಿಗೆ ನಿಷ್ಠೆಯಿಂದಿದ್ದರು. ಮದುರೆ ನಾಯಕತನದ ಸ್ಥಾಪನೆಯ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ. ಪ್ರೊ|| ಸತ್ಯನಾಥ ಅಯ್ಯರ್ ಪ್ರಕಾರ ಕ್ರಿ.ಶ. ೧೫೨೯ ಅಥವಾ ೧೫೩೦ ರಲ್ಲಿ ಕೃಷ್ಣದೇವರಾಯನ ಆಳ್ವಿಕೆಯ ಕೊನೆಯ ವರ್ಷ ಮದುರೆಯ ನಾಯಕತನವು ಸ್ಥಾಪಿತವಾಯಿತು.[3] ಫಾದರ್ ಹೆರಾಸ್ ಪ್ರಕಾರ ಅಚ್ಯುತ ರಾಯನ ಆಳ್ವಿಕೆಯ ಕೊನೆಯಲ್ಲಿ ಮದುರೆಯಲ್ಲಿ ವಿಶ್ವನಾಥ ನಾಯಕನು ಆಳುತ್ತಿದ್ದಾಗ ನಾಯಕತನವನ್ನು ಸ್ಥಾಪಿಸಿದನು.[4] ಡಾ. ವೆಂಕಟರಮಣಯ್ಯನವರ ಪ್ರಕಾರ ಪ್ರಾಯಶಃ ತಾಳೀಕೋಟೆ ಕದನದ ನಂತರ ವಿಶ್ವನಾಥನಾಯಕನ ಮಗ ಕೃಷ್ಣಪ್ಪ ನಾಯಕನ ಕಾಲದಲ್ಲಿ ಸ್ಥಾಪನೆಯಾಯಿತು.[5] ಡಾ. ಕೃಷ್ಣಸ್ವಾಮಿಯವರ ಪ್ರಕಾರ ಮದುರೆ ನಾಯಕತನವು ಕೃಷ್ಣದೇವರಾಯನ ಆಳ್ವಿಕೆಯ ಕೊನೆಯಲ್ಲಿ ಸ್ಥಾಪಿತವಾಗಿ ಅದನ್ನು ಅವನ ಸಹೋದರ ಅಚ್ಯುತರಾಯ ಅಂಗೀಕರಿಸಿದನು.[6]

ಸದಾಶಿವರಾಯ ಮತ್ತು ರಾಮರಾಯರ ನಿಷ್ಠಾವಂತ ಸಾಮಂತನಾಗಿದ್ದ ವಿಶ್ವನಾಥ ನಾಯಕ ರಾಮರಾಯ ವಿಠ್ಠಲನೊಡನೆ ತಿರುವಾಡಿ ರಾಜನ ಮತ್ತು ಪೋರ್ಚುಗೀಸರ ಮೇಲಿನ ಯುದ್ಧದಲ್ಲಿ ನೆರವಾದನು.[7] ವಿಶ್ವನಾಥನ ಮಗ ಮತ್ತು ಉತ್ತರಾಧಿಕಾರಿ

---

1. Aiyangar S. K. : *Sources*, p. 347.
2. Sewell R. *op.cit.*, p. 212.
3. Sathianathier R. : *History of the Nayaks of Madura* (Madras, 1924), pp. 39-47.
4. Heras: *Aravidu Dynasty of Vijayanagara* (Madras, 1924), p. 132.
5. Nilakanta Sastri and Venkataramanayya : *Further Sources*, I Vol, p. 241.
6. Krishnasvami, *op.cit.*, p. 260.
7. Sathianathier : *op.cit.*, pp. 64-65 ; Heras, *op.cit.*, p. 168.

ಕೃಷ್ಣಪ್ಪ ನಾಯಕ ಸದಾಶಿವರಾಯನಿಗೆ ನಿಷ್ಠೆಯಿಂದಿದ್ದು ತಾಳೀಕೋಟೆ ಕದನದಲ್ಲಿ ನೆರವಾಗಲು ತನ್ನ ಸೈನ್ಯದ ಒಂದು ಭಾಗವನ್ನು ಕಳುಹಿಸಿಕೊಟ್ಟನು.[1]




ಚಿತ್ರ ೧: ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿದ್ದ ರಾಜ್ಯಗಳು

ಮುತ್ತು ವೀರಪ್ಪ ನಾಯಕನು ಮೊದಲನೆಯ ವೆಂಕಟನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ವಿಜಯನಗರಕ್ಕೆ ಕಪ್ಪವನ್ನು ಕೊಡುವ ಪದ್ಧತಿಯನ್ನು ನಿಲ್ಲಿಸಿದನು.

1. 417 of 1916, 121 of 1894.

ಫಾದರ್ ಹೆರಾಸ್ ಪ್ರಕಾರ ಮುತ್ತುವೀರಪ್ಪನು ದಂಗೆ ಎದ್ದು ಸುಮಾರು ಕ್ರಿ.ಶ. ೧೬೧೦ ರಲ್ಲಿ ವೆಂಕಟನಿಗೆ ಕಪ್ಪಕೊಡಲು ನಿರಾಕರಿಸಿದನು.[1] ಅವನು ತನ್ನ ಆಳ್ವಿಕೆಯ ಮೊದಲಿನ ವರ್ಷಗಳಲ್ಲಿ ಸ್ನೇಹದಿಂದಿದ್ದನು. ಕ್ರಿ.ಶ. ೧೬೦೮ ರ ಶ್ರೀರಂಗದ ಒಂದು ದಾಖಲೆಯು ಮದುರೆಯ ನಾಯಕತನದ ಮೇಲೆ ವೆಂಕಟನು ಅಧಿಕಾರ ಹೊಂದಿದ್ದನೆಂದು ತಿಳಿಸುತ್ತದೆ.[2] ಕ್ರಿ.ಶ. ೧೬೦೯ ರ ಮದುರೆಯ ಒಂದು ಶಾಸನವು ಮುತ್ತುವೀರಪ್ಪ ನಾಯಕನ ಬೇಡಿಕೆಯ ಮೇಲೆ ವೆಂಕಟಪತಿ ದೇವರಾಯ, ಕಾವೇರಿ ನದಿಯ ಉತ್ತರ ದಂಡೆಯ ಮೇಲಿನ ನಾಗನಲ್ಲೂರು ಅಥವಾ ಮುದ್ದು ವೀರ ಮಹಿಪಾಲ ಸಮುದ್ರ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟನೆಂದು ತಿಳಿಸುತ್ತದೆ. ನಾಯಕನು ಆ ಗ್ರಾಮವನ್ನು ೮೨ ಭಾಗಗಳನ್ನಾಗಿ ವಿಂಗಡಿಸಿ ಹಲವು ಬ್ರಾಹ್ಮಣರಿಗೆ ಹಂಚಿದನು.[3] ಕ್ರಿ.ಶ. ೧೬೧೦ ರ ಪ್ರಾರಂಭದಲ್ಲಿ ನಾಯಕನು ವೆಂಕಟನನ್ನು ಹೆಸರಿಸದೆ ತಿನ್ನವೆಲ್ಲಿಯ ಅಂಬಾ ಸಮುದ್ರ ದೇವಾಲಯಕ್ಕೆ ಜಮೀನನ್ನು ದಾನಮಾಡಿದನು.[4] ಕ್ರಿ. ಶ. ೧೬೧೦ ರವರೆಗೆ ಮದುರೆಯ ನಾಯಕರು ವಿಜಯನಗರ ಸಾಮ್ರಾಟನಿಗೆ ನಿಷ್ಠೆಯಿಂದಿದ್ದರು.

ಹೀಗೆ ವಿಜಯನಗರ ಸಾಮ್ರಾಜ್ಯದ ಪ್ರಾಂತ್ಯಾಡಳಿತದಲ್ಲಿ ಭಾಗಶಃ ಸ್ವತಂತ್ರ ದರ್ಜೆಯನ್ನು ಹೊಂದಿದ ಅನೇಕ ಸಾಮಂತರಿದ್ದರು. ಅವರು ಕ್ರಿ.ಶ. ೧೭ ನೆಯ ಶತಮಾನದಲ್ಲುಂಟಾದ ಅಸ್ತವ್ಯಸ್ತತೆಯಲ್ಲಿ ಸ್ವತಂತ್ರರಾದರು. ಪ್ರೊ. ನೀಲಕಂಠಶಾಸ್ತ್ರಿ ವಿಜಯನಗರ ಸಾಮ್ರಾಜ್ಯದ ಆಡಳಿತ ಸಂಸ್ಥೆಗಳ ವಿಚಾರವಾಗಿ ಬರೆಯುತ್ತ, ಚೋಳರ ಆಡಳಿತದಲ್ಲಿದ್ದ ಸ್ವಯಮಾಡಳಿತದ ಗ್ರಾಮಗಳು ವಿಜಯನಗರ ಕಾಲದಲ್ಲಿ ಸೈನಿಕ ಆವಶ್ಯಕತೆಗಳ ಒತ್ತಡ ಮತ್ತು ಸಾಮಂತ ನಾಯಕರಿಂದ ಅಳಿದುಹೋಯಿತೆನ್ನುತ್ತಾರೆ.[5] ಈ ಅಭಿಪ್ರಾಯಕ್ಕೆ ಮನ್ನಣೆ ಕೊಡುವುದು ಸ್ವಲ್ಪ ಕಷ್ಟ. ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸಂಸ್ಥೆಗಳು ನಶಿಸಿಹೋಗಲಿಲ್ಲ. ಅವು ಗ್ರಾಮಗಳು ಮತ್ತು ಅಗ್ರಹಾರಗಳಲ್ಲಿ ಮುಂದುವರಿದುದನ್ನು ಮುಂದಿನ ಅಧ್ಯಾಯದಲ್ಲಿ ವಿಶದಪಡಿಸಲಾಗಿದೆ.

---

1. Heras: *Aravidu Dynasty*, p. 360.
2. 49 of 1939.
3. *CP*, No. 9 of 1906.
4. 122 of 1907.
5. Nilakanta Sastri K. A.: *A History of South India* (Madras II Edition, 1958), p. 11.

## ಅಧ್ಯಾಯ ೩

# ಗ್ರಾಮಗಳು ಮತ್ತು ಅಗ್ರಹಾರಗಳು

ಆಡಳಿತವನ್ನು ಸೂಕ್ತವಾಗಿ ನಡೆಸಿಕೊಂಡು ಬರಲು ವಿಜಯನಗರ ಸಾಮ್ರಾಜ್ಯವನ್ನು ಸೀಮೆ ಅಥವಾ ನಾಡು, ಸ್ಥಳ ಮತ್ತು ಗ್ರಾಮಗಳೆಂಬ ಅನೇಕ ಆಡಳಿತ ವಿಭಾಗಗಳನ್ನಾಗಿ ವಿಂಗಡಿಸಲಾಗಿತ್ತು. ತಮಿಳು ಜಿಲ್ಲೆಗಳಲ್ಲಿ ಹಿಂದೆ ಚೋಳರ ಕಾಲದಲ್ಲಿದ್ದ ಪ್ರಾದೇಶಿಕ ವಿಭಾಗಗಳನ್ನು ಮುಂದುವರಿಸಲಾಯಿತು. ಮೊದಲನೆಯ ಬುಕ್ಕನ ಆಳ್ವಿಕೆಯಲ್ಲಿ ಹಿಂದಿನ ಚೋಳ ಮತ್ತು ಪಾಂಡ್ಯ ರಾಜ್ಯಗಳ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳಲಾಗಿತ್ತು. ಚೋಳರ ಕಾಲದಲ್ಲಿದ್ದಂತೆಯೇ ಕೊಟ್ಟಂ, ನಾಡು, ವಳನಾಡು ಮತ್ತು ಮಂಡಲಂ ಎಂಬ ವಿಭಾಗಗಳು ಅಸ್ತಿತ್ವದಲ್ಲಿದ್ದುವು. ತೆಲಗು ಮತ್ತು ಕನ್ನಡ ಭಾಗಗಳಲ್ಲಿಯೂ ಹಿಂದೆ ಇದ್ದಂತೆಯೇ ಆಡಳಿತ ವಿಭಾಗಗಳನ್ನು ಶಾಸನಗಳು ತಿಳಿಸುತ್ತವೆ.

ಗ್ರಾಮವು ಪ್ರಾಂತ್ಯ ವ್ಯವಸ್ಥೆಯ ಏಕಾಂಶವಾಗಿತ್ತು. ಪ್ರತಿ ಗ್ರಾಮವೂ ಒಂದು ಆಡಳಿತ ಭಾಗವಾಗಿತ್ತು. ಪ್ರತಿ ಗ್ರಾಮದಲ್ಲೂ ಒಂದು ಅಥವಾ ಹೆಚ್ಚಿನ ಪಾಳೆಯಗಳಿದ್ದುವು. ಹಲವು ಗ್ರಾಮಗಳನ್ನು ಸೇರಿಸಿ **ಸ್ಥಳ** ಎಂದು ಕರೆಯಲಾಗುತ್ತಿತ್ತು. ಅರವೀಡು ವಂಶದ ಆಳ್ವಿಕೆಯಲ್ಲಿ **ಸ್ಥಳ** ಎಂಬ ಹೆಸರಿನ ಬದಲು **ಸಮ್ಮತ್** ಅಥವಾ **ಸಮುತು** ಎಂಬ ಹೆಸರುಗಳನ್ನು ಬಳಸಲಾಗುತ್ತಿತ್ತು. ಉದಾಹರಣೆಗೆ, ಕ್ರಿ.ಶ. ೧೫೧೭ರ ನಂಜನಗೂಡು ತಾಲ್ಲೂಕಿನ ಒಂದು ಶಾಸನವು ಬಳಗುಳದ (ಬೆಳಗೊಳ) **ಸಮ್ಮತ್** ಎಂದು ತಿಳಿಸುತ್ತದೆ.[1] ಕ್ರಿ.ಶ. ೧೫೫೩ ರ ಹಿರಿಯೂರಿನ ಒಂದು ಶಾಸನದಲ್ಲಿ ಧರ್ಮಾಪುರ **ಸಮ್ಮತ್** ಎಂಬ ದಾಖಲೆ ಇದೆ.[2] ಹಲವು ಸ್ಥಳಗಳನ್ನು ಒಟ್ಟುಗೂಡಿಸಿ **ಸೀಮೆ** ಅಥವಾ **ನಾಡು** ಎಂದು ಕರೆಯಲಾಗುತ್ತಿತ್ತು. ಡಾ. ವೆಂಕಟರಮಣಯ್ಯನವರ ಪ್ರಕಾರ ಸೀಮೆ ಎಂಬ ಪದವನ್ನು ಎರಡು ಅರ್ಥಗಳಲ್ಲಿ ಉಪಯೋಗಿಸಲಾಗಿತ್ತು. ಅಷ್ಟ ಗ್ರಾಮ ಸೀಮೆ ಮತ್ತು ಬಾಗೂರು ಸೀಮೆಯಲ್ಲಿ ಅದು ಒಂದು ವಿಶಾಲವಾದ ಪ್ರದೇಶವನ್ನು ಸೂಚಿಸುತ್ತದೆ. ವೃತ್ತಿಯೇ ಸೀಮೆ ಮತ್ತು ಸಕಲ ಸೀಮೆಗಳಲ್ಲಿ ಅದು ಸರ್ಕಾರವು ಆಡಳಿತಾನುಕೂಲಕ್ಕೆ ರಚಿಸಿದ ಕೃತಕ ಗ್ರಾಮಗಳ ಒಂದು ಗುಂಪನ್ನು ಸೂಚಿಸುತ್ತದೆ.[3] ಕನ್ನಡ ಪ್ರದೇಶದಲ್ಲಿ ನಾಡು ಎಂಬ ವಿಭಾಗವನ್ನು ತೆಲಗು ಪ್ರದೇಶದಲ್ಲಿ ಸೀಮ ಎಂದು ಕರೆಯುತ್ತಿದ್ದರು. ಗಂಡಿಕೋಟ ಸೀಮ, ಚಂಗಲ ಮರ್ರಿ ಸೀಮ ಮತ್ತು ಕೊಂಡವೀತಿ ಸೀಮ ಇದಕ್ಕೆ ಉದಾಹರಣೆಗಳು.

---

1. *EC*, III, Nj. 10.
2. *EC*, XI, Hr. 36.
3. Venkataramanayya : *Studies*, p. 147.

ನಾಡು ಅಥವಾ ಸೀಮ ಮತ್ತು ರಾಜ್ಯದ ನಡುವೆ ನಾವು **ವಳಿತ** ಎಂಬ ಒಂದು ಪುನರ್ವಿಭಾಗವನ್ನು ಕಾಣುತ್ತೇವೆ.[1] ಅನೇಕ ಕನ್ನಡ ಶಾಸನಗಳು ವಳಿತ ಎಂಬ ಪದಕ್ಕೆ **ವೇಂಠೆಯು** ಅಥವಾ ವೇಂಠೆ ಎಂಬ ಪದವನ್ನು ಉಪಯೋಗಿಸುತ್ತವೆ.[2] ವಳಿತ ಅಥವಾ ವೇಂಠೆಯು ಸ್ಥಳಕ್ಕಿಂತ ದೊಡ್ಡದಾಗಿ ರಾಜ್ಯಕ್ಕಿಂತ ಚಿಕ್ಕದಾಗಿದ್ದಿತು. ಉದಾಹರಣೆಗೆ, ಶಾಸನಗಳು ಹಸ್ತಿನಾವತಿ ವಳಿತದಲ್ಲಿದ್ದ ನಾಡುಗಳ ಪಟ್ಟಿಯನ್ನು ಕೊಡುತ್ತವೆ: ಕ್ರಿ.ಶ. ೧೫೫೪ರ ಗೂಟಿ ತಾಲ್ಲೂಕಿನ ರಾಗುಲಪಾಡು ಶಾಸನವೊಂದು ಹಸ್ತಿನಾವತಿ ವಳಿತದಲ್ಲಿ ಮುದನಾಡನ್ನು ಹೆಸರಿಸುತ್ತದೆ.[3] ಗೂಟಿ ತಾಲ್ಲೂಕಿನ ತಿಮ್ಮಚೆರ್ಲದ ಒಂದು ಶಾಸನವು ಗುಟ್ಟವಳಿತವನ್ನು ಹೆಸರಿಸುತ್ತದೆ.[4] ಇದೇ ರೀತಿ ವಿಜಯನಗರ ಸಾಮ್ರಾಜ್ಯದ ಉದಯಗಿರಿ, ಪೆನುಗೊಂಡ ಮತ್ತು ಹಂಪಿ ಪ್ರಾಂತ್ಯಗಳನ್ನು ಅನೇಕ ವಳಿತಗಳನ್ನಾಗಿ ವಿಂಡಿಗಸಲಾಗಿದ್ದಿತು.

ಆಡಳಿತ ವಿಭಾಗಗಳಲ್ಲಿ ನಾಲ್ಕು ಮುಖ್ಯವಾದುವು. ಅವು ನಾಡು, ಗ್ರಾಮ, ಅಗ್ರಹಾರ ಮತ್ತು ಪಟ್ಟಣ ಅಥವಾ ನಗರ. ಅವುಗಳಲ್ಲಿದ್ದ ಆಡಳಿತ ಸಂಸ್ಥೆಗಳು ಕ್ರಮವಾಗಿ **ನಾಡು**, ಊರು, ಮಹಾಸಭಾ ಅಥವಾ ಸಭ ಮತ್ತು ನಗರ.

ಚೋಳರ ಮತ್ತು ಚಾಳುಕ್ಯರ ಕಾಲದಲ್ಲಿ ಸ್ವಯಮಾಧಿಪತ್ಯಹೊಂದಿದ ಗ್ರಾಮಗಳಿದ್ದುವು. ಅವು ವಿಜಯನಗರ ಸಾಮ್ರಾಜ್ಯದಲ್ಲಿ ಸಂಪೂರ್ಣವಾಗಿ ನಶಿಸಿಹೋಗಲಿಲ್ಲ. ಸಾಮ್ರಾಜ್ಯದಲ್ಲಿ ಕೇಂದ್ರೀಕೃತ ಸರ್ಕಾರವಿದ್ದರೂ ಸ್ವಯಮಾಧಿಪತ್ಯ ಹೊಂದಿದ ಗ್ರಾಮಗಳ ಅಸ್ತಿತ್ವಕ್ಕೆ ಮತ್ತು ಅವುಗಳು ಮಾಡುತ್ತಿದ್ದ ಕರ್ತವ್ಯಗಳಿಗೆ ಸಾಕ್ಷ್ಯವಿದೆ. ವಿಜಯನಗರ ಸಾಮ್ರಾಟರು ಸ್ಥಳೀಯ ಸಂಸ್ಥೆಗಳ ಅಧಿಕಾರವನ್ನು ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಲು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ.

**ಗ್ರಾಮಾಡಳಿತ:** ದಕ್ಷಿಣ ಭಾರತದ ಗ್ರಾಮಾಡಳಿತದಲ್ಲಿ ಜನರ ಸಹಕಾರ ಗಮನಾರ್ಹವಾದ ಒಂದು ವಿಶೇಷ ಗುಣವಾಗಿತ್ತು. ಈ ಸ್ಥಳೀಯ ಸಂಸ್ಥೆಗಳ ಸ್ವಭಾವ ಮತ್ತು ಅಧಿಕಾರವನ್ನು ವಿಜಯನಗರ ಕಾಲಕ್ಕೆ ಮೊದಲೇ ತಮಿಳುನಾಡು ಮತ್ತು ಕರ್ನಾಟಕದಲ್ಲಿ ರೂಪಿಸಲಾಗಿತ್ತು. ವಿಜಯನಗರ ಕಾಲದ ಹಿಂದಿನ ಗ್ರಾಮಾಡಳಿತದ ಮುಖ್ಯ ಲಕ್ಷಣಗಳ ಅಧ್ಯಯನ, ವಿಜಯನಗರ ಕಾಲದಲ್ಲಿನ ಅಧ್ಯಯನಕ್ಕೆ ಹಿನ್ನೆಲೆಯಾಗುತ್ತದೆ. ಗ್ರಾಮಗಳ ಪ್ರಜಾಸಮುದಾಯದಲ್ಲಿ ಸೌಮ್ಯ ಜ್ಞಾನವಿದ್ದಿತೆಂದು ಡಾ. ಮಹಾಲಿಂಗಂ ಅಭಿಪ್ರಾಯಪಟ್ಟಿದ್ದಾರೆ. ಗ್ರಾಮ ಸಮುದಾಯಗಳ ಬೆಳವಣಿಗೆ

1. Venkataramanayya : *Studies*, p. 147.
2. *EC*, III, Nj. 35 ; *EC*, XII, Ck. 6 and 10.
3. *SII*, IX, ii, No. 652.
4. *Ibid.*, No. 427.

ಕ್ರಮೇಣವಾಗಿ ನಡೆದು ಮತ್ತು ಅವು ಬದಲಾಗುತ್ತಿದ್ದ ಪರಿಸ್ಥಿತಿಗಳಿಗೆ ಹೊಂದಿಕೊಳ್ಳು ತ್ತಿದ್ದಿತೆಂದು ಅಭಿಪ್ರಾಯ ಪಟ್ಟಿದ್ದಾರೆ.[1]

ತಮಿಳುನಾಡಿನಲ್ಲಿ ವಿಜಯನಗರ ಕಾಲದ ಮೊದಲು ಗ್ರಾಮ ಸಭೆಗಳು ಕಂದಾಯ ಮತ್ತು ನ್ಯಾಯ ವಿಷಯಗಳಲ್ಲಿ ಹೆಚ್ಚಿನ ಸ್ವಾತಂತ್ರ್ಯವನ್ನು ಹೊಂದಿದ್ದವು. ಕ್ರಿ.ಶ. ೯ ರಿಂದ ೧೩ನೆಯ ಶತಮಾನಗಳ ಮಧ್ಯೆ ಚೋಳರ ರಾಜಕೀಯ ಪರಮಾಧಿಪತ್ಯದಲ್ಲಿ ಗ್ರಾಮ ಸಭೆಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದುವು. ಕ್ರಿ.ಶ. ೯ ನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಮೂರು ರೀತಿಯ ಗ್ರಾಮ ಸಭೆಗಳಿದ್ದುವು. ಇದರಲ್ಲೊಂದು ಸಂಪೂರ್ಣವಾಗಿ ಬ್ರಾಹ್ಮಣರನ್ನೊಳಗೊಂಡಿದ್ದ **ಅಗ್ರಹಾರದ ಮಹಾಸಭೆ** ಅಥವಾ **ಸಭೆ** ಆಗಿದ್ದಿತು. ಮೊದಲನೆಯ ಪರಾಂತಕನ ಕಾಲದ ಉತ್ತರ ಮಲ್ಲೂರು ಶಾಸನಗಳು **ಬ್ರಹ್ಮದೇಯ** ಅಥವಾ ಬ್ರಾಹ್ಮಣ ಗ್ರಾಮಗಳ ಸದಸ್ಯತ್ವದ ವಿವರಗಳನ್ನು ತಿಳಿಸುತ್ತದೆ. ಉಳಿದವು ರೈತರು, ವ್ಯಾಪಾರಸ್ಥರು ಮತ್ತು ಇತರ ಕಸುಬುದಾರರನ್ನೊಳಗೊಂಡಿತ್ತು. ಈ ರೀತಿಯ ಸಭೆಗಳನ್ನು **ಊರ್** ಮತ್ತು **ನಗರೊತ್ತೊವ್** ಎಂದು ಕರೆಯಲಾಗುತ್ತಿತ್ತು.[2]

ವಿಜಯನಗರದ ಹಿಂದಿನ ಕಾಲದಲ್ಲಿ ಆಂಧ್ರಪ್ರದೇಶದಲ್ಲೂ ಗ್ರಾಮ ಸಮುದಾಯವು ಅಚ್ಚುಕಟ್ಟಾಗಿದ್ದಿತು. ಗ್ರಾಮದ ವ್ಯವಹಾರವನ್ನು ಗ್ರಾಮಸ್ಥರೇ ನಡೆಸಿಕೊಂಡು ಹೋಗುತ್ತಿದ್ದರು. ಗ್ರಾಮವು ಆರ್ಥಿಕ ಕ್ಷೇತ್ರದಲ್ಲಿ ಸ್ವತಂತ್ರವಾಗಿದ್ದಿತು.[3]

ಕರ್ನಾಟಕದ ಸಮುದಾಯ ವ್ಯವಸ್ಥೆಯ ಲೌಕಿಕ ಮತ್ತು ಮತೀಯ ವಿಚಾರ ಗಳನ್ನು "ಲೋಕಲ್ ಸೆಲ್ಫ್ ಗೌರ್ನಮೆಂಟ್ ಇನ್ ಮೆಡೀವಲ್ ಕರ್ನಾಟಕ" ಎಂಬ ಗ್ರಂಥದಲ್ಲಿ ಚರ್ಚಿಸಲಾಗಿದೆ. ಈ ಗ್ರಂಥದಲ್ಲಿ ಕ್ರಿ.ಶ. ೧೦ ನೇ ಶತಮಾನದ ಅಂತ್ಯದಿಂದ ಕ್ರಿ.ಶ. ೧೪ ನೇ ಶತಮಾನದ ಆದಿಯವರೆಗೆ ಈ ವಿಷಯಗಳನ್ನು ಚರ್ಚಿಸಲಾಗಿದೆ. ಅಲ್ಲದೆ ಈ ಗ್ರಂಥದಲ್ಲಿ, ಕರ್ನಾಟಕದಲ್ಲಿನ ಗ್ರಾಮಗಳಲ್ಲಿ, ಪಟ್ಟಣಗಳಲ್ಲಿ ಮತ್ತು ಗ್ರಾಮಸಮುದಾಯಗಳಲ್ಲಿ ತಮ್ಮ ಸಭೆಗಳ ಮೂಲಕ ಪ್ರಜೆಗಳು ತಾವೇ ಆಡಳಿತ ನಡೆಸುತ್ತಿದ್ದುದನ್ನು ತಿಳಿಸುತ್ತದೆ.[4] ಗ್ರಾಮ ಮತ್ತು ನಗರಗಳ ಸಂಘ ಜೀವನದಲ್ಲಿ ಸಾರ್ವಜನಿಕ ವಿಚಾರಗಳಲ್ಲಿ ಪ್ರಜೆಗಳ ಸಹಕಾರ ಪ್ರವೃತ್ತಿ ಮತ್ತು ಆಸಕ್ತಿ ನಮಗೆ ತಿಳಿಯಬರುತ್ತದೆ.

ಕರ್ನಾಟಕದಲ್ಲಿ ಗ್ರಾಮ, ಅಗ್ರಹಾರ ಮತ್ತು ಪಟ್ಟಗಳೆಂಬ ಪ್ರಾದೇಶಿಕ ವಿಭಾಗ ಗಳಿದ್ದು ಅಲ್ಲಿ ಕ್ರಮವಾಗಿ **ಊರು, ಮಹಾಜನರು** ಮತ್ತು **ನಗರ** ಎಂಬ ಮೂರು

---

1. Mahalingam, *SIP.*, p. 335.
2. Saletore : *Soc. & Pol. Life*, I p. 333.
3. Somasekhara Sarma M. : *History of the Reddi Kingdoms* (A. D.1325- A. D. 1445, Waltair, 1948), p. 223.
4. Dikshit G. S. : *Local Self Government in Mediaeval Karnataka* (Dharwar, 1964), p. 1.

ವಿಧವಾದ ಸಭೆಗಳಿದ್ದುವು. ಗಾವುಂಡ ಅಥವಾ ಮುಖಂಡನು ಗ್ರಾಮಾಡಳಿತದಲ್ಲಿ ಪ್ರಮುಖ ವ್ಯಕ್ತಿಯಾಗಿದ್ದನು. ಕರಣಿಕನನ್ನು ಸೇನಬೋವ ಅಥವಾ ಕುಲಕರಣಿ ಎಂದು ಕರೆಯಲಾಗುತ್ತಿತ್ತು. ಗ್ರಾಮ ಸೇವಕರು ಹನ್ನೆರಡು ಮಂದಿ ಇದ್ದು ಅವರನ್ನು ಆಯಗಾರರೆಂದು ಕರೆಯಲಾಗುತ್ತಿತ್ತು. ಇವರು ತಳರಿ, ಅಂಬಿಗ, ಬರಕ ಅಥವಾ ಪಹರೆಯವನು, ತೋಟಿಗ, ಕಲ್ಲುಕುಟುಕ, ಬಡಗಿ, ಅಕ್ಕಸಾಲೆ, ಮರಗೆಲಸದವನು, ಕ್ಷೌರಿಕ, ಜೋಯಿಸ ಮುಂತಾದವರು.[1] ಸಭಾ, ಊರು ಮತ್ತು ನಾಡು ಎಂಬ ಸಂಸ್ಥೆಗಳು, ತೆರಿಗೆಗಳ ವಸೂಲಿ ಮತ್ತು ಆದಾಯದ ಆಡಳಿತ ಮುಂತಾದ ಕರ್ತವ್ಯಗಳನ್ನು ನೆರವೇರಿಸುತ್ತಿದ್ದುವು.

ವಿಜಯನಗರ ಸಾಮ್ರಾಟರ ಆಳ್ವಿಕೆಯಲ್ಲಿ ಗ್ರಾಮ ಸಭೆಗಳು ಜೀವಂತವಾಗಿದ್ದುವು. ಸಾಮ್ರಾಟರು ಪುರಾತನ ಸಂಪ್ರದಾಯ ಪಾಲಕರೆಂದು ಶಾಸನಗಳಲ್ಲಿ ತಿಳಿಸಿದ್ದಾರೆ. ಕ್ರಿ.ಶ. ೧೫೬೫ ರ ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯ ಒಂದು ಶಾಸನದ ಪ್ರಕಾರ, ರಾಮದೇವ ಮಹಾರಾಯನ ಆಳ್ವಿಕೆಯಲ್ಲಿ ಬಿಲ್ಲಪ್ಪನಾಯಕ ಮತ್ತು ಕೆಂಗಪ್ಪ ನಾಯಕರು ಲಿಂಗಣ್ಣನೆಂಬುವನಿಗೆ ಒಂದು ಧರ್ಮಶಾಸನವನ್ನು ಕೊಟ್ಟರು. ಇದರ ಪ್ರಕಾರ, ಸಂತೆಬೆನ್ನೂರು ಸೀಮೆಯಲ್ಲಿ ಸೇನಬೋವ, ಜ್ಯೋತಿಷ, ಪುರೋಹಿತ ಮುಂತಾದ ಹುದ್ದೆಗಳು ಲಿಂಗಣ್ಣನಿಗೆ ಸೇರಿದುದೆಂದು ಸ್ಥಳದ ಜನರು ಹೇಳಿದಾಗ ಆ ಹುದ್ದೆಗಳನ್ನು ಅವನಿಗೆ ಕೊಟ್ಟು, ಅಧಿಕಾರವನ್ನು ಸಂಪ್ರದಾಯದಂತೆ ವಂಶಪಾರಂಪರ್ಯವಾಗಿ ಅನುಭವಿಸಬೇಕೆಂದು ಆಜ್ಞೆ ಮಾಡಲಾಯಿತು.[2] ವಿಜಯನಗರ ಸಾಮ್ರಾಟರು "ಪೂರ್ವಮರ್ಯಾದೆಯ" ಪಾಲಕರೆಂದು ಹೇಳಿಕೊಳ್ಳುತ್ತಿದ್ದುದರಿಂದ ಅವರು ಮುಂಚೆ ಇದ್ದ ಅನೇಕ ಗ್ರಾಮ ಚಟುವಟಿಕೆಗಳನ್ನು ಮುಂದುವರಿಸಿದ್ದಿರಬೇಕು.

ಈ ಸಂದರ್ಭದಲ್ಲಿ ಗ್ರಾಮಗಳನ್ನು ಸ್ಥಾಪಿಸಲು ವೆಚ್ಚವಾಗುತ್ತಿದ್ದ ಹಣವನ್ನು ತಿಳಿಯಪಡಿಸುವ ಎರಡು ಶಾಸನಗಳ ಪ್ರಸ್ತಾಪಮಾಡಬಹುದು. ಕ್ರಿ.ಶ. ೧೪೯೪ ರ ತುಮಕೂರು ಜಿಲ್ಲೆಯ ಪಾವಗಡದ ಒಂದು ಶಾಸನವು ವಡ್ಡಿಹನುಮನ ಬೋಯಿಡು ಮತ್ತು ಇತರರು, ತಮ್ಮ ಬಂಧುಗಳಾದ ೬೦ ಸಂಸಾರಗಳಿಗೆ ಹೇಳಿ ಕಳುಹಿಸಿ ಹೋಮಗುಂಡದ ಸಮೀಪ ಮೂರು ಗ್ರಾಮಗಳನ್ನು ಸ್ಥಾಪಿಸಿ, ಒಂದು ಕೆರೆಯನ್ನು ಕಟ್ಟಿಸಿದುದಲ್ಲದೆ ತೋಟಗಳನ್ನು ಮಾಡಿಸಿದರು. ಇವುಗಳಿಗೆ ತಗುಲಿದ ವೆಚ್ಚ ೧೧೫೦ ರಾಮಟೆಂಕಿ ವರಹ, ೧೧೬೦ ಪುತ್ತಲೀಕಾಸು ಮತ್ತು ೩೧೫೦ ವರಹಗಳು. ಅನಂತರ ಅವರು ತಮ್ಮ ಕುಲಗುರುಗಳಾದ ಮುರುಗಲ ಮುಟ್ಟಪ್ಪನವರನ್ನು ಬರಮಾಡಿ ನಲ್ಲೂರು ಪಟ್ಟಣ, ಮಸಿನಯನ ಬಂಡ್ಯು ಮತ್ತು ನಾಗಪುರಿ ಪಟ್ಟಣವೆಂಬ ಮೂರು

1. Dikshit G. S.: *op.cit.* p. 67.
2. *EC*, VII, Ci. 62.

ಗ್ರಾಮಗಳನ್ನು ಪ್ರತಿಷ್ಠೆ ಮಾಡಿಸಿದರು.[1] ಕ್ರಿ.ಶ. ೧೪೫೪ ರ ಮೈಸೂರು ಜಿಲ್ಲೆಯ ಗುಂಡ್ಲುಪೇಟೆಯ ಒಂದು ಶಾಸನದ ಪ್ರಕಾರ ದೇವರಾಯ, ಗುಂಡಮರಾಯ ಮತ್ತು ಇತರರು ಕುರುದಿ ಎಂಬ ಗ್ರಾಮವನ್ನು ಸ್ಥಾಪಿಸಿದರು. ಇದಕ್ಕೆ ತಗುಲಿದ ವೆಚ್ಚ ೧೦,೦೮೦ ರಾಮಟೆಂಕಿ ವರಹಗಳು, ೨೦೦೦ ಲಕ್ಷ್ಮೀಪತಿ ವರಹಗಳು ಮತ್ತು ೧೦,೦೫೦ ಪುತ್ತಲೀ ಕಾಸುಗಳು.[2]

## ವಿಜಯನಗರ ಕಾಲದಲ್ಲಿದ್ದ ವಿವಿಧ ಗ್ರಾಮಸಭೆಗಳು

**ಗ್ರಾಮಗಳಲ್ಲಿದ್ದ ದೊಡ್ಡ ಸಭೆಗಳು :** ಶಾಸನಗಳು ಜನರು ಪಾಲ್ಗೊಂಡಿದ್ದ ದೊಡ್ಡ ಗ್ರಾಮಸಭೆಗಳನ್ನು ತಿಳಿಸುತ್ತವೆ. ಕ್ರಿ. ಶ. ೧೪೦೮ ರ ಕೊಯಮತ್ತೂರು ತಾಲ್ಲೂಕಿನ ಸಿಂಗನಲ್ಲೂರು ಗ್ರಾಮದ ಒಂದು ಶಾಸನದ ಪ್ರಕಾರ, ಬಂಡಿಯಹಳ್ಳಿ–ವೋಡೆಯಹಳ್ಳಿಯ ಗೌಡರು, ಸೆಟ್ಟಿಗಳು, ಬ್ರಹ್ಮಚಾರಿಗಳು, ಬ್ರಾಹ್ಮಣರು, ಸೇನಬೋವರು ಮತ್ತು ಹದಿನೆಂಟು ಸಮಯಗಳು ಒಂದು ಒಡಂಬಡಿಕೆಗೆ ಬಂದರು. ಇದು ಜನರು ಪಾಲ್ಗೊಂಡಿದ್ದ ಒಂದು ದೊಡ್ಡಸಭೆಯ ನಿದರ್ಶನವಾಗಿದೆ.[3] ಕ್ರಿ.ಶ. ೧೫೫೬ ರಲ್ಲಿ, ಮಹಾಮಂಡಲೇಶ್ವರ ರಾಮರಾಜ ತಿರುಮಲರಾಜಯ್ಯದೇವ ಮಹಾ ಅರಸುರವರ ಆಜ್ಞಾನುಸಾರ, ನಿಡುಗಲ್ಲಿನ ಮಹಾನಾಯಕಾಚಾರ್ಯ ತಿಮ್ಮಣ್ಣನಾಯಕ, ನಿಡುಗಲ್ಲು ಸೀಮೆಯ ಗೌಡರು ಮತ್ತು ಸೇನಬೋವರು ವರ್ತಕರೊಡಗೂಡಿ ಒಂದು ಗ್ರಾಮವನ್ನು ದಾನವಾಗಿ ಕೊಟ್ಟರು.[4] ಇದು ಮತ್ತೊಂದು ದೊಡ್ಡ ಸಭೆಯ ನಿದರ್ಶನ. ಕರ್ನಾಟಕದ ಗ್ರಾಮಸಭೆಗಳಲ್ಲಿ ವ್ಯಾಪಾರಸಂಸ್ಥೆಗಳು ಮತ್ತು ಇತರ ಸಮೂಹಗಳು ಭಾಗಿಯಾಗಿದ್ದುವು. ಕ್ರಿ.ಶ. ೧೬೬೪ರಲ್ಲಿ ಒಂದು ಗ್ರಾಮಸಭೆಯಲ್ಲಿ ಅಗಲಿ, ಮಡುವಿದಿ, ರಂತವಳಲು, ಹರತಿ, ಹುಲಿಕುಂಟೆ, ಮುರುವಾಗಿಲು, ಸಿವರ, ಹೆಂಜೆರೆ, ಇತರ ಸುತ್ತಮುತ್ತಲಿನ ಗ್ರಾಮಗಳ ಗೌಡರು, ಸೇನಬೋವರು, ಸೆಟ್ಟಿಗಳು ಮತ್ತು ಪಟ್ಟಣಸ್ವಾಮಿಗಳು ಭಾಗವಹಿಸಿದ್ದರು.[5] ಊರುಸಭೆಯನ್ನು, ಒಕ್ಕಲು, ಪ್ರಜೆ, ಹಲರು, ಹದಿನೆಂಟು ಜಾತಿ ಅಥವಾ ಸಮಯ, ಜನನಿ, ಜಗತ್ತು ಮತ್ತು ಗಾನ್‌ಕಾರ್ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು.

**ಒಕ್ಕಲು :** ಗ್ರಾಮಸಭೆಯನ್ನು ಸೂಚಿಸಲು ಆಚರಣೆಯಲ್ಲಿದ್ದ ಒಕ್ಕಲು ಎಂಬ ಪದವು, ಊರಿನ ಮನೆಗಳ ಯಜಮಾನರನ್ನು ಮತ್ತು ರೈತರನ್ನು ಸೇರಿದ್ದಿತು. ದಾನಗಳನ್ನು ಮಾಡಲು ಅವರ ಅನುಮತಿಯನ್ನು ಪಡೆಯಲಾಗುತ್ತಿತ್ತು. ಕುಂದಾಪುರದ

---

1. *EC*, XII, p. 72.
2. *EC*, X, Gd, 22.
3. *SII*, IX [ii], No. 433.
4. *Ibid.*, No. 665.
5. *MAR*, 1918, p. 54.

ಸಮೀಪದ ಕೋಟೇಶ್ವರದ ಒಂದು ಶಾಸನವು, ಕ್ರಿ.ಶ. ೧೩೬೪ ರಲ್ಲಿ ಬುಕ್ಕಣ್ಣ ಒಡೆಯರ ಆಳ್ವಿಕೆಯಲ್ಲಿ, ಮಹಾ ಪ್ರಧಾನ ಮಲ್ಲಿಯ–ದಣ್ಣಾಯಕ ಬಾರಕೂರು ರಾಜ್ಯದ ಹತೋಟಿ ಹೊಂದಿದ್ದಾಗ, ಚಕ್ಕರೆ ಗ್ರಾಮದ ೩೦ ಒಕ್ಕಲುಗಳು ಮತ್ತು ಇತರರು ಕೋಟೇಶ್ವರ ದೇವರಿಗೆ ೧೨ ಹೊನ್ನುಗಳನ್ನು ಅಲ್ಲದೆ ತರಿ ಮತ್ತು ಒಣ ಜಮೀನುಗಳನ್ನು ದಾನ ಕೊಟ್ಟರು. ಈ ಶಾಸನದಲ್ಲಿ ಚಕ್ಕರೆಯ ಊರು, ೩೦ ಒಕ್ಕಲು ಎಂಬ ಪದಗಳನ್ನು ಬಳಸಲಾಗಿದೆ. ದಾನಮಾಡಲು ಅವರ ಒಪ್ಪಿಗೆ ಪಡೆಯಲಾಯಿತು. ಅದು ಶಾಸನದ ಪ್ರಕಾರ ಗೋಷ್ಠಿಮಾಡಿದ ಧರ್ಮ.[1] ಈ ಶಾಸನದಿಂದ ಗ್ರಾಮ ಸಭೆಯನ್ನು ಸೂಚಿಸಲು **ಒಕ್ಕಲು** ಎಂಬ ಪದವನ್ನು ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ. ಮನೆಗಳ ಯಜಮಾನರು ಅದಕ್ಕೆ ಸದಸ್ಯರಾಗಿದ್ದಿರಬೇಕು. ಈ ಶಾಸನವು ಒಕ್ಕಲು ಸಭೆ ಸೇರಿದ್ದುದನ್ನು ಸೂಚಿಸುವುದಲ್ಲದೆ ಸಭೆಗೆ ಗೋಷ್ಠಿ ಎಂಬ ಪದವನ್ನು ಉಪಯೋಗಿಸಿದೆ.

**ಪ್ರಜೆ :** ಪ್ರಜೆ ಎಂಬ ಪದದೊಡನೆ ಸಾಮಾನ್ಯವಾಗಿ ಸಮಸ್ತ ಎಂಬ ಪದವನ್ನು ಉಪಯೋಗಿಸಲಾಗಿದೆ. ಕ್ರಿ.ಶ. ೧೫೨೦ ರ ಬಳ್ಳಾರಿ ತಾಲ್ಲೂಕಿನ ಹವಿನಹಲು ವೀರಪುರದ ಒಂದು ಶಾಸನದ ಪ್ರಕಾರ ದೊಂಡವತೆಯ ಗ್ರಾಮಸ್ಥರು ಮಲೆಸನಿ ಎಂಬುವನಿಗೆ ಗ್ರಾಮದ ಕೆರೆಯನ್ನು ದುರಸ್ತಿಮಾಡಲು ಭೂಮಿಯನ್ನು ದಾನಮಾಡಿದರು. ಈ ಶಾಸನದಲ್ಲಿ "ದೊಂಡವತೆಯ ಗ್ರಾಮದ **ಸಮಸ್ತ ಪ್ರಜೆಗಳು**" ಎಂದು ಬರೆಯಲಾಗಿದೆ.[2] ಆದರೆ ಅವರ ಸಂಖ್ಯೆಯನ್ನು ತಿಳಿಸಿಲ್ಲ. ಗ್ರಾಮಗಳು ಅಲ್ಲಿನ ಸಮಸ್ತ ನಿವಾಸಿಗಳನ್ನು ಪ್ರತಿನಿಧಿಸುವ ಪ್ರಜೆ ಎಂಬ ಸಭೆಯನ್ನು ಹೊಂದಿದ್ದ ಹಾಗೆ ಕಾಣುತ್ತದೆ. ಕ್ರಿ. ಶ. ೧೪೩೬ ರ ರಾಯಚೂರು ಜಿಲ್ಲೆಯ ಮುದ್‌ಗಲ್‌ನ ಒಂದು ಶಾಸನವು "ಗ್ರಾಮಾನುಗ್ರಾಮದ ಗೌಡ ಪ್ರಜೆಗಳು" (ಎಂದರೆ ಗ್ರಾಮದ ಯಜಮಾನ ಮತ್ತು ಪ್ರಜೆಗಳು) ಎಂಬ ಪದಗಳನ್ನು ಉಪಯೋಗಿಸಿರುವುದು ಗ್ರಾಮ ಸಭೆಯನ್ನು "ಪ್ರಜೆ" ಎಂದು ಕರೆಯುತ್ತಿದ್ದರೆಂಬುದಕ್ಕೆ ಸಾಕ್ಷ್ಯವಾಗಿದೆ.[3]

**ಹಲರು :** ಗ್ರಾಮ ಸಭೆಯನ್ನು ಸೂಚಿಸಲು **ಹಲರು** ಅಥವಾ **ಸಮಸ್ತ-ಹಲರು** ಎಂಬ ಪದವನ್ನು ಶಾಸನಗಳಲ್ಲಿ ಬಳಸಲಾಗಿದೆ. ಕುಂದಾಪುರ ತಾಲ್ಲೂಕಿನ ಬಸರೂರಿನ ಕ್ರಿ.ಶ. ೧೫೦೬ ರ ವೀರ ನರಸಿಂಗದೇವರಾಯನ ಕಾಲದ ಒಂದು ಶಾಸನವು, ಬಸವರಸ ಒಡೆಯನು ಬಡಕೆರೆಯ ಗ್ರಾಮಸ್ಥರಿಂದ ಸ್ವಲ್ಪ ಚಂದ ಹಣವನ್ನು ವಸೂಲಿ ಮಾಡಿದನೆಂದು ದಾಖಲೆ ಮಾಡಿದೆ. ಅದು ಬಡಕೆರೆಯ ಹಲರು ಆ ಸ್ಥಳದ ಬ್ರಾಹ್ಮಣರಿಂದ ವಸೂಲಾಗುತ್ತಿದ್ದ ಬಡ್ಡಿಯ ಹಣವನ್ನು ದೇವರ ಸೇವೆಗೆ ದಾನಮಾಡಿದರೆಂದು ತಿಳಿಸು

---

1. *SII*, IX, [ii], No. 407.
2 *Ibid.*, No. 528.
3. Desai, P. B. [Ed.] : *A Corpus of Inscriptions in the Kannda Districts of Hyderabad State* (Hyderabad, 1958), No. 18.

ತ್ತದೆ.[1] ಕ್ರಿ.ಶ. ೧೪೪೭ ರ ಮತ್ತೊಂದು ಶಾಸನವು ಪಡುವಕೇರಿಯ ಹಲರು ಎಂದು ತಿಳಿಸುತ್ತದೆ.[2] ಈ ನಿದರ್ಶನಗಳಿಂದ ಗ್ರಾಮದ ನಿವಾಸಿಗಳನ್ನು ಹಲರು ಅಥವಾ ಹಲವರು ಎಂದು ಕರೆಯುತ್ತಿದ್ದರೆಂದು ತಿಳಿಯಬಹುದು.

ಹದಿನೆಂಟು ಜಾತಿ: ಮಧ್ಯಯುಗದ ಕರ್ನಾಟಕದಲ್ಲಿ ಗ್ರಾಮ ಸಭೆಯನ್ನು ಸೂಚಿಸಲು **ಹದಿನೆಂಟು ಜಾತಿ** ಅಥವಾ **ಸಮಯ** ಎಂಬ ಪದಗಳನ್ನು ಉಪಯೋಗಿಸಲಾಗುತ್ತಿತ್ತು. ಬೆಂಗಳೂರು ಜಿಲ್ಲೆಯ ಕನಕನಹಳ್ಳಿಯ ಕ್ರಿ.ಶ. ೧೩೧೬ ರ ಒಂದು ಶಾಸನವು, ಹೊಮ್ಮಲಿಗೆ ಮತ್ತು ಚೊಕ್ಕನಾಡುಗಳ ಸಮಸ್ತಗೌಡರು ಹದಿನೆಂಟು ಸಮಯಗಳ ಸಹಿತ, ಪಟ್ಟಣಸ್ವಾಮಿ ಚೊಕ್ಕ ಸೆಟ್ಟಿಗೆ ಗಲಿಹಾಲ್‌ನಲ್ಲಿ ಒಂದು ಸಂತೆಯನ್ನು ಸ್ಥಾಪಿಸುವುದಕ್ಕೆ ಭೂಮಿಯನ್ನು ಕೊಟ್ಟರೆಂದು ತಿಳಿಸುತ್ತದೆ.[3] ವಿಜಯನಗರ ಕಾಲದಲ್ಲಿ, ಕ್ರಿ.ಶ. ೧೪೦೮ ರ ಕೊಯಮತ್ತೂರು ತಾಲ್ಲೂಕಿನ ಸಿಂಗನಲ್ಲೂರು ಶಾಸನವು ಬಂಡಿಯ ಹಳ್ಳಿ-ಮೋಡೆಯ ಹಳ್ಳಿಯ ಹದಿನೆಂಟು ಸಮಯಗಳು ಇತರರೊಡಗೂಡಿ ಒಂದು ಒಪ್ಪಂದಕ್ಕೆ ಬಂದರೆಂದು ತಿಳಿಸುತ್ತದೆ.[4] ಈ ನಿದರ್ಶನಗಳಿಂದ ಹದಿನೆಂಟು ಸಮಯಗಳು ಒಂದು ಪ್ರತಿನಿಧಿ ಸಂಸ್ಥೆಯಾಗಿದ್ದಿತೆಂದು ತಿಳಿಯಬಹುದು.

ಜನನಿ-ಜಗತ್ತು: ವಿಜಯನಗರ ಕಾಲದಲ್ಲಿ ದಕ್ಷಿಣ ಕನ್ನಡದಲ್ಲಿ **ಜನನಿ** ಮತ್ತು **ಜಗತ್ತು** ಎಂದು ಕರೆಯಲ್ಪಟ್ಟ ಗ್ರಾಮ ಸಭೆಗಳು ಅಸ್ತಿತ್ವದಲ್ಲಿದ್ದುವು. ದಕ್ಷಿಣ ಕನ್ನಡದ ಕನ್ಯಾನ ಗ್ರಾಮದ ಕ್ರಿ.ಶ. ೧೩೯೮ ರ ಒಂದು ಶಾಸನವು ಇಮ್ಮಡಿ ಹರಿಹರನು ತನ್ನ ವರ್ಧಂತಿ ಎಂದು ರಾಜಾಡಿ ಕನ್ಯಾನ ಗ್ರಾಮದ ಜಗತ್ತು ಮತ್ತು ಜನನಿಯ ಅನುಮತಿಯಿಂದ ಆ ಗ್ರಾಮದ ಹಲವು ತೆರಿಗೆಗಳನ್ನು ವಲ್ಲಭ ದೇವರಸನಿಗೆ ದಾನಮಾಡಿದನೆಂದು ತಿಳಿಸುತ್ತದೆ.[5] ಈ ಶಾಸನವು ರಾಜಾಡಿಕನ್ಯಾನದ ನಾಲ್ಕೂರಿನ ಆರು ಜನನಿಗಳು ಮತ್ತು ೫೦ ಜಗತ್ತು ಹಲವು ಷರತ್ತುಗಳ ಮೇಲೆ, ಲಿಂಗರಸನಿಗೆ ಭೂಮಿಯನ್ನು ದಾನ ಮಾಡಿದುವೆಂದು ತಿಳಿಸುತ್ತದೆ. ಕ್ರಿ.ಶ. ೧೩೮೪ ರಲ್ಲಿ ಮಹಾ ಪ್ರಧಾನ ಜಕ್ಕರಸ ಒಡೆಯ ವಿಜಯನಗರದ ರಾಜಪ್ರತಿನಿಧಿಯಾಗಿ ಬಾರಕೂರನ್ನು ಆಳುತ್ತಿದ್ದನು. ಈ ಶಾಸನವು ರಾಜಾಡಿಬೆಲ್ಲತೂರಿನ ಜನನಿಗಳು ಅದೇ ಸ್ಥಳದ ಮಹಾಜಗತ್ತುವಿಗೆ ಹಲವು ಹಕ್ಕುಗಳನ್ನು ನೀಡಿದರೆಂದು ತಿಳಿಸುತ್ತದೆ.[6] ಕ್ರಿ. ಶ. ೧೪೦೨ ರ ಉಡುಪಿ ತಾಲ್ಲೂಕಿನ ಎರ್ಮಾಲದ ಒಂದು ಶಾಸನದ ಪ್ರಕಾರ " ಊರ ಪ್ರಜೆ ಜನನಿ "ಗಳು ಒಪ್ಪಿ ಎರ್ಮಾಲದ

1. *SII*, IX [ii] No. 476.
2. *Ibid*., No. 473.
3. *EC*, IX, Kn. 6.
4. *SII*, IX [ii] No. 433.
5. 359 of 1930-31.
6. 357 of 1930-31.

ಜನಾರ್ಧನ ದೇವರ ಸೇವೆಗೆ ಭೂಮಿಯನ್ನು ದಾನ ಮಾಡಿದರೆಂದು ತಿಳಿಸುತ್ತದೆ.[1] ಶಾಸನಗಳಲ್ಲಿ ಗ್ರಾಮಸಭೆಯನ್ನು ಸೂಚಿಸಲು ಗ್ರಾಮ ಜಗತ್ತು ಎಂಬ ಪದವನ್ನು ಉಪಯೋಗಿಸಲಾಗಿದೆ. ಕುಂದಾಪುರದ ಕುಂದೇಶ್ವರ ದೇವಸ್ಥಾನದಲ್ಲಿರುವ ಇಮ್ಮಡಿ ದೇವರಾಯನ ಕಾಲದ ಕ್ರಿ.ಶ. ೧೪೩೫ರ ಒಂದು ಶಾಸನವು, ಬಾರಕೂರು ರಾಜ್ಯವನ್ನಾಳುತ್ತಿದ್ದ ನರಸಿಂಹದೇವ ಒಡೆಯರು, ಕುಂದಾಪುರದ ನಿವಾಸಿಗಳ ಸಭೆಯನ್ನು ಕರೆದು ವಿಚಾರಣೆ ಮಾಡಿ, ಕುಂದೇಶ್ವರ ದೇವರಿಗೆ ಕುಡಕೂರು ದೇವಣ್ಣ ಸೇನಬೋವ ಹಿಂದೆ ಕೊಟ್ಟಿದ್ದ ಭೂಮಿಯನ್ನು ಪುನಃ ಸ್ವಾಧೀನಕ್ಕೆ ಕೊಟ್ಟರೆಂದು ತಿಳಿಸುತ್ತದೆ.[2] ಈ ಶಾಸನಗಳು ವಿಜಯನಗರ ಕಾಲದಲ್ಲಿ ಗ್ರಾಮ ಸಭೆಗಳ ಅಸ್ತಿತ್ವವನ್ನು ಧೃಡಪಡಿಸುತ್ತವೆ. ಡಾ. ಸಾಲತೂರ್ ತಿಳಿಸಿರುವಂತೆ ಈ ಸಭೆಗಳು ವಿಜಯನಗರ ಕಾಲಕ್ಕೆ ಮೊದಲೇ ಇದ್ದವು. ವಿಜಯನಗರ ಕಾಲದಲ್ಲಿ ಇವುಗಳ ಮುಂದುವರಿಕೆಯು ಸರ್ಕಾರದೊಡನೆ ಪ್ರಜೆಗಳ ಸಹಕಾರ ಮತ್ತು ತುಳುವರ ಸಾಮೂಹಿಕ ಚಟುವಟಿಕೆಗಳನ್ನು ರುಜುವಾತು ಮಾಡುತ್ತದೆ. ಜನನಿಯು ಭೂಮಿಯ ಪ್ರಶ್ನೆಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಪರಿಶೀಲಿಸುತ್ತಿದ್ದ ಒಂದು ಸಾಮಾನ್ಯ ಸಭೆಯಾಗಿದ್ದಿತು. ಡಾ. ರಮೇಶ್ ಪ್ರಕಾರ ಜನನಿಯು ಭೂ ಮಾಲೀಕರ ಸಂಘವಾಗಿತ್ತು.[3]

**ಗಾನ್‌ಕಾರ್ :** ಮಹಮ್ಮದ್ ಗವಾನ್ ಕ್ರಿ.ಶ. ೧೪೭೨ರಲ್ಲಿ ಗೋವಾವನ್ನು ಆಕ್ರಮಿಸುವವರೆಗೆ ಅದು ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಶಿವಮೊಗ್ಗ ಜಿಲ್ಲೆಯ ಹೊನ್ನಾಲಿ ತಾಲ್ಲೂಕಿನ ಒಂದು ಶಾಸನವು ವೀರವಸಂತ ಮಾಧವರಾಯನನ್ನು ಗೋವಾಪುರ ವರಾಧೀಶ್ವರನೆಂದು ತಿಳಿಸುತ್ತದೆ. ಇದರಿಂದ ಕ್ರಿ.ಶ. 1391ರ ವೇಳೆಗೆ ಗೋವಾ ವಿಜಯನಗರದ ಹತೋಟಿಗೆ ಬಂದಿತ್ತೆಂದು ತಿಳಿಯುತ್ತದೆ.[4] ಗೋವಾದಲ್ಲಿ ಗ್ರಾಮಸಭೆಯನ್ನು ಪೋರ್ಚುಗೀಸ್ ದಾಖಲೆಗಳಲ್ಲಿ ಗಾನ್‌ಕಾರಿಯ್[5] ಎಂದು ಕರೆಯಲಾಗಿದೆ ಮತ್ತು ಅದರ ವಿವರಗಳನ್ನು ಮುಂದೆ ತಿಳಿಸಲಾಗುತ್ತದೆ.

**ಗ್ರಾಮ ಸಭೆಯ ರಚನೆ :** ಗ್ರಾಮಸಭೆಯು ಅದರ ಸದಸ್ಯರ ಸಂಖ್ಯೆಯಿಂದಲೂ ಕರೆಯಲ್ಪಡುತ್ತಿತ್ತು. ಈ ಅಭ್ಯಾಸವು ಕರ್ನಾಟಕದಲ್ಲಿ ವಿಜಯನಗರದ ಹಿಂದಿನ ಕಾಲದಲ್ಲಿ ಆಚರಣೆಯಲ್ಲಿದ್ದಿತು. ಉದಾಹರಣೆಗೆ, ಬಾಲ್ಗುಳಿಯ ಐವತ್ತು ಎಂದು ಕಂಡು ಬರುವುದು. ಇದು ಬಾಲ್ಗುಳಿಯ ಐವತ್ತು ಮಹಾಜನರು ಎಂದು ಅರ್ಥವಾಗುತ್ತದೆ.[6]

---

1. *SII*, IX [ii] No. 426.
2. *Ibid.*, No. 441.
3. Ramesh, K. V. : *Tulu-nadina Itihasa* (Mysore, 1969), p. 129.
4. *EC*, VII, Hn. 71.
5. *JRAS*, 1900, B. H. Baden-Powell : *The Villages in Goa in the Early Sixteenth Century*, p. 264.
6. *SII*, IX, [i] No. 258.

ಕ್ರಿ.ಶ. ೧೨೬೧ರಲ್ಲಿ ಕುಡಿಕುರದ ೩೦೦, ರಾಜಧಾನಿಯಾದ ಬಾರಹ ಕನ್ಯಾಪುರದಲ್ಲಿ ಸೇರಿ ಸುವರ್ಣ ದಾನ ಮುಂತಾದುವನ್ನು ಮಾಡಿದರು.[1] ಈ ಸಂಖ್ಯೆಯು ಗ್ರಾಮ ಸಭೆಯನ್ನು ಸೂಚಿಸುವುದಲ್ಲದೆ ಆ ಗ್ರಾಮದಲ್ಲಿ ಮೊದಲು ನೆಲಸಿದ ಸಂಸಾರಗಳ ಸಂಖ್ಯೆಯನ್ನು ತಿಳಿಸುತ್ತದೆ. ಸಿರುವುರ ಗ್ರಾಮದಲ್ಲಿ (ಧಾರವಾಡ ಜಿಲ್ಲೆಯ ಎಲಿಸಿರೂರ್) ಕ್ರಿ.ಶ. ೧೦೦೫ ರಲ್ಲಿದ್ದ ಐವತ್ತೊಕ್ಕಲು ಕ್ರಿ.ಶ. ೧೧೩೪ ರಲ್ಲೂ ಇದ್ದುವು.[2] ಈ ಅಭ್ಯಾಸವು ವಿಜಯನಗರ ಕಾಲದಲ್ಲೂ ಮುಂದುವರಿದ ಹಾಗೆ ಕಾಣುತ್ತದೆ. ಉದಾಹರಣೆಗೆ, ಕ್ರಿ.ಶ. ೧೩೬೪ ರಲ್ಲಿ ಸೇರಿದ ಚಕ್ಕರೆ ಗ್ರಾಮಸಭೆಯಲ್ಲಿ ೩೦ ಒಕ್ಕಲುಗಳಿದ್ದುವು. ಎಂದರೆ ೩೦ ಸಂಸಾರಗಳಿದ್ದುವು. ಹೊಸ ಸಂಸಾರಗಳು ಬಂದು ನೆಲಸಿದ ನಂತರವೂ ಈ ಗ್ರಾಮ ಸಭೆಯು ಮೊದಲಿನ ಮೂವತ್ತು ಒಕ್ಕಲು ಎಂದು ಕರೆಯಲ್ಪಡುತ್ತಿತ್ತು. ಹಿಂದೆ ತಿಳಿಸಿರುವಂತೆ ರಾಜಾಡಿ ಕನ್ಯಾನ ಗ್ರಾಮದಲ್ಲಿ ಐವತ್ತು ಜಗತ್ ಎಂದರೆ, ಐವತ್ತು ಸಂಸಾರಗಳಿಗೆ ಅನ್ವಯಿಸುತ್ತದೆ.[3]

ಇಮ್ಮಡಿ ಬುಕ್ಕನ ಎರಡು ಶಾಸನಗಳು ಗ್ರಾಮ ಸಭೆಗೆ ಸಂಬಂಧಪಟ್ಟವೆ. ಕ್ರಿ.ಶ. ೧೪೦೫–೬ ರ ಒಂದು ಶಾಸನವು ಪಾಂಡುಚೆರಿಯ ತಿರುವಂದರ್ ಕೊಯಿಲ್ ಸಭೆಯಲ್ಲಿ ೪ ಸಾವಿರ ಸದಸ್ಯರಿದ್ದರೆಂದು ತಿಳಿಸುತ್ತದೆ.[4] ಇದು ಕೆಲಸಮಾಡಲು ಬಹು ದೊಡ್ಡ ಸಭೆಯಾಗಿತ್ತು. ಕ್ರಿ.ಶ. ೧೪೫೯–೬೦ರ ಮಲ್ಲಿಕಾರ್ಜುನದೇವ ಮಹಾರಾಯನ ಒಂದು ಶಾಸನವು, ನರಸಿಂಗರಾಜ ಒಡೆಯರ ಪುಣ್ಯಕ್ಕೆ, ಉತ್ತರ ಆರ್ಕಾಟ್ ಜಿಲ್ಲೆಯ ಕಾವೇರಿಪಾಕ್ಕಂ ಮಹಾ ಸಭೆಯು ಒಂದು ದಾನಮಾಡಿತೆಂದು ತಿಳಿಸುತ್ತದೆ.[5]

**ಗ್ರಾಮಸಭೆಗಳು ಸೇರುವಿಕೆ:** ಗ್ರಾಮಸಭೆಗಳು ಸೇರುತ್ತಿದ್ದ ಸ್ಥಳ, ಹಾಜರಿರುತ್ತಿದ್ದ ಸದಸ್ಯರು ಮತ್ತು ವ್ಯವಹಾರ ನಡೆಸುತ್ತಿದ್ದ ರೀತಿ ಹೆಚ್ಚಾಗಿ ತಿಳಿದುಬರುವುದಿಲ್ಲ. ಆದರೆ ದೊರಕಿರುವ ಶಾಸನಗಳ ಆಧಾರದ ಮೇಲೆ ಗ್ರಾಮಸಭೆಯು ಸ್ವಯಮಾಧಿಪತ್ಯ ಹೊಂದಿ ಕೆಲಸಮಾಡುತ್ತಿದ್ದಿತೆಂದು ತಿಳಿಯುತ್ತದೆ. ಸಭೆ ಸೇರಿದುದಕ್ಕೆ ಶಾಸನಗಳು ಅನೇಕ ವಾಕ್ಸರಣಿಗಳನ್ನು ಉಪಯೋಗಿಸುತ್ತವೆ: (ಅ) ಒಪ್ಪಿ—ಧಾರಾಪುರದ ಚಾವಡಿಯಲ್ಲಿ ಒಪ್ಪಿ ಎಂದು ಶಾಸನವು ತಿಳಿಸುತ್ತದೆ. (ಆ) **ನೆರೆದು,**[6] (ಇ) **ಕೂಟ,**[7] (ಈ) **ಕೂಡಿ.**[8] ಸಭೆಯು ತೀರ್ಮಾನಕ್ಕೆ ಬರುವುದಕ್ಕೆ ಮೊದಲು ಚರ್ಚೆ ನಡೆಯು

---

1. *SII, IX,* (i) No. 370 of 1927.
2. *SII*, XI [i] No. 50,
3. *SII*, IX [ii] No. 407. 359 of 1930-31.
4. 217 of 1917, *ARSIE*, 1918, para 67.
5. 392 of 1905.
6. *SII*, XI, (ii) No. 163.
7. *MAR*, 1929, pp. 190-192.
8. *SII*, IX (ii) No. 433.

ತ್ತಿದ್ದಿತೆಂದು ತಿಳಿಯಬರುತ್ತದೆ. ಇದನ್ನು ಸ್ಪಷ್ಟೀಕರಿಸಲು ಕೆಲವು ಉದಾಹರಣೆಗಳನ್ನು ಕೊಡಬಹುದು :—(೧) ಗೌಡರು, ಸೆಟ್ಟಿಗಳು, ಬ್ರಹ್ಮಚಾರಿಗಳು ಮುಂತಾದವರು ಒಪ್ಪಿದರು.[1] (೨) ನರಸಿಂಹದೇವ ಒಡೆಯ ಬಾರಕೂರು ರಾಜ್ಯವನ್ನು ಆಳುತ್ತಿದ್ದಾಗ ನೆರೆದಿದ್ದ ಕುಂದಾಪುರ ನಿವಾಸಿಗಳಲ್ಲಿ ವಿಚಾರಣೆ ನಡೆಸಿದರು.[2] (೩) ಅನೇಕ ವೇಳೆ ಪ್ರಜೆಗಳ ಪ್ರತಿನಿಧಿಗಳ ಸಮ್ಮುಖದಲ್ಲಿ ನಿರ್ಧಾರಗಳನ್ನು ತೆಗೆದುಕೊಳ್ಳಲಾಗುತ್ತಿತ್ತು. ಉದಾಹರಣೆಗೆ, ಕೊಟ್ಟೂರ ಸೀಮೆಯ ನಾಯಿಂದರು ಹಲವು ತೆರಿಗೆಗಳಿಂದ ರಿಯಾಯಿತಿ ಪಡೆದರು. ಈ ಅಪ್ಪಣೆಯನ್ನು ಶಿವೋಜ, ಭದ್ರೋಜ, ಕೊಂಡೋಜ ಮತ್ತು ಇತರ ಪ್ರತಿನಿಧಿಗಳ ಪರವಾಗಿ ಮಾಡಲಾಯಿತು.[3] (೪) ಸದಾಶಿವರಾಯನ ಆಳ್ವಿಕೆಯಲ್ಲಿ ಜೆಬಲೆ ಗ್ರಾಮಸ್ಥರು ವಿಪರೀತ ತೆರಿಗೆಗಳು ಮತ್ತು ಅವುಗಳನ್ನು ಹೆಚ್ಚಿಸಿದುದನ್ನು ತಡೆಯಲಾರದೆ ಆ ಗ್ರಾಮವನ್ನು ತ್ಯಜಿಸಿದನು. ದಳವಾಯಿ ಅಪ್ಪಲನಾಯಕ ಅವರನ್ನು ಆಮಂತ್ರಿಸಿ ಕೆಲವು ರಿಯಾಯಿತಿಗಳನ್ನು ಕೊಟ್ಟು ಪುನಃ ಗ್ರಾಮದಲ್ಲಿ ನೆಲಸುವಂತೆ ಮಾಡಿದನು.[4] (೫) ನೆರೆದವರ ಸಮ್ಮತಿಯನ್ನು ತೆಗೆದುಕೊಂಡು ತೀರ್ಮಾನ ಕೈಗೊಂಡುದಕ್ಕೆ **ಒಡಂಬಟ್ಟು** ಎಂಬ ಪದವನ್ನು ಉಪಯೋಗಿಸಲಾಗಿದೆ.[5] (೬) ನಿವಾಸಿಗಳ ಸಭೆಯನ್ನು ಸೂಚಿಸುವುದಕ್ಕೆ **ನಾವು ಎಲ್ಲರು** ಎಂಬ ವಾಕ್ಸರಣಿಯನ್ನು ಉಪಯೋಗಿಸಲಾಗಿದೆ.[6] (೭) ಒಪ್ಪಿಗೆಯನ್ನು ಸೂಚಿಸಲು **ಅನುಮತಿ** ಎಂಬ ಮತ್ತೊಂದು ಪದವನ್ನು ಉಪಯೋಗಿಸಲಾಗಿದೆ.[7]

ಸಮಸ್ತ ಪ್ರಜೆಗಳು ಹಾಜರಿದ್ದುದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು ;—

(೧) ಕ್ರಿ. ಶ. ೧೫೪೪ ರಲ್ಲಿ ದೊಂಡವತೆಯ ಗ್ರಾಮದ ಸಮಸ್ತ ಪ್ರಜೆಗಳು ಒಂದು ಜಮೀನನ್ನು ದಾನಮಾಡಿದರು.[8].

(೨) ಕ್ರಿ.ಶ. ೧೫೬೧ ರಲ್ಲಿ, ಸದಾಶಿವದೇವ ಮಹಾರಾಯನ ಆಳ್ವಿಕೆಯಲ್ಲಿ ಮಹಾಮಂಡಲೇಶ್ವರ ತಿರುಮಲ ರಾಜ ರಾಮರಾಜಯ ಮಹಾ ಅರಸು, "ಸೆಟ್ಟಿ ಪಟ್ಟಣಸ್ವಾಮಿ ಮುಂತಾದ ಸಮಸ್ತ ಪ್ರಜೆಗಳ ಅನುಮತದಿಂದ" ಒಂದು ದಾನ ಮಾಡಿದರು.[9]

1. *SII*, IX, (ii) No. 411.
2. *Ibid.*, No. 441.
3. *Ibid.*, No. 628.
4. *Ibid.*, No. 681.
5. *Ibid.*, No. 457.
6. *Ibid.*, No. 528.
7. *Ibid.*, No. 618.
8. *Ibid.*, No. 528.
9. *Ibid.*, No, 672.

(೩) ಗ್ರಾಮ ಜಗತ್ತು ಎಂಬ ವಾಕ್ಸರಣಿ ಸಮಸ್ತ ನಿವಾಸಿಗಳನ್ನು ಸೂಚಿಸುತ್ತದೆ. ಈ ವಾಕ್ಸರಣಿಯನ್ನು ಕುಂದಾಪುರ ನಿವಾಸಿಗಳು ಸಭೆ ಸೇರಿದ ಸಂದರ್ಭದಲ್ಲಿ ಉಪಯೋಗಿಸಲಾಗಿದೆ.[1]

**ಗ್ರಾಮ ಸಭೆಯು ಸೇರುತ್ತಿದ್ದ ಸ್ಥಳ:** ಗ್ರಾಮಸಭೆಯು ಸಾಮಾನ್ಯವಾಗಿ ದೇವಸ್ಥಾನದ ಸಭಾಂಗಣದಲ್ಲಿ ಅಥವಾ ಯಾವುದಾದರೂ ಸಾರ್ವಜನಿಕ ಸ್ಥಳದಲ್ಲಿ ಸೇರುತ್ತಿದ್ದಿತು. ಕುನ್ನಂದರ್ ಕೋವಿಲ್‌ನಲ್ಲಿ ಪರ್ವತ ಗಿರೀಶ್ವರ ದೇವಸ್ಥಾನದಲ್ಲಿ ಎರಡನೆಯ ಗೋಪುರದಲ್ಲಿರುವ ಒಂದು ಶಾಸನವು ಕಳ್ಳವೇಳೈಕ್ಕಾರರು ದೇವಸ್ಥಾನಕ್ಕೆ ಕೊಡಬೇಕಾದ ನೆರವನ್ನು ಗೊತ್ತುಮಾಡಲು ಮತ್ತು ಅವರನ್ನು ಎಲ್ಲಾ ಅಪಾಯದಿಂದ ರಕ್ಷಿಸಲು ಒಂದು ದೊಡ್ಡ ಸಭೆಯು ಸೇರಿದ್ದಿತೆಂದು ದಾಖಲುಮಾಡಿದೆ.[2] ಮತ್ತೊಂದು ಸಭೆಯು ವಿಷ್ಣುಮೂರ್ತಿ ದೇವಸ್ಥಾನದ ಆವರಣದಲ್ಲಿ ಸೇರಿತು. ಈ ಶಾಸನದಲ್ಲಿ "ವಿಷ್ಣುಮೂರ್ತಿ ದೇವರ ಸನ್ನಿಧಿಯಲು" ಎಂಬ ಪದಗಳನ್ನು ಉಪಯೋಗಿಸಲಾಗಿದೆ.[3] ಕ್ರಿ.ಶ. ೧೪೪೩–೪೪ರ ಪುದುಕೋಟ್ಟೈ ಶಾಸನ ಒಂದು, ದೇವಸ್ಥಾನದ ಅಧಿಕಾರಿಗಳು ಮತ್ತು ವಿರಯ್ಯ ಚಿಲ್ಲೈ ನಿವಾಸಿಗಳು ಒಂದು ಹೂವಿನ ತೋಟದಲ್ಲಿ ಸಭೆ ಸೇರಿದ್ದರೆಂದು ತಿಳಿಸುತ್ತದೆ.[4] ಗ್ರಾಮ ಸಭೆಯು ಸಾಮಾನ್ಯವಾಗಿ ಗ್ರಾಮ ಸಭಾಂಗಣ ಅಥವಾ ಚಾವಡಿಯಲ್ಲಿ ಸೇರುತ್ತಿದ್ದಿತು. ಹೀಗೆ ಸಭೆ ಸೇರಿದ್ದಕ್ಕೆ ಅನೇಕ ಶಾಸನಗಳ ಆಧಾರವಿದೆ. ಉದಾಹರಣೆಗೆ, ಧಾರಾಪುರದ ನಾಯಕರು, ಗೊಲ್ಲರು, ಬೆಸ್ತರು, ಕೆಲಸಗಾರರು ಮತ್ತು ಇತರರು ಧಾರಾಪುರದ ಚಾವಡಿಯಲ್ಲಿ ಸಭೆ ಸೇರಿದರು.[5]

**ಗ್ರಾಮಾಧಿಕಾರಿಗಳು:** ಶಾಸನಗಳು ಗ್ರಾಮದ ಅಧಿಕಾರಿಗಳನ್ನು ತಿಳಿಸುತ್ತವೆ. ಪ್ರತಿ ಗ್ರಾಮದಲ್ಲೂ ಅನೇಕ ಗ್ರಾಮಸೇವಕರಿದ್ದರು. ಅವರ ಸೇವೆಗೆ ಸಂಭಾವನೆಯನ್ನು ಗ್ರಾಮ ಸಮುದಾಯ ಮಾನ್ಯಗಳಿಂದ ಅಂದರೆ ತೆರಿಗೆಯಿಂದ ರಿಯಾಯಿತಿ ಹೊಂದಿದ ಭೂಮಿ ಮತ್ತು ಮೇರ ಮತ್ತು ಮಿರಾಶಿಗಳೆಂಬ ವೇತನಗಳನ್ನು ಕೊಡಲಾಗುತ್ತಿತ್ತು. ಗ್ರಾಮಸೇವಕರನ್ನು ಸಾಮಾನ್ಯವಾಗಿ ಆಯಗಾರರೆಂದು ಕರೆಯಲಾಗುತ್ತಿತ್ತು. ಅವರ ಸಂಖ್ಯೆ ಸಾಮಾನ್ಯವಾಗಿ ೧೨. ಆದರೆ ಕಾರ್ಯದ ಆವಶ್ಯಕತೆ, ಗ್ರಾಮದ ಆರ್ಥಿಕ ಆಡಳಿತ ಮತ್ತು ಗ್ರಾಮದ ವಿಸ್ತೀರ್ಣ ಅವರ ಸಂಖ್ಯೆಯನ್ನು ನಿರ್ಧರಿಸುತ್ತಿತ್ತು. ಕೆಲವು ಗ್ರಾಮಗಳಲ್ಲಿ ಅನೇಕ ಸೇವಕರ ಕರ್ತವ್ಯಗಳನ್ನು ಒಬ್ಬನಿಗೇ ವಹಿಸಲಾಗುತ್ತಿತ್ತು.

**ಗೌಡಿಕೆ** ಅಥವಾ **ಗ್ರಾಮಮುಖಂಡತ್ವ** ಹುದ್ದೆಯು ಆಶಾರ್ಹವಾಗಿತ್ತು. ವಿಜಯನಗರದ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ **ಗಾವುಂಡ** ಅಥವಾ ಗ್ರಾಮ

1. *SII, IX,* (ii) No. 441.
2. *Chronological List of Inscriptions of the Pudukkottai State* (1929), No. 689
3. *SII,* IX (ii) No. 457.
4. *IPS,* No. 705.
5. *SII,* IX (ii) No. 644.

ಮುಖಂಡನು ಗ್ರಾಮಸಭೆಯ ಮುಖ್ಯ ಕಾರ್ಯನಿರ್ವಾಹಕ ಮತ್ತು ಗ್ರಾಮಾಡಳಿತದ ಪ್ರಧಾನ ಅಧಿಕಾರಿಯಾಗಿದ್ದನು. ಗ್ರಾಮಸಭೆಯೊಡನೆ ಅವನು ಗ್ರಾಮದ ಅಭ್ಯುದಯಕ್ಕೆ ಜವಾಬ್ದಾರಿ ಹೊಂದಿದ್ದನು. ಗೌಡಿಕೆ ಹುದ್ದೆಯನ್ನು ರಾಜನು ಅಥವಾ ಅಧಿಕಾರಿಗಳು ಅಥವಾ ಗ್ರಾಮಸ್ಥರು ಅಥವಾ ನಾಡಿನವರು, ಗ್ರಾಮ ಅಥವಾ ಗ್ರಾಮಗಳ ಸೇವೆಯಿಂದ ಹೆಸರುವಾಸಿಯಾದವನಿಗೆ ಕೊಡುತ್ತಿದ್ದರು. ಆತನು ಜನರ ಪ್ರತಿನಿಧಿಯಾಗಿ ಮತ್ತು ಸರ್ಕಾರದ ನಿಯೋಗಿಯಾಗಿ ಕೆಲಸಮಾಡುತ್ತಿದ್ದನು. ಅವನ ಸಂಭಾವನೆ ಗೌಡಗೊಡಗೆ ಅಥವಾ ತೆರಿಗೆಯಿಂದ ರಿಯಾಯಿತಿ ಪಡೆದ ಭೂಮಿ. ಆತನು ಗ್ರಾಮದ ದಂಡಾಧಿಕಾರಿಯಾಗಿ ಸಣ್ಣಪುಟ್ಟ ಅಪರಾಧಗಳ ವಿಚಾರಣೆ ನಡೆಸುತ್ತಿದ್ದನು. ಆತನು ಸಾರ್ವಜನಿಕರಿಂದ ಮತ್ತು ಸರ್ಕಾರದಿಂದ ಹಣ ಸಂಗ್ರಹಿಸಿ ಲೋಕೋಪಯೋಗಿ ಕಾರ್ಯಗಳನ್ನು ನಡೆಸುತ್ತಿದ್ದನು.[1] ಗ್ರಾಮ ಮುಖಂಡನನ್ನು ರೆಡ್ಡಿ ಅಥವಾ ಗೌಡನೆಂದು ತಮಿಳು ಪ್ರಾಂತ್ಯದಲ್ಲಿ ಕರೆಯಲಾಗುತ್ತಿದ್ದಿತು.[2] ಆಂಧ್ರ ಜಿಲ್ಲೆಯಲ್ಲೂ ಆತನನ್ನು ರೆಡ್ಡಿ ಅಥವಾ ಗೌಡನೆಂದು ಕರೆಯುತ್ತಿದ್ದರು.[3] ಅವನನ್ನು ಗ್ರಾಮಕೂಟ[4] ಎಂದೂ ಕರೆಯುತ್ತಿದ್ದರು. ಗೌಡ ಎಂಬ ಪದವು ಈ ಪದದಿಂದ ಬಂದಿರಬಹುದು.

ವಿಜಯನಗರ ಕಾಲವಲ್ಲಿ ಗೌಡಿಕೆಯನ್ನು ನಾನಾ ವಿಧದಲ್ಲಿ ಪಡೆಯಬಹುದಾಗಿತ್ತು. ರಾಜನು ಹಲವು ವೇಳೆ ಇವರನ್ನು ನೇಮಿಸುತ್ತಿದ್ದನು. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು:

(೧) ಬುಕ್ಕನ ಕಾಲದ ಒಂದು ಶಾಸನವು ನಸನಗ್ರಾಮದ ಗೌಡಿಕೆಯನ್ನು ಪೆದ್ದ ಚೊದಮರೆಡ್ಡಿಗೆ ಬುಕ್ಕನು ನೀಡಿದನೆಂದು ಮತ್ತು ಅವನಿಗೆ ದಾನವಾಗಿ ಕೊಟ್ಟ ಭೂಮಿಯ ವಿವರಗಳನ್ನು ತಿಳಿಸುತ್ತದೆ.[5]

(೨) ಕ್ರಿ.ಶ. ೧೪೪೬ ರಲ್ಲಿ ನರಸಿಂಗರಾಯ ಆಳುತ್ತಿದ್ದಾಗ ಆತನ ಆಜ್ಞೆಯಂತೆ, ಗಂಗೇಗೌಡನಿಗೆ ಅವನು ಸ್ಥಾಪಿಸಿದ ಹೆಜಜಿ ಮತ್ತು ಇತರ ಗ್ರಾಮಗಳ ಗೌಡಿಕೆಯನ್ನು ಕೊಟ್ಟನು.[6] ಇದು ಒಬ್ಬ ಒಂದು ಗ್ರಾಮಕ್ಕಿಂತ ಹೆಚ್ಚಿನ ಗೌಡಿಕೆಯನ್ನು ಹೊಂದಿದ್ದುದಕ್ಕೆ ನಿದರ್ಶನವಾಗಿದೆ.

(೩) ರಾಯ ವೆಂಕಟಪತಿ ನಾಯಕ ರಾಯದುರ್ಗ ರಾಷ್ಟ್ರದ 5 ಗ್ರಾಮಗಳ ಗೌಡಿಕೆಯನ್ನು ಯರಲಿಂಗನಗೌಡನೆಂಬುವನಿಗೆ ನೀಡಿದನು.[7]

---

1. Dikshit : op.cit., p: 59-65.
2. Krishnasvami : op.cit., p. 104.
3. Venkataramanayya : *Studies*, 161.
4. *EI*, VII p. 170, Somasekhara Sarma : op.cit., p. 219.
5. *No*. 16 of 1925-26 (ತಾಮ್ರಶಾಸನ).
6. *EC*, IIX, Tm. 54.
7. *No*. 21 of 1910-11.

(೩) ಗ್ರಾಮ ಜಗತ್ತು ಎಂಬ ವಾಕ್ಸರಣಿ ಸಮಸ್ತ ನಿವಾಸಿಗಳನ್ನು ಸೂಚಿಸುತ್ತದೆ. ಈ ವಾಕ್ಸರಣಿಯನ್ನು ಕುಂದಾಪುರ ನಿವಾಸಿಗಳು ಸಭೆ ಸೇರಿದ ಸಂದರ್ಭದಲ್ಲಿ ಉಪಯೋಗಿಸಲಾಗಿದೆ.[1]

**ಗ್ರಾಮ ಸಭೆಯು ಸೇರುತ್ತಿದ್ದ ಸ್ಥಳ:** ಗ್ರಾಮಸಭೆಯು ಸಾಮಾನ್ಯವಾಗಿ ದೇವಸ್ಥಾನದ ಸಭಾಂಗಣದಲ್ಲಿ ಅಥವಾ ಯಾವುದಾದರೂ ಸಾರ್ವಜನಿಕ ಸ್ಥಳದಲ್ಲಿ ಸೇರುತ್ತಿದ್ದಿತು. ಕುನ್ನಂದರ್ ಕೋವಿಲ್‌ನಲ್ಲಿ ಪರ್ವತ ಗಿರೀಶ್ವರ ದೇವಸ್ಥಾನದಲ್ಲಿ ಎರಡನೆಯ ಗೋಪುರದಲ್ಲಿರುವ ಒಂದು ಶಾಸನವು ಕಳ್ಳವೇಳೈಕ್ಕಾರರು ದೇವಸ್ಥಾನಕ್ಕೆ ಕೊಡಬೇಕಾದ ನೆರವನ್ನು ಗೊತ್ತುಮಾಡಲು ಮತ್ತು ಅವರನ್ನು ಎಲ್ಲಾ ಅಪಾಯದಿಂದ ರಕ್ಷಿಸಲು ಒಂದು ದೊಡ್ಡ ಸಭೆಯು ಸೇರಿದ್ದಿತೆಂದು ದಾಖಲುಮಾಡಿದೆ.[2] ಮತ್ತೊಂದು ಸಭೆಯು ವಿಷ್ಣುಮೂರ್ತಿ ದೇವಸ್ಥಾನದ ಆವರಣದಲ್ಲಿ ಸೇರಿತು. ಈ ಶಾಸನದಲ್ಲಿ "ವಿಷ್ಣುಮೂರ್ತಿ ದೇವರ ಸನ್ನಿಧಿಯಲು" ಎಂಬ ಪದಗಳನ್ನು ಉಪಯೋಗಿಸಲಾಗಿದೆ.[3] ಕ್ರಿ.ಶ. ೧೪೪೩–೪೪ ರ ಪುದುಕೋಟ್ಟೈ ಶಾಸನ ಒಂದು, ದೇವಸ್ಥಾನದ ಅಧಿಕಾರಿಗಳು ಮತ್ತು ವಿರಯ್ಯ ಚಿಲ್ಲೈ ನಿವಾಸಿಗಳು ಒಂದು ಹೂವಿನ ತೋಟದಲ್ಲಿ ಸಭೆ ಸೇರಿದ್ದರೆಂದು ತಿಳಿಸುತ್ತದೆ.[4] ಗ್ರಾಮ ಸಭೆಯು ಸಾಮಾನ್ಯವಾಗಿ ಗ್ರಾಮ ಸಭಾಂಗಣ ಅಥವಾ ಚಾವಡಿಯಲ್ಲಿ ಸೇರುತ್ತಿದ್ದಿತು. ಹೀಗೆ ಸಭೆ ಸೇರಿದ್ದಕ್ಕೆ ಅನೇಕ ಶಾಸನಗಳ ಆಧಾರವಿದೆ. ಉದಾಹರಣೆಗೆ, ಧಾರಾಪುರದ ನಾಯಕರು, ಗೊಲ್ಲರು, ಬೆಸ್ತರು, ಕೆಲಸಗಾರರು ಮತ್ತು ಇತರರು ಧಾರಾಪುರದ ಚಾವಡಿಯಲ್ಲಿ ಸಭೆ ಸೇರಿದರು.[5]

**ಗ್ರಾಮಾಧಿಕಾರಿಗಳು:** ಶಾಸನಗಳು ಗ್ರಾಮದ ಅಧಿಕಾರಿಗಳನ್ನು ತಿಳಿಸುತ್ತವೆ. ಪ್ರತಿ ಗ್ರಾಮದಲ್ಲೂ ಅನೇಕ ಗ್ರಾಮಸೇವಕರಿದ್ದರು. ಅವರ ಸೇವೆಗೆ ಸಂಭಾವನೆಯನ್ನು ಗ್ರಾಮ ಸಮುದಾಯ ಮಾನ್ಯಗಳಿಂದ ಅಂದರೆ ತೆರಿಗೆಯಿಂದ ರಿಯಾಯಿತಿ ಹೊಂದಿದ ಭೂಮಿ ಮತ್ತು **ಮೇರ** ಮತ್ತು ಮಿರಾಶಿಗಳೆಂಬ ವೇತನಗಳನ್ನು ಕೊಡಲಾಗುತ್ತಿತ್ತು. ಗ್ರಾಮಸೇವಕರನ್ನು ಸಾಮಾನ್ಯವಾಗಿ ಆಯಗಾರರೆಂದು ಕರೆಯಲಾಗುತ್ತಿತ್ತು. ಅವರ ಸಂಖ್ಯೆ ಸಾಮಾನ್ಯವಾಗಿ ೧೨. ಆದರೆ ಕಾರ್ಯದ ಅವಶ್ಯಕತೆ, ಗ್ರಾಮದ ಆರ್ಥಿಕ ಆಡಳಿತ ಮತ್ತು ಗ್ರಾಮದ ವಿಸ್ತೀರ್ಣ ಅವರ ಸಂಖ್ಯೆಯನ್ನು ನಿರ್ಧರಿಸುತ್ತಿತ್ತು. ಕೆಲವು ಗ್ರಾಮಗಳಲ್ಲಿ ಅನೇಕ ಸೇವಕರ ಕರ್ತವ್ಯಗಳನ್ನು ಒಬ್ಬನಿಗೇ ವಹಿಸಲಾಗುತ್ತಿತ್ತು.

**ಗೌಡಿಕೆ** ಅಥವಾ **ಗ್ರಾಮಮುಖಂಡತ್ವ** ಹುದ್ದೆಯು ಆಶಾರ್ಹವಾಗಿತ್ತು. ವಿಜಯನಗರದ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ **ಗಾವುಂಡ** ಅಥವಾ ಗ್ರಾಮ

1. *SII*, *IX*, (ii) No. 441.
2. *Chronological List of Inscriptions of the Pudukkottai State* (1929), No. 689
3. *SII*, IX (ii) No. 457.
4. *IPS*, No. 705.
5. *SII*, IX (ii) No. 644.

ಮುಖಂಡನು ಗ್ರಾಮಸಭೆಯ ಮುಖ್ಯ ಕಾರ್ಯನಿರ್ವಾಹಕ ಮತ್ತು ಗ್ರಾಮಾಡಳಿತದ ಪ್ರಧಾನ ಅಧಿಕಾರಿಯಾಗಿದ್ದನು. ಗ್ರಾಮಸಭೆಯೊಡನೆ ಅವನು ಗ್ರಾಮದ ಅಭ್ಯುದಯಕ್ಕೆ ಜವಾಬ್ದಾರಿ ಹೊಂದಿದ್ದನು. ಗೌಡಿಕೆ ಹುದ್ದೆಯನ್ನು ರಾಜನು ಅಥವಾ ಅಧಿಕಾರಿಗಳು ಅಥವಾ ಗ್ರಾಮಸ್ಥರು ಅಥವಾ ನಾಡಿನವರು, ಗ್ರಾಮ ಅಥವಾ ಗ್ರಾಮಗಳ ಸೇವೆಯಿಂದ ಹೆಸರುವಾಸಿಯಾದವನಿಗೆ ಕೊಡುತ್ತಿದ್ದರು. ಆತನು ಜನರ ಪ್ರತಿನಿಧಿಯಾಗಿ ಮತ್ತು ಸರ್ಕಾರದ ನಿಯೋಗಿಯಾಗಿ ಕೆಲಸಮಾಡುತ್ತಿದ್ದನು. ಅವನ ಸಂಭಾವನೆ ಗೌಡಗೊಡಗೆ ಅಥವಾ ತೆರಿಗೆಯಿಂದ ರಿಯಾಯಿತಿ ಪಡೆದ ಭೂಮಿ. ಆತನು ಗ್ರಾಮದ ದಂಡಾಧಿಕಾರಿಯಾಗಿ ಸಣ್ಣ ಪುಟ್ಟ ಅಪರಾಧಗಳ ವಿಚಾರಣೆ ನಡೆಸುತ್ತಿದ್ದನು. ಆತನು ಸಾರ್ವಜನಿಕರಿಂದ ಮತ್ತು ಸರ್ಕಾರದಿಂದ ಹಣ ಸಂಗ್ರಹಿಸಿ ಲೋಕೋಪಯೋಗಿ ಕಾರ್ಯಗಳನ್ನು ನಡೆಸುತ್ತಿದ್ದನು.[1] ಗ್ರಾಮ ಮುಖಂಡನನ್ನು ರೆಡ್ಡಿ ಅಥವಾ ಗೌಡನೆಂದು ತಮಿಳು ಪ್ರಾಂತ್ಯದಲ್ಲಿ ಕರೆಯಲಾಗುತ್ತಿದ್ದಿತು.[2] ಆಂಧ್ರ ಜಿಲ್ಲೆಯಲ್ಲೂ ಆತನನ್ನು ರೆಡ್ಡಿ ಅಥವಾ ಗೌಡನೆಂದು ಕರೆಯುತ್ತಿದ್ದರು.[3] ಅವನನ್ನು ಗ್ರಾಮಕೂಟ[4] ಎಂದೂ ಕರೆಯುತ್ತಿದ್ದರು. ಗೌಡ ಎಂಬ ಪದವು ಈ ಪದದಿಂದ ಬಂದಿರಬಹುದು.

ವಿಜಯನಗರ ಕಾಲದಲ್ಲಿ ಗೌಡಿಕೆಯನ್ನು ನಾನಾ ವಿಧದಲ್ಲಿ ಪಡೆಯಬಹುದಾಗಿತ್ತು. ರಾಜನು ಹಲವು ವೇಳೆ ಇವರನ್ನು ನೇಮಿಸುತ್ತಿದ್ದನು. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು:

(೧) ಬುಕ್ಕನ ಕಾಲದ ಒಂದು ಶಾಸನವು ನಸನಗ್ರಾಮದ ಗೌಡಿಕೆಯನ್ನು ಪೆದ್ದ ಜೊದಮರೆಡ್ಡಿಗೆ ಬುಕ್ಕನು ನೀಡಿದನೆಂದು ಮತ್ತು ಅವನಿಗೆ ದಾನವಾಗಿ ಕೊಟ್ಟ ಭೂಮಿಯ ವಿವರಗಳನ್ನು ತಿಳಿಸುತ್ತದೆ.[5]

(೨) ಕ್ರಿ.ಶ. ೧೪೮೬ ರಲ್ಲಿ ನರಸಿಂಗರಾಯ ಆಳುತ್ತಿದ್ದಾಗ ಆತನ ಆಜ್ಞೆಯಂತೆ, ಗಂಗೇಗೌಡನಿಗೆ ಅವನು ಸ್ಥಾಪಿಸಿದ ಹೆಜಜಿ ಮತ್ತು ಇತರ ಗ್ರಾಮಗಳ ಗೌಡಿಕೆಯನ್ನು ಕೊಟ್ಟನು.[6] ಇದು ಒಬ್ಬ ಒಂದು ಗ್ರಾಮಕ್ಕಿಂತ ಹೆಚ್ಚಿನ ಗೌಡಿಕೆಯನ್ನು ಹೊಂದಿದ್ದುದಕ್ಕೆ ನಿದರ್ಶನವಾಗಿದೆ.

(೩) ರಾಯ ವೆಂಕಟಪತಿ ನಾಯಕ ರಾಯದುರ್ಗ ರಾಷ್ಟ್ರದ 5 ಗ್ರಾಮಗಳ ಗೌಡಿಕೆಯನ್ನು ಯರಲಿಂಗನಗೌಡನೆಂಬುವನಿಗೆ ನೀಡಿದನು.[7]

---

1. **Dikshit : op.cit., p: 59-65.**
2. **Krishnasvami : op.cit., p. 104.**
3. **Venkataramanayya : *Studies*, 161.**
4. ***EI*, VII p. 170, Somasekhara Sarma : op.cit., p. 219.**
5. ***No*. 16 of 1925-26 (ತಾಮ್ರಶಾಸನ).**
6. ***EC*, IIX, Tm. 54.**
7. ***No*. 21 of 1910-11.**

ಗೌಡಿಕೆಯನ್ನು ಒಂದು ಹೊಸ ಗ್ರಾಮವನ್ನು ಸ್ಥಾಪಿಸಿದವರಿಗೆ ಕೊಡುತ್ತಿದ್ದ ನಿದರ್ಶನಗಳಿವೆ. ಈ ವಿಷಯವನ್ನು ಕ್ರಿ.ಶ. ೧೫೦೧ ರ ಒಂದು ಶಾಸನದಿಂದ ತಿಳಿಯಬಹುದು. ಅದು ರಾವುತ್ತಪುರದ ಕಟ್ಟುವಿಕೆ ಮತ್ತು ಕುಡಿಹೇರು ಪ್ರಭುಗಳ ಮತ್ತು ಅಷ್ಟಾದಶ ಪ್ರಜೆಗಳ ಅನುಮತಿಯಿಂದ ರಾವುತ್ತ ಪುರದ ಮುಖ್ಯಸ್ಥನಾದ ಬೈರಣ್ಣನಿಗೆ ಆ ಗ್ರಾಮದ ಮಗ್ಗಗಳು ಮತ್ತು ಮನೆಗಳ ಮೇಲಿನ ತೆರಿಗೆಗಳ ವಸೂಲಿಯ ಹಕ್ಕನ್ನು ಮತ್ತು ಆ ಗ್ರಾಮದಿಂದ ಬರಬೇಕಾಗಿದ್ದ ತೆರಿಗೆಯಲ್ಲಿ ೨೦ ಗದ್ಯಾಣಗಳನ್ನು ಬೈರಣ್ಣನಿಗೆ ಕೊಟ್ಟುದಾಗಿ ದಾಖಲುಮಾಡಿದೆ. ಇದು ಪ್ರಜಾಸಮುದಾಯದ ಸಾಮೂಹಿಕ ಚಟುವಟಿಕೆಗೆ, ಗ್ರಾಮ ಮುಖಂಡತ್ವವನ್ನು ಕೊಟ್ಟು ಮತ್ತು ಆತನಿಗೆ ಕೆಲವು ಹಕ್ಕುಗಳನ್ನು ನೀಡಿದುದಕ್ಕೆ ನಿದರ್ಶನವಾಗಿದೆ.[1] ಇದೇ ರೀತಿ ಕ್ರಿ.ಶ. ೧೫೫೧ ರಲ್ಲಿ ಸಂದಿಕವಿ ಗೌಡ ಮತ್ತು ಇತರರು ದಾಸಪನ ಹಳ್ಳಿಯನ್ನು ಕಟ್ಟಿ ಆತನಿಗೆ ಗೌಡಿಕೆಯನ್ನು ಕೊಟ್ಟರು.[2] ಕ್ರಿ.ಶ. ೧೬೨೦ ರಲ್ಲಿ ಮುಖಂಡನ ಅನುಮತಿಯಿಂದ ಒಂದು ಕಾಲುವೆಯನ್ನು ಕಟ್ಟಿದುದಕ್ಕಾಗಿ ಗೌಡಿಕೆಯನ್ನು ಕೊಡಲಾಯಿತು.[3]

ಸಾರ್ವಜನಿಕ ಸೇವೆಗೆ ಮಹಿಳೆಯೊಬ್ಬಳು ಇಬ್ಬರಿಗೆ ಗೌಡಿಕೆಯನ್ನು ಕೊಟ್ಟ ನಿದರ್ಶನವಿದೆ. ಈ ಶಾಸನದ ಪ್ರಕಾರ ಕ್ರಿ.ಶ. ೧೪೬೪ ರಲ್ಲಿ ಕಂಬೇಗೌಡ ಮತ್ತು ಇತರರು ಸಿದ್ದಾಪುರದಲ್ಲಿ ಕುಡುತಿ ಎಂಬ ಕೋಟೆಯನ್ನು ೧೫೯೨ ವರಹಗಳ ವೆಚ್ಚದಲ್ಲಿ ಕಟ್ಟಿದರು. ಈ ಹಣವನ್ನು ಕಂಬೇಗೌಡ ಮತ್ತು ಕರೇಗೌಡ ಸಾಲ ತೆಗೆದುಕೊಂಡಿದ್ದರು. ಅದನ್ನು ಜಿರ್ಲೆ ಮಲ್ಲಮ್ಮ ಎಂಬ ಮಹಿಳೆಯು ತೀರಿಸಿ, ಒಂದು ಭಾವಿ ಮತ್ತು ಎರಡು ದೇವಸ್ಥಾನಗಳನ್ನು ಕಟ್ಟಿಸಿದಳು. ಅವಳು ಸಿದ್ದಾಪುರದ ಹೊನ್ನೆಗೌಡ ಮತ್ತು ಮರಿತಿಮ್ಮನಹಳ್ಳಿಯ ದಾಸೇಗೌಡ ಈ ಇಬ್ಬರು ಸಿದ್ದಪುರಿ ಮತ್ತು ಕುಡುತಿ ಗ್ರಾಮಗಳ ನೂರು ಸಂಸಾರಗಳ ಮುಖಂಡರಾಗಿರಬೇಕೆಂದು ಮತ್ತು ಗೌಡಿಕೆ ಮತ್ತು ಬುತ್ತ, ಗೋಪಾಲಕೃಷ್ಣ, ಕಂಬದಯ್ಯ ಮತ್ತು ಲಕ್ಷ್ಮೀದೇವಿ ದೇವಸ್ಥಾನಗಳ ಮೇಲ್ವಿಚಾರಣೆಯನ್ನು ಅವರಿಬ್ಬರೂ ಸಮವಾಗಿ ಹಂಚಿಕೊಳ್ಳಬೇಕೆಂದೂ ಆಜ್ಞೆ ನೀಡಿದಳು. ಅಲ್ಲದೆ, ಆ ಎರಡು ಗ್ರಾಮಗಳ ನೂರು ಸಂಸಾರಗಳು ಮತ್ತು ೧೨ ಗ್ರಾಮಾಧಿಕಾರಿಗಳೂ ಅವರಿಗೆ ವಿಧೇಯರಾಗಿರಬೇಕೆಂದು ಆಜ್ಞಾಪಿಸಿದಳು.[4] ಈ ಶಾಸನವು ಗುಂಡ್ಲಹಳ್ಳಿಯ **"ಯಜಮಾನ"** ಎಂದೂ ಉಲ್ಲೇಖಿಸಿದೆ. ಇದರಿಂದ ಗೌಡ ಎಂಬ ಪದಕ್ಕೆ "ಯಜಮಾನ" ಎಂಬ ಪದವನ್ನು ಉಪಯೋಗಿಸಲಾಗುತ್ತಿತ್ತೆಂದು ತಿಳಿಯಬಹುದು.

ಒಂದು ಗ್ರಾಮದಲ್ಲಿ ಒಬ್ಬನಿಗಿಂತ ಹೆಚ್ಚು "ಗೌಡ" ಇರುತ್ತಿದ್ದ ನಿದರ್ಶನಗಳಿವೆ. ಹಿಂದೆ ಪ್ರಸ್ತಾಪಿಸಿದ ಒಂದು ಶಾಸನದಲ್ಲಿ ದಾಸಪನಹಳ್ಳಿಯ ಗೌಡಿಕೆಯನ್ನು ಒಬ್ಬನಿ

1. *MAR*, 1928, p. 48.
2. *EC*, XII, Si. No. 92.
3. *EC*, XI, Hr. 13.
4. *MAR*, 1929, No. 97.

ಗಿಂತ ಹೆಚ್ಚು ಜನರಿಗೆ ಕೊಡಲಾಯಿತು. ಕ್ರಿ.ಶ. ೧೪೦೮ ರ ಒಂದು ಶಾಸನವು, ಒಂಡಿಯಹಳ್ಳಿ ಮೋಡೆಯ ಹಳ್ಳಿಯಿಂದ ಯಾವುದಾದರೂ ಸಂಸಾರ ಅಥವಾ ಸಂಸಾರಗಳು ಪಲಾಯನ ಮಾಡಿದರೆ "ಗೌಡರು" ಆ ಸಂಸಾರಗಳನ್ನು ಪುನಃ ಕರೆದುಕೊಂಡು ಬರಬೇಕು ಅಥವಾ ಅವರಿಂದ ಬರಬೇಕಿದ್ದ ಹಣವನ್ನು ಪಾವತಿ ಮಾಡಬೇಕೆಂದು ತಿಳಿಸುತ್ತದೆ.[1] ಇದೇ ರೀತಿ ಛತ್ರದ ಹಳ್ಳಿಯಲ್ಲಿಯೂ ಒಂದಕ್ಕಿಂತ ಹೆಚ್ಚಿನ "ಗೌಡ"ರಿದ್ದರೆಂದು ಕಾಣುತ್ತದೆ.[2] ಛತ್ರದ ಹಳ್ಳಿಯ ಯೆಲವಣ್ಣನ ತಂದೆ ಮತ್ತು ಸಹೋದರರು ಅರ್ಧ ಗೌಡಿಕೆಯ ಹಕ್ಕನ್ನು ಕೊಂಡು ಆ ಗ್ರಾಮದ ಉತ್ತರಕ್ಕೆ ಒಂದು ಕೆರೆ ಮತ್ತು ಒಂದು ದೇವಸ್ಥಾನವನ್ನು ಕಟ್ಟಿಸಿದರು.[3]

ಗೋವಾ, ಸ್ವಲ್ಪಕಾಲ ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಅದರ ಅಭಿವೃದ್ಧಿಯು ವಿಜಯನಗರ ಸಾಮ್ರಾಜ್ಯದೊಡನಿದ್ದ ವ್ಯಾಪಾರವನ್ನು ಅವಲಂಬಿಸಿತ್ತು ಮತ್ತು ವಿಜಯನಗರದ ಅವನತಿಯೊಡನೆ ಅದರ ಏಳಿಗೆಯು ಗಂಟು ಬಿದ್ದಿತು.[4] ಆದುದರಿಂದ ಈ ಸಂದರ್ಭದಲ್ಲಿ ಗೋವಾದಲ್ಲಿದ್ದ ಗ್ರಾಮಾಡಳಿತ, ಅದರಲ್ಲೂ ಗ್ರಾಮ ಮುಖಂಡನ ಪಾತ್ರವು "ಗೌಡಿಕೆ" ಹುದ್ದೆಯ ಸ್ವಭಾವ ಮತ್ತು ಕರ್ತವ್ಯಗಳನ್ನು ತಿಳಿದುಕೊಳ್ಳಲು ಉಪಯುಕ್ತವಾಗಿದೆ. ಗೋವಾದಲ್ಲಿ ಪ್ರತಿ ಗ್ರಾಮಕ್ಕೂ ಹಲವು ಮುಖಂಡರು ಅಥವಾ ಗಾನ್‌ಕಾರ್‌ರರು ಇರುತ್ತಿದ್ದರು. ಅವರ ಸಂಖ್ಯೆಯು ಆ ಗ್ರಾಮದ ಸಂಪ್ರದಾಯವನ್ನವಲಂಬಿಸಿತ್ತು.[5] ಇದರಿಂದ, ಮೊದಲನೆಯದಾಗಿ ಸಂಪ್ರದಾಯನ್ನು ಗೌರವಿಸುತ್ತಿದ್ದರು ಮತ್ತು ಎರಡನೆಯದಾಗಿ, ಕೆಲವು ಗ್ರಾಮಗಳಲ್ಲಿ ಒಂದಕ್ಕಿಂತ ಹೆಚ್ಚು ಮುಖಂಡರಿದ್ದರೆಂದು ತಿಳಿಯಬಹುದು. ಆ ಹುದ್ದೆಯು ವಂಶ ಪಾರಂಪರ್ಯವಾಗಿತ್ತು. ಗ್ರಾಮ ಮುಖಂಡನನ್ನು ಯಾವ ಕಾರಣದಿಂದಲೂ ತೆಗೆಯುವಂತಿರಲಿಲ್ಲ[6] ಅವನು ತಪ್ಪು ಮಾಡಿದರೆ ಶಿಕ್ಷೆಗೊಳಗಾಗುತ್ತಿದ್ದನು. ಅವನನ್ನು ಮರಣದಂಡನೆಗೆ ಗುರಿಪಡಿಸಿದರೆ ಅವನ ಹುದ್ದೆಯು ಅವನ ಮಗ ಅಥವಾ ಉತ್ತರಾಧಿಕಾರಿಗೆ ಹೋಗುತ್ತಿತ್ತು. ಅವನು ಕಂದಾಯವನ್ನು ಕೊಡದೆ ತಪ್ಪಿಸಿಕೊಂಡರೆ "ಗಾನ್ ಕಾರಿಯ" ಎಂಬ ಗ್ರಾಮಸಭೆಯು ಸೇರಿ ಅವನನ್ನು ಹಿಡಿಯಲು ಒಂದು ಘೋಷಣೆಯನ್ನು ಹೊರಡಿಸುತ್ತಿದ್ದಿತು. ಗ್ರಾಮ ಮುಖಂಡನಿಗೆ ಕಂದಾಯ ಮತ್ತು ಸಾಗುವಳಿಗೆ ಸಂಬಂಧಿಸಿದ ಹಲವು ಕರ್ತವ್ಯಗಳನ್ನು ವಹಿಸಲಾಗಿತ್ತು. ಪ್ರತಿ ಗ್ರಾಮವೂ ಒಂದು ಗೊತ್ತಾದ ಕಂದಾಯವನ್ನು ಸಲ್ಲಿಸಬೇಕಾಗಿತ್ತು. ಗ್ರಾಮ ಮುಖಂಡನು ಗುಮಾಸ್ತೆಯ

---

1. *SII*, IX, (ii), No. 433.
2. *Ibid.*, No. 670.
3. 508 of 1914.
4. Sewell : *op.cit.*, p. 150.
5. Baden-Powell : *The Villages of Goa in the Early Sixteenth Century.* *JRAS*, 1900, p. 263.
6. *Ibid.*, p. 264.

ಸಹಾಯದಿಂದ ಆ ಮೊತ್ತವನ್ನು ಸಾಗುವಳಿದಾರರಿಗೆ ಹಂಚುತ್ತಿದ್ದನು. ನಿಗದಿಮಾಡಿದ ಕಂದಾಯವನ್ನು ಅವರು ಪಾವತಿ ಮಾಡಬೇಕಾಗಿತ್ತು. ಗ್ರಾಮದ ಮುಖಂಡನು ಗ್ರಾಮವು ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದ ಕಂದಾಯವನ್ನು ಗ್ರಾಮಸ್ಥರಲ್ಲಿ ಹಂಚಿ, ಅದನ್ನು ವಸೂಲಿಮಾಡಿ ಸಲ್ಲಿಸಬೇಕಾಗಿತ್ತು. ಲಾಭ ಅಥವಾ ನಷ್ಟವು ಗ್ರಾಮಕ್ಕೆ ಸೇರಿದುದಾಗಿತ್ತು. ಆದರೆ ಯುದ್ಧದಿಂದ ನಷ್ಟವಾದರೆ ಕಂದಾಯದಲ್ಲಿ ರಿಯಾಯಿತಿ ದೊರಕುತ್ತಿತ್ತು.

ಗಾನ್‌ಕಾರರು ಗ್ರಾಮಸೇವಕರಿಗೆ ಖಾಲಿ ನಿವೇಶನಗಳನ್ನು ಕಂದಾಯರಹಿತವಾಗಿ ಕೊಡಬಹುದಾಗಿತ್ತು. ಹೀಗೆ ದಾನಮಾಡಿದುದನ್ನು ಹಿಂತೆಗೆದುಕೊಳ್ಳುವಂತಿರಲಿಲ್ಲ ಅಥವಾ ಯಾವ ಗ್ರಾಮ ಸೇವಕನನ್ನೂ ವಜಾ ಮಾಡಿ ಮತ್ತೊಬ್ಬನನ್ನು ನೇಮಿಸು ವಂತಿರಲಿಲ್ಲ. ಇದಕ್ಕೆ ಆ ಹುದ್ದೆಗಳು ವಂಶಪಾರಂಪರ್ಯವಾಗಿದ್ದುದೇ ಕಾರಣವಾಗಿತ್ತು. ಹುದ್ದೆಗೆ ವಾರಸುದಾರರಿಲ್ಲದಿದ್ದರೆ ಅದೇ ಉದ್ಯೋಗದ ಇತರರನ್ನು ನೇಮಿಸಬೇಕಾಗಿತ್ತು. ಗ್ರಾಮ ಮುಖಂಡನು ಗ್ರಾಮ ನಿವಾಸಿಗಳಲ್ಲದೆ ಇತರರಿಗೆ ದಾನಗಳನ್ನು ಕೊಡುವಂತಿರ ಲಿಲ್ಲ. ಭೂಮಿಯಲ್ಲಿ ಬೇಸಾಯಮಾಡದಿದ್ದರೆ ಅಥವಾ ಪಾಳು ಬಿದ್ದಿದ್ದರೆ ಕಂದಾಯ ವನ್ನು ನಿರ್ಧರಿಸಿ, ಸಾಗುವಳಿಮಾಡುವ ಉದ್ದೇಶದಿಂದ ಅರ್ಜಿ ಹಾಕಿದವರಿಗೆ ಕೊಡ ಬಹುದಿತ್ತು. ನಂತರದಲ್ಲಿ ಸಂಪ್ರದಾಯಬದ್ಧ ಕಂದಾಯವನ್ನು ಕೊಡಬೇಕಿತ್ತು. ಹಾಗೆ ಕೊಟ್ಟ ಭೂಮಿಯನ್ನು ವಂಶಪಾರಂಪರ್ಯವಾಗಿ ಅನುಭವಿಸಬಹುದಾಗಿತ್ತು.

ವಿಜಯನಗರದ ಶಾಸನಗಳಲ್ಲಿ ಗೌಡಿಕೆಯನ್ನು ವಿಕ್ರಯಿಸಿದ ಒಂದು ನಿದರ್ಶನ ವಿದೆ. ಕ್ರಿ.ಶ. ೧೫೪೧ ರಲ್ಲಿ ಸಿದ್ದಪುರದ ಸಿದ್ದಣ್ಣಗೌಡ ತನಗೆ ಸೇರಿದ ರೊಟ್ಟೊಹಳ್ಳಿಯ ಗೌಡಿಕೆಯನ್ನು ಮದಕರಿ ನಾಯಕನಿಗೆ ೨ ಸಾವಿರ ವರಹಗಳಿಗೆ ಮಾರಿದನು.[1]

ರಾಜನು ಈ ಹುದ್ದೆಯನ್ನು ತನಗೆ ಬೇಕಾದವರಿಗೆ ಕೊಡಬಹುದುದಾಗಿತ್ತು.[2] ಈ ಹುದ್ದೆಯನ್ನು ರಾಜ ಅಥವಾ ಅವನ ಅಧಿಕಾರಿಗಳು ಅಥವಾ ಗ್ರಾಮಾಧಿಕಾರಿಗಳು ಸಾರ್ವಜನಿಕ ಸೇವೆ ಮಾಡಿ ಹೆಸರುವಾಸಿಯಾದವರಿಗೆ ಕೊಡಬಹುದಿತ್ತು. ಗ್ರಾಮದ ಮುಖ್ಯಸ್ಥನು, ಜನರ ಪ್ರತಿನಿಧಿ ಮತ್ತು ಸರ್ಕಾರದ ನಿಯೋಗಿಯಾಗಿದ್ದುದರಿಂದ ಸರ್ಕಾರವು ನೇಮಿಸದಿದ್ದಲ್ಲಿ, ಆ ನೇಮಕವನ್ನು ಸರ್ಕಾರವು ಅನುಮೋದಿಸಬೇಕಿತ್ತು.

ಈ ಸಂದರ್ಭದಲ್ಲಿ ಸ್ಥಳ-ಗೌಡ ಹುದ್ದೆಯ ಹಲವು ನಿದರ್ಶನಗಳನ್ನು ಕೊಡ ಬಹುದು. ಶಾಸನಗಳಲ್ಲಿ ಸ್ಥಳ ಎಂಬ ಪದವನ್ನು ಪುನರ್ವಿಭಾಗಗಳಿಗೆ ಅಥವಾ ಹಲವು ಗ್ರಾಮಗಳ ಗುಂಪಿಗೆ ಕೊಡಲಾಗುತ್ತಿತ್ತು. ಗೌಡನ ಅಧಿಕಾರವು ಗ್ರಾಮಕ್ಕೆ ಸಂಬಂಧಿ ಸಿದ್ದ ಹಾಗೆಯೇ ಸ್ಥಳ-ಗೌಡನ ಅಧಿಕಾರವು "ಸ್ಥಳಕ್ಕೆ" ಸಂಬಂಧಿಸಿತ್ತು. ಕ್ರಿ.ಶ. ೧೫೩೩ ರ ಹಿರಿಯೂರಿನ ಒಂದು ಶಾಸನದಲ್ಲಿ "**ಗ್ರಾಮದ ಸ್ಥಳದ ಗೌಡಿಕೆ**" ಎಂಬ ವಾಕ್ಸರಣಿ

1 *EC*, XI, Cd. 48.
2. *SII*, IX, (ii), No. 173.

ಯನ್ನು ಉಪಯೋಗಿಸಲಾಗಿದೆ. ಈ ಶಾಸನವು ಸ್ಥಳ-ಗೌಡಿಕೆಯನ್ನು ನೀಡುವವಿಧಾನವನ್ನು ತಿಳಿಸುತ್ತದೆ. ಮಹಾನಾಯಕಾಚಾರ್ಯ, ಹರತಿಐಮಂಗಲ ತಿಪ್ಪಲ ನಾಯಕಾಚಾರ್ಯನು ವಡ್ಡ ಈರನ ಬೋರನಿಗೆ, ಧರ್ಮಾಪುರ "ಸಮ್ಮತ್"ನಲ್ಲಿ ಕಂದೇಹಳ್ಳಿ ಕೋಟೆಗೆ ೨೫೦ ಗಡ್ಯಾಣಗಳನ್ನು ಖರ್ಚುಮಾಡಿ ನಾಲ್ಕು ಗೋಪುರಗಳನ್ನು ಕಟ್ಟಿಸಿದುದಕ್ಕೆ, ಆ ಗ್ರಾಮದ ಸ್ಥಳ-ಗೌಡಿಕೆಯನ್ನು ವಂಶಪಾರಂಪರ್ಯವಾಗಿ ಕೊಟ್ಟನು.[1] ಅದೇ ಸ್ಥಳದ ಮತ್ತೊಂದು ಶಾಸನದ ಪ್ರಕಾರ ಅದೇ ಮಹಾನಾಯಕಾಚಾರ್ಯನು ದೊಡ್ಡ ಈರನ ಬೋರನು ಸೂಗೂರು ಕೋಟೆಗೆ ೨೦೦ ವರಹಗಳ ವೆಚ್ಚದಲ್ಲಿ ೪ ಗೋಪುರಗಳನ್ನು ಕಟ್ಟಿಸಿದುದಕ್ಕೆ ದೊಡ್ಡದಮನಗೌಡನ ಮುಖಾಂತರ "ಇನಾಂ" ಭೂಮಿಯನ್ನು ಕೊಟ್ಟನು ಮತ್ತು ದೊಡ್ಡದಮನಗೌಡನಿಗೆ ಸ್ಥಳ-ಗೌಡಿಕೆಯನ್ನು ಕೊಟ್ಟನು.[2] ಈ ಉದಾಹರಣೆಗಳಿಂದ ಸ್ಥಳ-ಗೌಡಿಕೆಯನ್ನು ಸಾರ್ವಜನಿಕ ಸೇವೆಯಿಂದ ಹೆಸರುವಾಸಿ ಯಾದವರಿಗೆ ರಾಜನ ಅಧಿಕಾರಿಗಳು ನೀಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಹಿರಿಯೂರು ಶಾಸನಗಳು ಗ್ರಾಮದ ಹುದ್ದೆಗಳು ವಂಶಪಾರಂಪರ್ಯವಾಗಿದ್ದುದಕ್ಕೆ ಆಧಾರವಾಗಿವೆ.

ಶಾಸನಗಳು ಇತರ ಗ್ರಾಮಾಧಿಕಾರಿಗಳ ಹೆಸರುಗಳನ್ನು ತಿಳಿಸುತ್ತವೆ. ಅವರಲ್ಲಿ ಸೇನಬೋವ ಅಥವಾ ಶ್ಯಾನುಭೋಗ ಮುಖ್ಯವಾದವನಾಗಿದ್ದನು. ಅವನು ಗ್ರಾಮದ ಕರಣಿಕನಾಗಿದ್ದದು. ಇದು ಬಹಳ ಹಿಂದಿನಿಂದ ಬಂದಿದ್ದ ಒಂದು ಹುದ್ದೆಯಾಗಿದ್ದಿತು. ಪಶ್ಚಿಮ ಚಾಳುಕ್ಯರ ಕ್ರಿ.ಶ. ೧೦೯೩-೧೦೯೪ ರ ಒಂದು ಶಾಸನವು ಅದನ್ನು ತಿಳಿಸುತ್ತದೆ.[3] ಕ್ರಿ.ಶ. ೧೨೩೮ ರಲ್ಲಿ ಒಬ್ಬ "ಸೇನಬೋವ" ಸೇತುಗ್ರಾಮದ ಅಧಿಕಾರಿಯಾಗಿದ್ದನು.[4] ಅವನು ಗ್ರಾಮದ ಕಂದಾಯದ ದಾಖಲೆ, ಸಾಗುವಳಿ ಮಾಡಬಹುದಾದ ಮತ್ತು ಪಾಳುಬಿದ್ದ ಭೂಮಿಯ ಲೆಕ್ಕಾಚಾರ, ತರಿ ಮತ್ತು ಬರಡು ಭೂಮಿಗಳು, ತರಿ ಮತ್ತು ಒಣಫಸಲುಗಳ ಅಂದಾಜು, "ಬ್ರಹ್ಮದೇಯ" ಮತ್ತು "ದೇವಾದಾಯ" ಭೂಮಿಯ ವಿವರಗಳು ಮತ್ತು ಗ್ರಾಮಾಡಳಿತಕ್ಕೆ ಸಂಬಂಧಿಸಿದ ವಿವರಗಳ ದಾಖಲೆಹೊಂದಿದ್ದನು. ಅವನನ್ನು ಕುಲಕರಣಿ ಅಥವಾ ಕರಣಂ ಎಂದು ಕರೆಯುತ್ತಿದ್ದರೆಂದು ಕಾಣುತ್ತದೆ. ಗೌಡ ಮತ್ತು ಸೇನಬೋವ ಗ್ರಾಮದ ಮುಖ್ಯ ಅಧಿಕಾರಿಗಳಾಗಿದ್ದರು. ಅವರ ಒಪ್ಪಿಗೆ ಇಲ್ಲದೆ ಗ್ರಾಮಕ್ಕೆ ಸಂಬಂಧಪಟ್ಟ ವ್ಯವಹಾರಗಳು ನಿರರ್ಥಕ ಮತ್ತು ಕಾನೂನಿಗೆ ವಿರೋಧವಾಗಿರುತ್ತಿದ್ದವು. ಸೇನಬೋವ ಹುದ್ದೆಯು ವಂಶಪಾರಂಪರ್ಯವಾಗಿತ್ತು. ಕ್ರಿ.ಶ. ೧೫೬೫ ರ ಚನ್ನಗಿರಿಯ ಒಂದು ಶಾಸನವು ಗ್ರಾಮದ ಹುದ್ದೆಗಳು ವಂಶಪಾರಂಪರ್ಯ ವಾಗಿದ್ದುದಕ್ಕೆ ಸ್ಪಷ್ಟ ನಿದರ್ಶನವಾಗಿದೆ. ಸೇನಬೋವ ಮತ್ತು ಜ್ಯೋತಿಷ ಹುದ್ದೆಗಳನ್ನು

1. *EC*, XI, Hr. 36.
2. *EC*, XI, Hr. 39.
3. Fleet: *Indian Antiquary*, V, p. 344.
4. *EC*, VIII, Nr. 10.

ಲಿಂಗಣ್ಣನೆಂಬುವನಿಗೆ ಕೊಡಲಾಗಿತ್ತು. ಮುಂಚೆ ಇದ್ದ ನಿವಾಸಿಗಳು ಸಂತೆಬೆನ್ನೂರು ಸೀಮೆಗೆ ಸೇರಿದ ಎಲ್ಲಾ ಗ್ರಾಮಗಳ ಸೇನಬೋವ, ಜ್ಯೋತಿಷ ಮತ್ತು ಪುರೋಹಿತ ಹುದ್ದೆಗಳು ಲಿಂಗಣ್ಣನಿಗೆ ಸೇರಿದ್ದೆಂದು ಹೇಳಿದುದರಿಂದ, ಹಿಂದಿನ ಪದ್ಧತಿಯಂತೆ ಆ ಹುದ್ದೆಗಳನ್ನು ವಂಶಪಾರಂಪರ್ಯವಾಗಿ ಅವನಿಗೆ ಕೊಡಲಾಯಿತು.[1] ಸೇನಬೋವ ಹುದ್ದೆಯು ಯಾವಾಗಲೂ ವಂಶಪಾರಂಪರ್ಯವಾಗಿದ್ದುದರಿಂದ, "ಕುಲ" ಎಂಬ ಪದದ ಒಂದು ಅರ್ಥ "ವಂಶಪಾರಂಪರ್ಯ" ಎಂಬುದರಿಂದ, ಕುಲಕರಣಿ ಎಂದರೆ ವಂಶಪಾರಂಪರ್ಯ ಕರಣಿಕನೆಂದು ಹೇಳಬಹುದು.[2] ವಿಜಯನಗರ ಕಾಲದ ಆಳ್ವಿಕೆಯಲ್ಲಿ ಈ ವಂಶಪಾರಂಪರ್ಯ ಪದ್ಧತಿಯು ಮುಂದುವರಿಯಿತು.

ಗ್ರಾಮಕ್ಕೆ ಇತರ ಗ್ರಾಮಸೇವಕರ ಹಾಗೆಯೇ ಬ್ರಾಹ್ಮಣ ಪುರೋಹಿತನು ಮುಖ್ಯವಾಗಿದ್ದನು. ಪುರಾತನಕಾಲದಿಂದ ಹಿಂದೂ ಸಮಾಜದ ಪ್ರತಿ ಸದಸ್ಯನೂ ಪುರೋಹಿತನ ಸಲಹೆ ಕೇಳಿ ಶುಭಮುಹೂರ್ತದಲ್ಲಿ ಕಾರ್ಯಾರಂಭ ಮಾಡುತ್ತಿದ್ದನು. ತುಮಕೂರು ಜಿಲ್ಲೆಯ ಸೆಟ್ಟಿಕೆರೆಯ ಒಂದು ಶಾಸನವು ಗ್ರಾಮ ಜ್ಯೋತಿಷನ ಸೇವಾ ನಿಯಮಗಳನ್ನು "ಊರಲಿದ್ದು ಊಳಿಗವ ನಡೆಸಿ"[3] ಎಂದರೆ ಅವನು ಊರಲ್ಲಿ ವಾಸ ಮಾಡಿ ಮತ್ತು ತನ್ನ ಕರ್ತವ್ಯವನ್ನು ಮಾಡುತ್ತಿದ್ದರೆ ತನ್ನ ಇನಾಂ ಭೂಮಿಯನ್ನು ಅನುಭವಿಸಬಹುದಾಗಿತ್ತು.

ಪೋಲೀಸ್ ಕೆಲಸಗಳಿಗೆ "ತಳಾರಿ"ಯನ್ನು ನೇಮಿಸುತ್ತಿದ್ದರು. ಅವನ ಚಟುವಟಿಕೆಗಳ ಮೇಲ್ವಿಚಾರಣೆಯನ್ನು ಗ್ರಾಮಮುಖ್ಯಸ್ಥನು ನೋಡಿಕೊಳ್ಳುತ್ತಿದ್ದನು. "ತಳಾರಿ"ಯು ಗೌಡನ ಅಧೀನದಲ್ಲಿ ಕೆಲಸಮಾಡಬೇಕಾಗಿತ್ತು. ಅವನನ್ನು ತಳವಾರ ಅಥವಾ ಕಾಪು ಅಥವಾ ಕಾವಲ್ ಎಂದೂ ಕರೆಯಲಾಗುತ್ತಿತ್ತು. ಇತರ ಗ್ರಾಮ ಹುದ್ದೆಗಳ ಹಾಗೆ ಅವನ ಹುದ್ದೆಯೂ ವಂಶಪಾರಂಪರ್ಯದ್ದಾಗಿತ್ತು. ಅವನು ಶಾಂತಿಯನ್ನು ಕಾಪಾಡಲು ಅಹೋರಾತ್ರಿ ಗಸ್ತು ತಿರುಗುತ್ತಾ ಅಪರಾಧಿಗಳನ್ನು ಹಿಡಿಯಬೇಕಾಗಿತ್ತು. ಗ್ರಾಮವನ್ನು ಕ್ರೂರಮೃಗಗಳು ಮತ್ತು ಹೊರಗಿನ ಶತ್ರುಗಳಿಂದ ರಕ್ಷಿಸುವುದು "ಬಾರಿ-ಕಾಪು" ಎಂಬ ಗ್ರಾಮಸೇವಕನ ಕರ್ತವ್ಯವಾಗಿತ್ತು. ಅನೇಕ ವೇಳೆ "ಕಾಪು"ಗಳ ಸಂಭಾವನೆಯನ್ನು ಗ್ರಾಮದಿಂದ ಕೊಡಲಾಗುತ್ತಿತ್ತು. ಕ್ರಿ. ಶ. ೧೫೦೪-೦೫ ರಲ್ಲಿ ಚನ್ನಮನಾಯನಿಂಗರು, ಕಂಚ್ಯಕುಂಟದ ಕೆರೆಯ ಕೆಳಗಿನ ಭೂಮಿಯಲ್ಲಿ ಮೂರು ಭಾಗವನ್ನು ದೇವರು, ಬ್ರಾಹ್ಮಣರು ಮುಂತಾದವರಿಗೂ ಮತ್ತು ಗ್ರಾಮವನ್ನು ಕಾಯುತ್ತಿದ್ದ "ಕಾಪು"ಗಳಿಗೆ ಎರಡು ಭಾಗಗಳೂ ಸೇರಬೇಕೆಂದು ತೀರ್ಮಾನಿಸಿದನು.[4]

---

1. *EC*, VII, *Cl*· 62.
2. Dikshit, *op.cit.*, p. 66.
3. *EC*, XII, Ck. 2.
4. *ARSIE*, 1916, p. 143; 388 of 1915.

ಅಕ್ಕಸಾಲಿಗ, ಬಡಗಿ, ಕಮ್ಮಾರ, ಕುಂಬಾರ, ಅಗಸ ಮತ್ತು ನಾಯಿಂದ ಮೊದಲಾದವರು ಇತರ ಗ್ರಾಮ ಸೇವಕರಾಗಿದ್ದರು. ಹಿಂದೆ ತಿಳಿಸಿರುವಂತೆ ಅವರ ಸಂಖ್ಯೆಯು ಗ್ರಾಮದ ಸಂಖ್ಯೆಯನ್ನು ಅವಲಂಬಿಸಿದ್ದಿತು. ಗ್ರಾಮವು ಆರ್ಥಿಕ ಕ್ಷೇತ್ರದಲ್ಲಿ ಸ್ವತಂತ್ರವಾಗಿದ್ದಿತು. ಅದು ತನ್ನ ನಿವಾಸಿಗಳಿಗೆ ಜೀವನಕ್ಕೆ ಆವಶ್ಯಕವಾದುದನ್ನೆಲ್ಲಾ ಒದಗಿಸುತ್ತಿತ್ತು. ಗ್ರಾಮಸಮುದಾಯವು ಅಚ್ಚುಕಟ್ಟಾಗಿತ್ತು ಮತ್ತು ಮುಂದೆ ತಿಳಿಸಿರುವಂತೆ, ಗ್ರಾಮದ ವ್ಯವಹಾರಗಳನ್ನು ಗ್ರಾಮಸ್ಥರೇ ನೋಡಿಕೊಳ್ಳುತ್ತಿದ್ದರು.

**ಗ್ರಾಮಸೇವಕರ ಸಂಭಾವನೆ:** ಗೌಡನ ಮುಖ್ಯ ಜೀವನಾಧಾರ "ಗೌಡ-ಗೊಡಗೆ" ಅಥವಾ ಕಂದಾಯ ರಹಿತವಾದ "ಇನಾಂ" ಭೂಮಿಯಾಗಿತ್ತು. ಕೆಳಗೆ ಕೊಟ್ಟಿರುವ ಉದಾಹರಣೆಗಳು, ಈ ಅಭಿಪ್ರಾಯಕ್ಕೆ ಸಾಕ್ಷಿಯಾಗಿವೆ: (೧) ಕ್ರಿ. ಶ. ೧೪೧೪ ರಲ್ಲಿ ಗೋಪಿನಾಯಕನು "ಗೌಡ-ಗೊಡಗೆ"ಯಾಗಿ ಕೆತಗೌಡನಿಗೆ ಭೂಮಿಯನ್ನು ಕೊಟ್ಟನು.[1] (೨) ಕ್ರಿ.ಶ. ೧೫೨೮ ರಲ್ಲಿ "ಗೌಡಿಕೆ-ದಂಡಿಗೆ"ಗೆ ಉಂಬಳಿಯಾಗಿ ಕಮನ ಹಳ್ಳಿಯನ್ನು ಅಕ್ಕಿಮಂಗಲು ತಿಮ್ಮಪ್ಪಗೌಡನಿಗೆ ಕೊಡಲಾಯಿತು.[2] (೩) ಮಳವಳ್ಳಿ ತಾಲ್ಲೂಕಿನ ಬೊಮ್ಮನಹಳ್ಳಿಯ ಒಂದು ಶಾಸನವು ಕ್ರಿ. ಶ. ೧೫೬೨ ರಲ್ಲಿ ವೀರಣ್ಣ "ಗೌಡ-ಗೊಡಗೆ"ಯಾಗಿ, ಎಲ್ಲ ಹಕ್ಕುಗಳೊಡನೆ, ಧನಗೂರು ಸ್ಥಳದ ಬೊಮ್ಮನಹಳ್ಳಿಯನ್ನು ಚಿಕ್ಕಸವಿಯಪ್ಪನಿಗೆ ಕೊಡಲಾಯಿತೆಂದು ದಾಖಲೆಮಾಡಿದೆ.[3] ಈ ದಾನವನ್ನು ಪ್ರಜೆಗಳ ಸಲಹೆ ಕೇಳದೆ ಮಾಡಲಾಯಿತು. (೪) ಹದುಗಲಿ ತಾಲ್ಲೂಕಿನ ನಕ್ಕರ ಹಲುವಿನ, ಕ್ರಿ. ಶ. ೧೫೬೨ ರ ಒಂದು ಶಾಸನವು, ನಗರೆಹಾಳ್ ಅಧಿಕಾರಿ ಸೇನಬೋವ ತಿರುಮಲ್ಲರಸ ಗೌಡ, ತಳರ ಮತ್ತು ಜೋಯಿಸರಿಗೆ "ಮಾನ್ಯ" ಭೂಮಿಯನ್ನು ಕೊಡಲಾಯಿತೆಂದು ತಿಳಿಸುತ್ತದೆ.[4] ಕ್ರಿ. ಶ. ೧೬೪೪ ರ ಒಂದು ಶಾಸನವು ಗೌಡ ಹುದ್ದೆಯನ್ನು ನಡೆಸಲು ನಾಡು ಪ್ರಜೆಗಳ ಒಪ್ಪಿಗೆಯಿಂದ ಕುಮ್ಮರ ಕುಂಟೆ ಗ್ರಾಮವನ್ನು ತೆರಿಗೆ ರಹಿತವಾಗಿ ದಾನಮಾಡಲಾಯಿತೆಂದು ದಾಖಲು ಮಾಡಲಾಗಿದೆ.[5]

ಚಾಮರಾಜನಗರ ತಾಲ್ಲೂಕಿನ ಕುದೇರು ಗ್ರಾಮದ ಒಂದು ಶಾಸನವು ಗೌಡನಿಗೆ ಹಲವು ತೆರಿಗೆಗಳನ್ನು ವಸೂಲು ಮಾಡುವ ಹಕ್ಕನ್ನು ಗ್ರಾಮಸ್ಥರು ಕೊಟ್ಟರೆಂದು ತಿಳಿಸುತ್ತದೆ. ಈ ಶಾಸನವು ರವುತ್ತಪುರವೆಂಬ ಗ್ರಾಮದ ಸ್ಥಾಪನೆಯನ್ನೂ, ಗ್ರಾಮದ "ಗೌಡ" ಬೈರಣ್ಣನಿಗೆ ಆ ಗ್ರಾಮದಲ್ಲಿ ಮಗ್ಗಗಳ ಮತ್ತು ಮನೆಗಳ ಮೇಲೆ ತೆರಿಗೆಗಳನ್ನು ವಸೂಲು ಮಾಡುವ ಹಕ್ಕನ್ನು ಮತ್ತು ಆ ಗ್ರಾಮವು ಸಲ್ಲಿಸಬೇಕಾಗಿದ್ದ

1. *EC*, IX, Cp. 169.
2. *EC*, X, Sd. 15.
3. *EC*, X, Sd. 15.
4. *SII*, IX, (ii), No. 676.
5. *MAR*, 1926, No. 95.

ಕಂದಾಯದಲ್ಲಿ ೨೦ " ಗದ್ಯಾಣ "ಗಳ ರಿಯಾಯಿತಿಯನ್ನು ದಾಖಲು ಮಾಡಿದೆ. ಈ ದಾನವನ್ನು ಕುಡಿಹೇರು ಪ್ರಭುಗಳ ಮತ್ತು ಅದೇ ಸ್ಥಳದ ಅಷ್ಟಾದಶ ಪ್ರಜೆಗಳ ಅನುಮತಿಯಿಂದ ಮಾಡಲಾಯಿತು. ಈ ನಿದರ್ಶನವು ಪ್ರಜೆಗಳ ಅನುಮತಿಯಿಂದ ಹೊಸ ಗ್ರಾಮದ ಸ್ಥಾಪನೆ, ಪ್ರಜೆಗಳ ಸಾಮೂಹಿಕ ಚಟುವಟಿಕೆ ಮತ್ತು ಗ್ರಾಮವನ್ನು ಸ್ಥಾಪಿಸಿದ ಮುಖ್ಯಸ್ಥನಿಗೆ ಹಲವು ತೆರಿಗೆಗಳನ್ನು ವಸೂಲು ಮಾಡುವುದೇ ಮುಂತಾದ ಹಕ್ಕುಗಳನ್ನು ಕೊಟ್ಟದುದರ ನಿದರ್ಶನವಾಗಿದೆ. ಈ ಶಾಸನದಿಂದ ಗ್ರಾಮ ಮುಖ್ಯಸ್ಥ ಅಥವಾ " ಗೌಡ " ಹುದ್ದೆಯನ್ನು ಗ್ರಾಮವನ್ನು ಸ್ಥಾಪಿಸಿದವನಿಗೆ ಕೊಡಲಾಗುತ್ತಿದ್ದಿತು ಮತ್ತು ಅವನಿಗೆ ಹಲವು ಕಂದಾಯಗಳನ್ನು ವಸೂಲು ಮಾಡುವ ಹಕ್ಕನ್ನು ಸಂಭಾವನೆಯಾಗಿ ನೀಡಲಾಗುತ್ತಿದ್ದಿತೆಂಬ ವಿಷಯಗಳು ತಿಳಿಯುತ್ತವೆ.[1]

ಕೇಂದ್ರ ಸರ್ಕಾರವು ಸೇನಬೋವನಿಗೆ ಸಂಭಾವನೆ ಕೊಡುತ್ತಿದ್ದಿತೆಂದು ಕಾಣುತ್ತದೆ. ಕ್ರಿ.ಶ. ೧೫೧೩ ರ ನಂಜನಗೂಡಿನ ಒಂದು ಶಾಸನವು ಸಾಳುವ ಗೋವಿಂದರಾಜು ಒಡೆಯರ್ ಸೇನಬೋವ ಸಿದ್ದಪ್ಪನಿಗೆ ಭೂದಾನಮಾಡಿದ್ದನ್ನು ತಿಳಿಸುತ್ತದೆ.[2] ಮಳವಳ್ಳಿಯ ಒಂದು ಶಾಸನವು ಕ್ರಿ.ಶ. ೧೫೫೦ರಲ್ಲಿ ಕಬ್ಬುರಗೌಡ ತನ್ನ ಗ್ರಾಮ ಕರಣಿಕ ಹುದ್ದೆಗೆ ಅರಮನೆಯಿಂದ ಬರುತ್ತಿದ್ದ ಸಂಭಾವನೆ ಮತ್ತು ಇತರ ಹಕ್ಕುಗಳನ್ನು ಅಮೃತೇಶ್ವರ ದೇವರಿಗೆ ಬಿಟ್ಟುಕೊಟ್ಟನೆಂದು ತಿಳಿಸುತ್ತದೆ.[3]

ಮೊದಲನೆಯ ವಿರೂಪಾಕ್ಷನ ಒಂದು ಶಾಸನವು, ಗ್ರಾಮದ ಅಧಿಕಾರಿಗಳಲ್ಲಿ ಆಶ್ರಯ ಪಡೆದ " ಕಳ್ಳ ವೇಲೈಕ್ಕಾರರು ", ಗ್ರಾಮದ ಭೂಮಿ ಮತ್ತು ಜನರ ರಕ್ಷಣೆಗೆ ಅವರು ಪ್ರತಿ ವರ್ಷವೂ ಹದಿನೆಂಟು ಜಾತಿಗಳ ಪ್ರತಿ ಸಂಸಾರದಿಂದ, ಮದುವೆ ಸಮಾರಂಭದಲ್ಲಿ ಒಂದು ಉಂಗುರವನ್ನು ಪಡೆಯಬಹುದೆಂಬ ವಿಷಯವನ್ನು ತಿಳಿಸುತ್ತದೆ.[4] ಮಂಗಳಕರ ಮತ್ತು ಉತ್ಸವ ಕಾಲದಲ್ಲಿ ರಕ್ಷಣೆ ನೀಡಲು ಗ್ರಾಮಸ್ಥರು ಸಂಭಾವನೆ ಕೊಡಬೇಕಾಗಿತ್ತು. ತಮಿಳುನಾಡಿನಲ್ಲಿ ಎರಡು ರೀತಿಯ ಗ್ರಾಮ ಪೋಲೀಸರು ಇದ್ದರೆಂದು ಕಾಣುತ್ತದೆ. ಅವರು " ಊರ್‌ಕಾವಲ್ " ಮತ್ತು " ಪಾಡಿಕಾವಲ್ " ಎಂಬ ಎರಡು ವಿಧವಾದ ಶುಲ್ಕವನ್ನು ಪಡೆಯುತ್ತಿದ್ದರು.[5] ಹೀಗೆ ಇನಾಂ ಭೂಮಿಗೆ ಬದಲಾಗಿ ಅವರು ಒಂದು ಶುಲ್ಕ ಅಥವಾ " ಆಯ "ವನ್ನು ಪಡೆಯುತ್ತಿದ್ದುದರಿಂದ " ಆಯಗಾರ್ " ಎಂಬ ಹೆಸರು ಬಂದಿದೆ. " ಆಯಗಾರ "ರು ಗ್ರಾಮಸ್ಥರು ಮತ್ತು ಸರ್ಕಾರ ಮತ್ತು ಸರ್ಕಾರದ ಅಧಿಕಾರಿಗಳ ನಡುವೆ ಸಂಪರ್ಕಹೊಂದಿದವರಾಗಿದ್ದರು. " ಆಯಗಾರ "ರು ಸರ್ಕಾರದ ಸೇವಕರಿಗಿಂತ ಹೆಚ್ಚಾಗಿ ಗ್ರಾಮ ಸೇವಕರಾಗಿದ್ದರು.

---

1. *MAR*, 1928, No. 37.
2. *EC*, III, Nj. No. 195.
3. *EC*, III. Ml. 67.
4. *Ibid*, III. Ml. 67.
5. *Ibid.*, 1916, p. 143.

**ಗ್ರಾಮಸಭೆಯ ಕರ್ತವ್ಯಗಳು :** ಗ್ರಾಮಸಭೆಗಳ ಹಕ್ಕುಗಳು ಮತ್ತು ಕರ್ತವ್ಯಗಳು ಸ್ಪಷ್ಟವಾಗಿದ್ದುವು. ಅವನ್ನು ವಿಜಯನಗರ ಕಾಲದ ಮುಂಚೆಯೇ ಗೊತ್ತುಮಾಡಲಾಗಿತ್ತು. ಚೋಳರ ಕಾಲದಲ್ಲಿ, ಗ್ರಾಮಗಳು ಸಾಮಾಜಿಕ ಮತ್ತು ರಾಜಕೀಯ ಜೀವನದ ಕೇಂದ್ರಗಳಾಗಿದ್ದುವು. ಗ್ರಾಮ ವ್ಯವಸ್ಥೆಯ ಮುಖ್ಯ ಲಕ್ಷಣವು ಗ್ರಾಮ ಸಭೆಯಿಂದ ಆಡಳಿತ ನಡೆಸುವುದಾಗಿತ್ತು. ತಮಿಳು ನಾಡಿನಲ್ಲಿ ಗ್ರಾಮ ಸಂಸ್ಥೆಗಳು ವಿಜಯನಗರದ ಹಿಂದಿನ ಕಾಲದಲ್ಲಿ ಪ್ರಜೆಗಳಿಗೆ ಅನೇಕ ಸೇವೆಯನ್ನು ಮಾಡುತ್ತಿದ್ದವು. ಜಮೀನುಗಳ ಮೇಲಿನ ಹತೋಟಿ, ನಿರಾವರಿ ಕೆಲಸಗಳ ಮತ್ತು ದೇವಸ್ಥಾನಗಳ ಮೇಲ್ವಿಚಾರಣೆ, ತೆರಿಗೆಗಳ ವಸೂಲಿ ಮತ್ತು ರಿಯಾಯಿತಿಗಳ ನೀಡಿಕೆ, ದಾನಗಳ ಹತೋಟಿ, ಹಣದ ಠೇವಣಿಗಳನ್ನು ಹೊಂದಿರುವುದು, ಬ್ಯಾಂಕಿನ ವ್ಯವಹಾರಗಳು ಮುಂತಾದ ವಿವಿಧ ಕರ್ತವ್ಯಗಳನ್ನು ನೆರವೇರಿಸುತ್ತಿದ್ದುವು.[1] ವಿಜಯನಗರದ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲೂ ಗ್ರಾಮ ಸಭೆಗಳು ಈ ಕರ್ತವ್ಯಗಳನ್ನು ಮಾಡುತ್ತಿದ್ದವು.[2] ಆಂಧ್ರದಲ್ಲೂ ಗ್ರಾಮ ನಿವಾಸಿಗಳು ಗ್ರಾಮದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು.[3] ಶಾಸನಗಳಿಂದ "ಊರು" ಅಥವಾ ಗ್ರಾಮ ಸಭೆಗಳ ಕರ್ತವ್ಯಗಳನ್ನು ತಿಳಿಯಬಹುದು.

**ಗ್ರಾಮ ಭೂಮಿಗೆ ಸಂಬಂಧಪಟ್ಟ ವ್ಯವಹಾರಗಳು :** ವಿಜಯನಗರದ ಕಾಲದಲ್ಲಿ ಗ್ರಾಮಸಭೆಯು ಹಿಂದೆ ಮಾಡುತ್ತಿದ್ದ ಚಟುವಟಿಕೆಗಳನ್ನು ಮುಂದುವರಿಸಿತು. ಅದು ತನ್ನ ಹತೋಟಿಗೆ ಸೇರಿದ್ದ ಆಸ್ತಿಯ ಮೇಲೆ ಸಂಪೂರ್ಣ ಹತೋಟಿ ಹೊಂದಿದ್ದು ದಾನ ಧರ್ಮಕ್ಕೆ ಅಥವಾ ಸಾರ್ವಜನಿಕ ಉಪಯೋಗಕ್ಕೆ ಭೂಮಿಯನ್ನು ಮಾರಬಹುದಿತ್ತು ಅಥವಾ ಪಡೆದುಕೊಳ್ಳಬಹುದಿತ್ತು. ಗ್ರಾಮ ಸಭೆಯು ಮಾಡುತ್ತಿದ್ದ ಈ ಕಾರ್ಯಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಬಾರಕೂರು ರಾಜ್ಯದಲ್ಲಿ ಚಕ್ಕರೆ ಗ್ರಾಮವಿದ್ದಿತು. ಅಲ್ಲಿ ಊರು ಸಭೆ ಇದ್ದಿತು. ಕ್ರಿ. ಶ. ೧೩೬೮ ರಲ್ಲಿ ಚಕ್ಕರೆಯ ೩೦ ಸಂಸಾರಗಳು ಮತ್ತು ಇತರರು ಕೋಟೇಶ್ವರ ದೇವರ ಸೇವೆಗೆ ೧೨ ಹೊನ್ನುಗಳು ಮತ್ತು ತರಿ ಮತ್ತು ಬಂಜರು ಭೂಮಿಯನ್ನು ದಾನಮಾಡಿದರು.[4]

(೨) ಕೊಳ್ಳೇಗಾಲ ತಾಲ್ಲೂಕಿನ ಮೋಡಹಳ್ಳಿ ಗ್ರಾಮದಲ್ಲಿನ ಒಂದು ಶಾಸನವು ಕ್ರಿ.ಶ. ೧೪೯೨ ರಲ್ಲಿ ಗೌಡ ಪ್ರಜೆಗಳು, ಹಿರಿಯ ಕಂಪರಾಯ ಮೋಡಹಳ್ಳಿಯಲ್ಲಿ ದಾನ

1. Mahalingam : *SIP*, p. 360.
2. Dikshit : *op.cit.*, pp. 79–81.
3. Somasekhara Sarma ; *op.cit.*, p. 223.
4. *SII*, IX, (ii), No. 407.

ಮಾಡಿದ್ದ ಹೊಲ ಮತ್ತು ಮನೆಗಳನ್ನು ಬ್ರಾಹ್ಮಣರಿಗೆ ಹಿಂದಿರುಗಿಸಿ, ಮೋಡೆಹಳ್ಳಿ ಅಥವಾ ಕಂಪರಾಜಪುರದ ಮಹಾಜನರ ಹತೋಟಿಗೆ ಕೊಟ್ಟನು[1]

(೩) ಬಾರಕೂರು ರಾಜ್ಯದ ಕುಂದಾಪುರವು ಒಂದು ಗ್ರಾಮಸಭೆಯನ್ನು ಹೊಂದಿದ್ದಿತು. ಕ್ರಿ.ಶ. ೧೪೩೫ ರಲ್ಲಿ ಕುಂದಾಪುರದ ಗ್ರಾಮಜಗತ್ತು (ನಿವಾಸಿಗಳು) ಅಧಿಕಾರಿ ನರಸಿಂಹದೇವ ಒಡೆಯನ ಆಜ್ಞೆಯ ಮೇಲೆ ಸೇರಿ ಕುಂದೇಶ್ವರ ದೇವರ ಸೇವೆಗೆ ಕುದೆಕುರ್ ದೇವಣ್ಣ ಸೇನಬೋವ ದಾನಮಾಡಿದ್ದ ಭೂಮಿಯನ್ನು ಊರ್ಜಿತಗೊಳಿಸಿದನು.[2]

(೪) ಕ್ರಿ.ಶ. ೧೪೪೯ ರಲ್ಲಿ ಹೊಂಗನ್ನಿ ಹಳ್ಳಿಯ ಗ್ರಾಮದ ಗೌಡರು ಎಣ್ಣೆ ನಾಡಿನ ಹರದನ ಹಳ್ಳಿಯ ದಿವ್ಯ ಲಿಂಗೇಶ್ವರ ದೇವರ ನೈವೇದ್ಯಕ್ಕೆ ಮತ್ತು ಶಾಶ್ವತವಾಗಿ ದೀಪಾರಾಧನೆಗೆ ಗಜನೂರು ಗ್ರಾಮವನ್ನು ದಾನಮಾಡಿದರು. ಈ ದಾನವನ್ನು "ಹಳ್ಳಿ ಗ್ರಾಮದ ಸಮಸ್ತ ಗವುಡ"ಗಳು ಮಾಡಿದರು.[3]

(೫) ವಿಜಯನಗರದ ಸಾಮ್ರಾಟ ದೇವರಾಯನ ಕಾಲದಲ್ಲಿ ಅವತಿಯ ನರಪ ಗವುಡನು ತನ್ನ ತಂದೆಯ ಪುಣ್ಯಕ್ಕೋಸ್ಕರ ದೇವರ ಸೇವೆಗೆ ಸ್ವಲ್ಪ ಭೂಮಿಯನ್ನು ದಾನವಾಗಿ ಕೊಟ್ಟನು. ಈ ದಾನವನ್ನು ಕಕತಿ ಗ್ರಾಮದ "ಪ್ರಜೆಗಳ ಅನುಮತಿಯಿಂದ ಮಾಡಲಾಯಿತು."[4]

(೬) ವಿಜಯನಗರ ಸಾಮ್ರಾಟರ ಆಳ್ವಿಕೆಯಲ್ಲಿ ಮದ್ದೂರು ಸಭೆಯು ಮೊದಲಿನ ಹಾಗೆಯೇ ಕೆಲಸ ಮಾಡುತ್ತಿತ್ತು. ಮದ್ದೂರಿನ ಮಹಾಜನರು ಮತ್ತು ಗೌಡಪ್ರಜೆಗಳು ದೇಶಿನಾಥ ದೇವಸ್ಥಾನದಲ್ಲಿ ಯಾತ್ರಿಕರಿಗೆ ಆಹಾರ ಕೊಡಲು, ವೇದ ಪಾರಾಯಣ ಮಾಡುವುದಕ್ಕೆ ಮುಂತಾದುವಕ್ಕೆ ಮದ್ದೂರಿನಲ್ಲಿ ಸ್ವಲ್ಪ ಭೂಮಿಯನ್ನು ಮತ್ತು ತೆರಿಗೆಗಳನ್ನು ಕೊಟ್ಟರು.[5]

(೭) ಮತ್ತೊಂದು ನಿದರ್ಶನದಲ್ಲಿ ಗ್ರಾಮ ಸಭೆಯು ಕೆರೆಯನ್ನು ಕಟ್ಟಲು ಭೂಮಿಯನ್ನು ದಾನ ಮಾಡಿತು. ಕ್ರಿ.ಶ. ೧೪೪೯ ರಲ್ಲಿ ಉಜಯಿನಿ ಗ್ರಾಮದ ಗೌಡ ಪ್ರಜೆಗಳು ಮುಂದೆ ತಿಳಿಸಿರುವಂತೆ ದಾನಮಾಡಿದರು: ಚೇಮರಸ ಮತ್ತು ದೇವಸ್ಥಾನದ ಪೂಜಾರಿಗಳು ಆ ನಗರದ ಪೂರ್ವಕ್ಕೆ ಕೆರೆಯನ್ನು ಕಟ್ಟಲು ಹಣವನ್ನು ಒದಗಿಸಿ ಒಂದು ಒಪ್ಪಂದಕ್ಕೆ ಬಂದರು. ಅವರು ಕೆರೆಯನ್ನು ನಿರ್ಮಿಸಿದ ಮೇಲೆ ಭೂಮಿಯನ್ನು ತೆರಿಗೆ ರಹಿತವಾಗಿ ಕೊಟ್ಟರು.[6]

---

1. *SII*, IX, (ii), No. 421.
2. *Ibid.*, No. 441.
3. *MAR*, 1931, No. 56.
4. *MAR*, 1926, No. 78.
5. *Ibid.*, 1928, No. 56.
6. *EC*, XII, Kg. 18.

(೮) ನೆಲಮಂಗಲ ತಾಲ್ಲೂಕಿನ ಕುಲವನಹಳ್ಳಿಯ ಆಂಜನೇಯ ದೇವಸ್ಥಾನದ ಹಿಂದೆ ಇರುವ ಕ್ರಿ. ಶ. ೧೫೦೬ ರ ಒಂದು ಶಾಸನವು ಕೆಂಚಸೋಮಣ ನಾಯಕನ ಪುಣ್ಯಕ್ಕೆ ಗೌಡಪ್ರಜೆಗಳು ಶಿವರಾತ್ರಿಯ ದಿವಸ ಒಂದು ದಾನಮಾಡಿದರೆಂದು ತಿಳಿಸುತ್ತದೆ.[1]

(೯) ಕ್ರಿ. ಶ. ೧೫೦೬ ರಲ್ಲಿ ಚಿಕ್ಕಹಳ್ಳಿಯ ಗೌಡಪ್ರಜೆಗಳು ಅವರ ಗ್ರಾಮದ ಮಲ್ಲಿಕಾರ್ಜುನ ದೇವರಿಗೆ ಭೂದಾನ ಮಾಡಿದರು.[2]

(೧೦) ಕ್ರಿ.ಶ. ೧೫೧೦ ರ ಸಿರಾ ತಾಲ್ಲೂಕಿನ ಒಂದು ಶಾಸನವು, ತರೂರು ಚಿಕ್ಕಣ್ಣ "ಗೌಡ ಸೇನಬೋವರ ಒಪ್ಪದಿಂದ" ಗುಜ್ಜನೋಡು ಪರ್ವತಾರಾಧ್ಯರಿಗೆ ಭೂಮಿಯನ್ನು ದಾನಮಾಡಿದರೆಂದು ತಿಳಿಸುತ್ತದೆ.[3]

(೧೧) ಕ್ರಿ.ಶ. ೧೫೪೯ ರ ಬಳ್ಳಾರಿ ತಾಲ್ಲೂಕು ಹವಿನಹಲು ವೀರಪುರದ ಒಂದು ಶಾಸನವು ದೊಂಡವತೆಯ "ಸಮಸ್ತ ಪ್ರಜೆಗಳು" ಮಲೆಸಾನಿಗೆ ಗ್ರಾಮದ ಕೆರೆಯನ್ನು ದುರಸ್ತು ಮಾಡಲು ಭೂಮಿಯನ್ನು ಕೊಟ್ಟರು. ಇದು "ಸಮಸ್ತ ಪ್ರಜೆಗಳು", "ಊರು" ಸಭೆಗೆ ಅನ್ವಯಿಸುತ್ತದೆ ಎಂದು ತಿಳಿಸುತ್ತದೆ.[4]

(೧೨) ಹೊಸಪೇಟೆಯ ಹತ್ತಿರವಿರುವ ಒಂದು ಶಾಸನವು ಚಿಕವದಿಯ ಗೌಡ, ಸೇನಬೋವ ಮತ್ತು ಪ್ರಜೆಗಳು ಅಲ್ಲಿನ ದೇವರಿಗೆ ಒಂದು ದಾನಮಾಡಿದರೆಂದು ತಿಳಿಸುತ್ತದೆ.[5]

(೧೩) ಕಡೂರು ತಾಲ್ಲೂಕಿನ ಒಂದು ಶಾಸನವು ಕ್ರಿ. ಶ. ೧೫೪೦ ರಲ್ಲಿ ಕಡೂರಿನ ವೀರಭದ್ರ ದೇವರಿಗೆ, ಗೌಡ ಪ್ರಜೆಗಳು ಒಂದು ದಾನಮಾಡಿದರೆಂದು ತಿಳಿಸುತ್ತದೆ.[6]

(೧೪) ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರುವಿನ ಒಂದು ಶಾಸನವು ಕ್ರಿ. ಶ. ೧೫೫೧ ರಲ್ಲಿ "ಸಮಸ್ತ ಪ್ರಜೆ ಗೌಡ"ರು ಹೆಬ್ಬಾರಿನ ಉಪ್ಪು ತಯಾರಿಕರಿಗೆ ಕಂದಾಯ ಮಾಫಿ ಮಾಡಿ ಒಂದು ದಾನ ಮಾಡಿದರೆಂದು ತಿಳಿಸುತ್ತದೆ.[7]

(೧೫) ಕ್ರಿ. ಶ. ೧೫೫೪ ರಲ್ಲಿ ಹದಗಲ್ಲಿ ತಾಲ್ಲೂಕು ಛತ್ರದ ಹಳ್ಳಿಯ ಗ್ರಾಮ ಸಭೆಯು ಆ ಗ್ರಾಮದ ಗೌಡರು ಮತ್ತು ಇತರರನ್ನೊಳಗೊಂಡು, ಆ ಗ್ರಾಮದಲ್ಲಿ ಒಂದು ನೀರಿನ ತೊಟ್ಟಿಯನ್ನು ಕಟ್ಟಿಸಲು ಗ್ರಾಮದ ಹೊಲವೊಂದನ್ನು ದಾನಮಾಡಿತು.[8]

---

1. *MAR*, 1914-15, p. 93.
2. *EC*, XV, Hn. 76.
3. *EC*, XII, Si. 111.
4. *SII*, IX, (ii), No. 528.
5. *Ibid*., No. 636.
6. *EC*, XI, Hk. 71.
7. *EC*, XI, Mk. 9.
8. *SII*, IX, (ii), No. 670.

(೧೬) ಹಲವು ಗ್ರಾಮಗಳ ಜನರು ಒಗ್ಗಟ್ಟಾಗಿ ಕೆಲಸಮಾಡಿದ ದಾಖಲೆಗಳೂ ಇವೆ. ಕ್ರಿ.ಶ. ೧೫೭೫ ರ ಹಿರಿಯೂರಿನ ಒಂದು ಶಾಸನದ ಪ್ರಕಾರ, ಸಿದ್ದಲಾಯನ ಕೋಟೆಗೆ ಪಶ್ಚಿಮಕ್ಕಿದ್ದ ಕೆರೆಯು ಬಹಳ ಕಾಲದಿಂದ ಒಡೆದು ಹೋಗಿದ್ದುದರಿಂದ, ನಾಲ್ಕು ಗಡಿ ಗ್ರಾಮಗಳ ಗೌಡ ಸೇನಬೋವ ಪ್ರಜೆಗಳು ಮಹಾನಾಯಕಾಚಾರ್ಯ ಪದಣನಾಯಕನಿಗೆ ಅರ್ಜಿ ಹಾಕಿ, ಆ ಕೆರೆಗೆ ಸಂಬಂಧಪಟ್ಟ ಭೂಮಿಯನ್ನು ಅವರಿಗೆ ಕೊಟ್ಟರೆ, ಕೆರೆಯನ್ನು ಪುನಃ ಕಟ್ಟುವುದಾಗಿ ಮುಂದೆ ಬಂದರು.[1]

(೧೭) ನಿವಾಸಿಗಳು ಬಹಳ ಕಷ್ಟಕ್ಕೆ ಈಡಾಗಿ ಭೂಮಿಯನ್ನು ಮಾರಿದ ನಿದರ್ಶನ ವಿದೆ. ಸಾಳುವರ ಆಳ್ವಿಕೆಯ ಕಡೆಯಲ್ಲಿ ರಾಮ್‌ನಾಡು ಜಿಲ್ಲೆಯ ಜನರ ಸ್ಥಿತಿ ತೃಪ್ತಿಕರ ವಾಗಿರಲಿಲ್ಲವೆಂದು ಕಾಣುತ್ತದೆ. ವೇಳಾಂಗುಡಿಯ ನಿವಾಸಿಗಳು ಸರ್ಕಾರಕ್ಕೆ ಕೊಡ ಬೇಕಾಗಿದ್ದ ತೆರಿಗೆಗಳನ್ನು ಪಾವತಿಮಾಡಲು ನಿಶ್ಶಕ್ತರಾಗಿದ್ದರು. ಇದಕ್ಕೆ ಕಾರಣ ತೆರಿಗೆ ಗಳು ಅಧಿಕವಾಗಿದ್ದುದೇ ಆಗಿರಬೇಕು.[2]

(೧೮) ಸಾಮ್ರಾಜ್ಯದ ಇತರ ಭಾಗಗಳಲ್ಲಿಯೂ ಪರಿಸ್ಥಿತಿ ಮೇಲಿನ ನಿದರ್ಶನದಲ್ಲಿ ತಿಳಿಸಿದ ಹಾಗೆಯೆ ಇದ್ದಿತು. ತೆರಿಗೆಗಳು ಅಧಿಕವಾಗಿದ್ದುದರಿಂದ "ವಳಂಗೈ" ಮತ್ತು "ಇಡಂಗೈ" ಪಂಥದವರು ತೆರಿಗೆಗಳನ್ನು ವಿರೋಧಿಸಲು ಒಂದು ಸಂಸ್ಥೆಯನ್ನು ವ್ಯವಸ್ಥೆಮಾಡಿ ಅವರಿಗೆ ದ್ರೋಹ ಬಗೆದವರನ್ನು ಕೊಲ್ಲುವುದಾಗಿ ಪ್ರಮಾಣ ಮಾಡಿದರು.[3]

ಅಧಿಕ ತೆರಿಗೆಯಿಂದ ವಿಶೇಷ ನಷ್ಟಕ್ಕೊಳಗಾಗುತ್ತಿದ್ದ ಗ್ರಾಮಸ್ಥರು ಅದನ್ನು ತಪ್ಪಿಸಿಕೊಳ್ಳಲು ಬೇರೆಕಡೆ ವಲಸೆಹೋದ ಒಂದು ನಿದರ್ಶನವಿದೆ. ಹಾಗೆ ವಲಸೆ ಹೋದವರಿಗೆ, ಸ್ಥಳೀಯ ಅಧಿಕಾರಿಗಳು ಅವರನ್ನು ಹಿಂದಕ್ಕೆ ಕರೆಸಿಕೊಳ್ಳಲು, ನಂಬಿಕೆ ಯುಂಟಾಗುವ ಹಾಗೆ ಸನ್ನದುಗಳನ್ನು ಕೊಟ್ಟರು. ಉದಾಹರಣೆಗೆ, ಕ್ರಿ.ಶ. ೧೫೬೭ ರಲ್ಲಿ ಪ್ರಾಂತ್ಯಾಧಿಕಾರಿ ಚಿನ್ನಪ್ಪನಾಯಕನ ನಿಯೋಗಿ ರಾಮಣ್ಣನಾಯಕ, ಹೊಳಲ್ಕೆರೆ ತಾಲ್ಲೂಕಿನ ದುಮ್ಮಿಯ ಗ್ರಾಮಸ್ಥರಿಂದ ಹೆಚ್ಚಿನ ಕಂದಾಯವನ್ನು ವಸೂಲು ಮಾಡಿದುದರಿಂದ ಗ್ರಾಮವನ್ನು ಬಿಟ್ಟಿದ್ದರು. ರಾಮಣ್ಣನಾಯಕನು ಅವರನ್ನು ಕರೆತರಲು ತಾನು ಗ್ರಾಮಸ್ಥರನ್ನು ಸುಲಿಗೆ ಮಾಡುವುದಿಲ್ಲವೆಂತಲೂ ಮತ್ತು ಹಿಂಸಿಸು ವುದಿಲ್ಲವೆಂತಲೂ ಪ್ರಮಾಣಮಾಡಿದನು. ರಾಮಣ್ಣನಾಯಕ ದುಮ್ಮಿ ಗ್ರಾಮದ ಪಾರುಪತ್ಯಗಾರನಾಗಿದ್ದನು.[4]

---

1. *EC*, XI, Hr. 25.
2. *ARSIE*, 1916, p. 141.
3. 92 of 1918; 216 of 1917.
4. *MAR*, 1939, No. 16.

**ಕಂದಾಯ ವಿಷಯಗಳಿಗೆ ಸಂಬಂಧಿಸಿದ ವ್ಯವಹಾರಗಳು :** ಗ್ರಾಮ ಸಭೆಯು ಕಂದಾಯವನ್ನು ವಸೂಲು ಮಾಡುವ ಮತ್ತು ಅದನ್ನು ಖಜಾನೆಗೆ ಪಾವತಿಮಾಡುವ ಮುಖ್ಯ ಕರ್ತವ್ಯವನ್ನು ಮಾಡುತ್ತಿತ್ತು. ಸರ್ಕಾರವು ಕಂದಾಯವನ್ನು ಮಾಫಿ ಮಾಡಿದರೆ ಅಥವಾ ಹೊಸ ತೆರಿಗಗಳನ್ನು ಹಾಕಿದರೆ ಅಥವಾ ಕಂದಾಯವನ್ನು ದೇವ ಸ್ಥಾನಗಳ ವೆಚ್ಚಕ್ಕೆ ಬಿಟ್ಟುಕೊಟ್ಟರೆ ಅದನ್ನು ಗ್ರಾಮಸಭೆಗೆ ತಿಳಿಸುತ್ತಿತ್ತು. ಗ್ರಾಮ ಸಭೆಯು ಅವನ್ನು ಲೆಖ್ಖದ ಪುಸ್ತಕಗಳಲ್ಲಿ ಬರೆದು ಅಜ್ಞೆಯನ್ನು ಕಾರ್ಯಗತಮಾಡು ತ್ತಿತ್ತು. ಗ್ರಾಮಸಭೆಯು ಮಾಡುತ್ತಿದ್ದ ಈ ಕರ್ತವ್ಯಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು :

(೧) ಕ್ರಿ.ಶ. ೧೪೬೯ ರಲ್ಲಿ ಉಜನಿ ಗ್ರಾಮ ಪ್ರಜೆಗಳು ಕೆರೆಯನ್ನು ಕಟ್ಟಲು ಗ್ರಾಮದ ಪೂಜಾರಿಗಳಿಗೆ ತೆರಿಗೆ ರಹಿತ ಭೂಮಿಯನ್ನು ದಾನಮಾಡಿದರು.[1]

(೨) ಕ್ರಿ. ಶ. ೧೫೬೧ ರ ಒಂದು ಶಾಸನವು, ಮಹಾಮಂಡಲೇಶ್ವರ ತಿರುಮಲ ರಾಯ ರಾಮರಾಜಯ ಮಹಾರಸಿ ದೇವರ ಸೇವೆಗೆ ಎರಡು ಗ್ರಾಮಗಳ ಸುಂಕದ ವರಮಾನದ ಒಂದು ಗೊತ್ತಾದ ಹಣವನ್ನು ದಾನಮಾಡಿದನು. ಈ ದಾನವನ್ನು ಸೆಟ್ಟಿ ಪಟ್ಟಣಸ್ವಾಮಿ ಮತ್ತು ಗ್ರಾಮದ ಸಮಸ್ತ ನಿವಾಸಿಗಳ ಒಪ್ಪಿಗೆಯಿಂದ ಮಾಡ ಲಾಯಿತು.[2]

(೩) ಎರಡು ಶಾಸನಗಳು ಅದನೂರಿನ ಸ್ಥಳೀಯ ಸಂಸ್ಥೆಗಳು (ನಾಟ್ಟಾರ್ ಮತ್ತು ಊರವರ್) ರಾಜನ ಅಧಿಕಾರಿಗಳ ಅಪ್ಪಣೆಯ ಮೇರೆಗೆ ದೇವಸ್ಥಾನಕ್ಕೆ ಸೇರಿದ ಹಲವು ಪಾಳ್ಯಗಳ ಎಲ್ಲಾ ತೆರಿಗೆಗಳನ್ನೂ ದಾನಮಾಡಿದುವು.[3]

ಸರ್ಕಾರವು ತೆರಿಗೆ ವಿನಾಯಿತಿಯ ಆಜ್ಞೆಗಳನ್ನು ಸ್ಥಳೀಯ ಸಂಸ್ಥೆಗಳಿಗೆ ತಿಳಿಸಿ ದುದಕ್ಕೆ ಹಲವು ನಿದರ್ಶನಗಳನ್ನು ಕೊಡಬಹುದು :

(೧) ಕ್ರಿ.ಶ. ೧೫೪೪ರ ಕಲ್ಯಾಣದುರ್ಗ ತಾಲ್ಲೂಕಿನ ನರಸಪುರಂಗ್ರಾಮದ ಒಂದು ಶಾಸನ ರಾಮರಾಜಯ್ಯನ ಆಜ್ಞೆಯ ಮೇರೆಗೆ ಕುಂದುರ್ಪೆಯ ಮಹಾನಾಯಕಾಚಾರ್ಯ ಕೊಂಡಮ ನಾಯಕ ನರಸಪುರದ ನಾಯಿಂದರಿಗೆ ಕೊಟ್ಟ ತೆರಿಗೆ ರಿಯಾಯಿತಿಗಳನ್ನು ದಾಖಲು ಮಾಡಿದೆ.[4]

(೨) ಕ್ರಿ.ಶ. ೧೫೪೭ ರಲ್ಲಿ ದಳವಾಯಿ ಯಲ್ಲಪ್ಪನಾಯಕ ಕಸವ ಪುರದ ಬೆಸ್ತರ ಮೇಲೆ ಹಾಕಿದ್ದ "ಬಿಟ್ಟಿ", "ಬಿರಾಡ" ಮತ್ತು ಇತರ ತೆರಿಗೆಗಳನ್ನು ರದ್ದು ಮಾಡಿದನು.[5]

---

1. *EC*, XII, Kg. 18.
2. *SII*, IX, (ii), No. 672.
3. 126 and 125 of 1934.
4. *SII*, IX, (ii), No. 614.
5. *Ibid.*, No. 624.

(ಇ) ಕ್ರಿ.ಶ. ೧೫೪೮ ರಲ್ಲಿ ಸದಾಶಿವರಾಯ ಹರಪನಹಳ್ಳಿ ತಾಲ್ಲೂಕಿನ ಮೈದೂರು ಗ್ರಾಮದ ನಾಯಿಂದರಿಗೆ "ಕಾಣಿಕೆ, ಕಡ್ಡಾಯ" ಮತ್ತು ಇತರ ತೆರಿಗೆಗಳಿಂದ ವಿನಾಯಿತಿ ನೀಡಿದನು.[1]

(ಈ) ಕ್ರಿ.ಶ. ೧೫೫೧ ರಲ್ಲಿ, ಹೆಳವಿನಾಯಕ, ಹರಪನಹಳ್ಳಿ ತಾಲ್ಲೂಕಿನ ಬಾಗುಳಿ ಮತ್ತು ಅದರ ಪಾಳ್ಯಗಳ ಕುರುಬರಿಗೆ ಕುರಿಗಳ ಮೇಲಿನ ಕಂದಾಯವನ್ನು ರದ್ದು ಮಾಡಿದನು.[2]

ಸ್ಥಳೀಯ ಸಂಸ್ಥೆಗಳು ಕೇಂದ್ರ ಸರ್ಕಾರದ ಅನುಮತಿ ಇಲ್ಲದೆ ಕಂದಾಯದಲ್ಲಿ ರಿಯಾಯಿತಿ ತೋರಿಸಿದರೆ, ಅದು ತನ್ನ ಸ್ವಂತ ಜವಾಬ್ದಾರಿಯ ಮೇಲೆ ಮಾಡಿ ನಷ್ಟ ವನ್ನು ತುಂಬಿಕೊಡಬೇಕಾಗಿತ್ತು. ಕೇಂದ್ರ ಸರ್ಕಾರವು ತನಗೆ ಒಪ್ಪಂದದ ಪ್ರಕಾರ ಬರಬೇಕಾಗಿದ್ದ ಹಣಕ್ಕಿಂತ ಕಡಿಮೆ ಹಣವನ್ನು ತೆಗೆದುಕೊಳ್ಳಲು ಒಪ್ಪುತ್ತಿರಲಿಲ್ಲ. ಸ್ಥಳೀಯ ಸಂಸ್ಥೆಗಳು ಗ್ರಾಮ ಸಮುದಾಯದ ಹಿತವನ್ನು ರಕ್ಷಿಸುತ್ತಿದ್ದುವು. ಅವು ಸರ್ಕಾರದ ಆದಾಯ ನೀತಿಯ ಮೇಲೆ ಸಾಕಷ್ಟು ಪ್ರಭಾವ ಬೀರುತ್ತಿದ್ದವು. ಸರ್ಕಾರವು ಹೊಸ ತೆರಿಗೆಗಳನ್ನು ಹೇರುವುದು ಅಥವಾ ಹಳೆಯದನ್ನು ಮನ್ನಾಮಾಡುವುದು ಸ್ಥಳೀಯ ಸಂಸ್ಥೆಗಳ ಒಪ್ಪಿಗೆಯಿಲ್ಲದೆ ಆಗುತ್ತಿರಲಿಲ್ಲ.[3]

ಈ ಸಭೆಗಳು ಹೊಸ ತೆರಿಗೆಗಳನ್ನು ವಿಧಿಸುವ ಮತ್ತು ಸಾರ್ವಭೌಮ ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದ ತೆರಿಗೆಗಳನ್ನು ನಿರ್ಧರಿಸುವ ಹಲವು ಹಕ್ಕುಗಳನ್ನು ಹೊಂದಿದ್ದುವು. ಈ ವಿಷಯವನ್ನು ನಿದರ್ಶನಗಳಿಂದ ಸ್ಪಷ್ಟೀಕರಿಸಬಹುದು: (ಅ) ಒಂದು ಶಾಸನವು ಶಿರುವಯಲ್ ಸಭೆಯು ತೆರಿಗೆಗೋಸ್ಕರ ಹಲವು ಭೂಮಿಯನ್ನು ಬಿಟ್ಟಿತು ಮತ್ತು ಇತರ ಜಮೀನುಗಳನ್ನು ಸೇರಿಸಿಕೊಂಡಿತು.[4] (ಆ) ಮತ್ತೊಂದು ಶಾಸನವು ಕುಳ್ಳೈ-ಕುಳತ್ತೂರ್ ಪ್ರಜೆಗಳು ಒಬ್ಬ ಅಕ್ಕಸಾಲಿಗನಿಗೆ ಹಲವು ತೆರಿಗೆಗಳನ್ನು ಹೇರುವ ಹಕ್ಕನ್ನು ಕೊಟ್ಟಿತು.[5]

ಈ ಗ್ರಾಮಸಭೆಗಳು ಧರ್ಮದರ್ಶಿಯಾಗಿ ಕೆಲಸಮಾಡುತ್ತಿದ್ದವು. ಅವು ಖಾಸಗಿ ಜನರಿಂದ ದಾನವಾಗಿ ಬಂದ ದತ್ತಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದವು. ಅವು ಠೇವಣಿಗಳನ್ನು ನಗದು ಅಥವಾ ಉತ್ಪನ್ನಗಳ ರೂಪದಲ್ಲಿ ಅಥವಾ ಸ್ಥಿರ ಆಸ್ತಿಯ ರೂಪದಲ್ಲಿ ಸ್ವೀಕರಿಸುತ್ತಿದ್ದವು. ತಮಿಳುನಾಡಿನಲ್ಲಿ ಚೋಳರ ಕಾಲದಲ್ಲಿ ಗ್ರಾಮಸಭೆಯ ಸಮಿತಿ ಕೆರೆಗಳು ಮತ್ತು ದೇವಸ್ಥಾನಗಳೇ ಮುಂತಾದ ಲೋಕೋಪಯೋಗಿ ಕೆಲಸ ಗಳನ್ನು ನೋಡಿಕೊಳ್ಳುತ್ತಿತ್ತು. ಕರ್ನಾಟಕದಲ್ಲಿಯೂ ಈ ರೀತಿಯ ಅಭ್ಯಾಸವಿತ್ತು.

1. *Ibid.*, No. 629.
2. *Ibid.*, No. 641.
3. Mahalingam: *SIP*, p. 183.
4. 178 of 1926.
5. 384 of 1914.

ಧರ್ಮದರ್ಶಿಗಳನ್ನು ಗೋಷ್ಠಿಗಳೆಂದು[1] ಕರೆಯುತ್ತಿದ್ದರೆಂದು ಕಾಣುತ್ತದೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು: (೧) ಅಕ್ಕಮಂಗಲ ಗ್ರಾಮದ ಒಂದು ಶಾಸನವು ಚಿನ್ನಪ್ಪ ಎಂಬ ವರ್ತಕನ ಮಗ ರಾಚಪ್ಪನೆಂಬುವನು, ಎರಡನೆಯ ಬುಕ್ಕನ ಕಾಲದಲ್ಲಿ ಕಳ್ಳೇದೇವರ ಸೇವೆಗೆ ಹತ್ತುಕೊಳಗಗಳಷ್ಟು ಬಿತ್ತಬಹುದಾದ ಭೂಮಿಯನ್ನು ದಾನ ಮಾಡಿ ಆ ಜಮೀನನ್ನು ಗ್ರಾಮದ ಮಹಾಜನಗಳ ಅಧಿಕಾರದಲ್ಲಿ ಬಿಟ್ಟರೆಂದು ತಿಳಿಸುತ್ತದೆ. ಈ ಶಾಸನದಲ್ಲಿ "**ಮಹಾಜನಂಗಳು** ನಡೆಸಿಕೊಂಡು ಬಹೂದು" ಎಂಬ ಪದಗಳಿವೆ.[2]

(೨) ಕುಂದಾಪುರ ತಾಲ್ಲೂಕಿನ ಬಸರೂರಿನ ಕ್ರಿ.ಶ. ೧೫೦೬ ರ ಒಂದು ಶಾಸನವು, ಆ ಸ್ಥಳದ ಬ್ರಾಹ್ಮಣರು ಸಾಲದ ಮೇಲೆ ಬಡ್ಡಿಯಾಗಿ ಬರಬೇಕಾಗಿದ್ದ ಏಳು ವರಹ ಗಳನ್ನು, ಬದಕೆರೆಯ ಹಲರು ದೇವರ ಸೇವೆಗೆ ದಾನಮಾಡಿದರೆಂದು ತಿಳಿಸುತ್ತದೆ. ಬಸವರಸ ಒಡೆಯ ಗ್ರಾಮಸ್ಥರಿಂದ ಚಂದಾ ಎತ್ತುತ್ತಿದ್ದನೆಂದೂ ತಿಳಿಸುತ್ತದೆ.[3]

(೩) ಕ್ರಿ.ಶ. ೧೫೫೬ ರಲ್ಲಿ ಸದಾಶಿವರಾಯ ನಾಗೂರಿನ ಬ್ರಾಹ್ಮಣರಿಗೆ ಮತ್ತು ಪ್ರಜೆಗಳಿಗೆ ಒಂದು ದಾನಮಾಡಿ ಅದನ್ನು ರಾಯಪ್ಪಯ್ಯನ ವಶದಲ್ಲಿಟ್ಟನು.[4] ಗ್ರಾಮ ಸಭೆಗಳು ಧರ್ಮಗಳ ಆಡಳಿತವನ್ನು ನಡೆಸುತ್ತಿದ್ದುವು ಮತ್ತು ಸಾರ್ವಜನಿಕ ದತ್ತಿಗಳ ಪೋಷಣೆಯನ್ನು ಮಾಡುತ್ತಿದ್ದುವು. ದತ್ತಿಯನ್ನು ಅನೇಕ ಸಲ ಧರ್ಮದರ್ಶಿಗೆ ವಹಿಸಿ ಗ್ರಾಮ ಸಭೆಯು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಿತು.

**ನ್ಯಾಯ ವಿತರಣೆಯ ಕರ್ತವ್ಯಗಳು:** ಗ್ರಾಮ ಸಭೆಗಳು ನ್ಯಾಯ ವಿತರಣೆಯ ಕೆಲಸವನ್ನು ಮಾಡುತ್ತಿದ್ದುವು. ಒಂದು ಶಾಸನವು ಪ್ರಕಾರ ಮತೀಯ ಘರ್ಷಣೆಯಿಂದ ರಕ್ತಪಾತವನ್ನು ತಪ್ಪಿಸಲು ಜನರು ಸೌಹಾರ್ದಯುತ ಒಪ್ಪಂದಕ್ಕೆ ಬಂದಿದ್ದನ್ನು ತಿಳಿಸುತ್ತದೆ. ಒಂದು ದೊಡ್ಡ ಸಭೆಯಲ್ಲಿ ಬಸರೂರಿನ ಸೆಟ್ಟಿಗಳು ಮತ್ತು ಕಂದೌರ ಗ್ರಾಮದ ನಿವಾಸಿಗಳನ್ನೊಳಗೊಂಡಿತ್ತು. ಕ್ರಿ. ಶ. ೧೪೫೩ ರ ಬಸರೂರಿನ ಒಂದು ಶಾಸನದ ಪ್ರಕಾರ, ಬಸರೂರಿನ ಎರಡು ಕೇರಿಗಳಾದ ಪಡುವಕೇರಿ ಮತ್ತು ಮೂಡ ಕೇರಿಯ ಸೆಟ್ಟಿಗಳು ಮತ್ತು ಕಂದೌರ ನಿವಾಸಿಗಳ ನಡುವೆ ಅವರ ಗಡಿಗಳು, ಹಕ್ಕುಗಳು ಮತ್ತು ಅಯಾ ಕೇರಿಯ ಸೆಟ್ಟಿಗಳು ಹಬ್ಬಗಳಲ್ಲಿ ದೇವಸ್ಥಾನಕ್ಕೆ ಕುರಿ ಮತ್ತು ಅಡಿಕೆ ಮರಗಳನ್ನು ತೆಗೆದುಕೊಂಡು ಹೋಗಬೇಕಾಗಿದ್ದ ಮಾರ್ಗದ ವಿಚಾರವಾಗಿ ಒಪ್ಪಂದಕ್ಕೆ ಬಂದರು.[5]

---

1. *EI*, VII, p. 201.
2. *MAR*, 1924, No. 51.
3. *SII*, IX (ii), No. 476.
4. *EC*, VI, Kd. 165.
5. *SII*, IX, (ii), Nc. 457.

ಎರಡು ಗ್ರಾಮಗಳ ನಿವಾಸಿಗಳ ನಡುವೆ ಭೂಮಿ ವಿನಿಮಯದ ನಿದರ್ಶನವಿದೆ. ಕ್ರಿ.ಶ. ೧೩೭೪ರಲ್ಲಿ ಹೊನ್ನಾವಳಿಯ ಸಮಸ್ತ ಬ್ರಾಹ್ಮಣರು, ಬೊಮ್ಮಗೌಡ ಮತ್ತು ಇತರ ಗೌಡರಿಗೆ ಮತ್ತು ಹಲುಕೂರಿನ ಗೌಡ ಪ್ರಜೆಗಳಿಗೆ ಭೂ ವಿನಿಮಯಕ್ಕೆ ಒಂದು ಶಾಸನವನ್ನು ಕೊಟ್ಟರು. ಈ ಶಾಸನದ ಪ್ರಕಾರ ಹೊನ್ನಾವಳಿಯ ಪಾಳ್ಯ ಭಗವತಿ ಘಟ್ಟದ ೪೭೦ "ಪೋಲ್" ಭೂಮಿಯನ್ನು ಹಲುಕೂರಿನ ಪಾಳ್ಯ ತುಲಿಕೆಯ ಹಳ್ಳಿಗೆ ಸೇರಿದ ಬೂದನಹಳ್ಳಿಯ ಅದೇ ವಿಸ್ತೀರ್ಣವುಳ್ಳ ಭೂಮಿಗೆ ವಿನಿಮಯಮಾಡಿದರು.[1]

ಗ್ರಾಮಸಭೆಗಳು ತಪ್ಪಿತಸ್ಥರ ಭೂಮಿಯನ್ನು ವಶಪಡಿಸಿಕ್ಕೊಳ್ಳುವ ಹಕ್ಕನ್ನು ಹೊಂದಿದ್ದವು. ಒಂದು ಶಾಸನದ ಪ್ರಕಾರ, ತಿರುಪೆರುಂದುರೈ ಗ್ರಾಮ ಸಭೆಯು ತಿರುಪುತ್ತೂರ್ ಆಂಡನ್ ಪಿಳ್ಳೈಯಿಂದ ಅವನು ಮಾಡಿದ ತಪ್ಪಿಗೆ, ಅವನಿಗೆ ಸೇರಿದ್ದ ಭೂಮಿಯಲ್ಲಿ ಸ್ವಲ್ಪವನ್ನು ವಶಪಡಿಸಿಕೊಂಡು, ತಿರುಪೆರುಂದುರೈಯಲ್ಲಿದ್ದ ಚೋಳ-ಪಾಂಡ್ಯ-ವಿಣ್ಣಗರ್ ಎಂಬೆರುಮಾನಾರ್ ದೇವಸ್ಥಾನಕ್ಕೆ ದಾನಮಾಡಿದ್ದು ತಿಳಿದು ಬರುತ್ತದೆ.[2]

ಹೀಗೆ ಗ್ರಾಮಸಭೆಗಳು ವಿಧಿಬದ್ಧವಾದ ನ್ಯಾಯಾಲಯದ ಸಮಸ್ತ ನ್ಯಾಯ ವಿತರಣೆಯ ಮತ್ತು ದಂಡಾಧಿಕಾರಿಯ ಅಧಿಕಾರಗಳನ್ನು ಹೊಂದಿದ್ದವು. ಅವು ಪಕ್ಷಗಳ ಸಂಪ್ರದಾಯಗಳ ಒಳ್ಳೆಯ ಜ್ಞಾನವನ್ನು ಹೊಂದಿ ಮತ್ತು ವಿವಾದಕ್ಕೆ ಆಸ್ಪದವಾದ ಘಟನೆಗಳ ಜ್ಞಾನವನ್ನು ಹೊಂದಿ ಸ್ಥಳೀಯ ಮೊಕದ್ದಮೆಗಳನ್ನು ತೀರ್ಮಾನಿಸುತ್ತಿದ್ದವು. ಡಾ. ಮಹಾಲಿಂಗಂ ತಿಳಿಸಿರುವಂತೆ, ವಿಧಿಬದ್ಧವಾದ ನ್ಯಾಯಾಲಯಗಳಲ್ಲದೆ ಗ್ರಾಮಸಭೆಗಳು ದೇವಸ್ಥಾನದ ಧರ್ಮದರ್ಶಿಗಳು, ಶ್ರೇಣಿಗಳು ಮತ್ತು ಕೋಮುಗಳ ಹಿರಿಯರು ನ್ಯಾಯವಿತರಣೆಯನ್ನು ಮಾಡುತ್ತಿದ್ದರು. ಆ ಕಾಲದಲ್ಲಿ ಸುಲಭವಾದ ಸಂಪರ್ಕಾನುಕೂಲಗಳಿಲ್ಲದಿದ್ದುದರಿಂದ, ಪ್ರಜೆಗಳಲ್ಲಿ ಎಲ್ಲರಿಗೂ ವಿಧಿಬದ್ಧವಾದ ನ್ಯಾಯಾಲಯಗಳಿಂದ ನ್ಯಾಯ ಪಡೆಯಲು ಆಗುತ್ತಿರಲಿಲ್ಲ. ಅಲ್ಲದೆ ಸ್ಥಳೀಯ ಜನರಿಗೆ ಸ್ಥಳೀಯ ಸಂಪ್ರದಾಯ ಮತ್ತು ರೂಢಿ ಚೆನ್ನಾಗಿ ತಿಳಿದಿದ್ದುದು ನ್ಯಾಯವಿತರಣೆಗೆ ಸಹಕಾರಿಯಾಗಿದ್ದಿತು.[3]

ಗ್ರಾಮ ಸಭೆಗಳು ತಮ್ಮ ಸರಹದ್ದಿನಲ್ಲಿದ್ದ ದೇವಸ್ಥಾನಗಳ ಮೇಲಿನ ಹತೋಟಿ ಹೊಂದಿದ್ದುವು ಮತ್ತು ವ್ಯಕ್ತಿಗಳಿಗೆ ಗೌರವ ನೀಡುವ ಅಧಿಕಾರವನ್ನು ಚಲಾಯಿಸುತ್ತಿದ್ದುವು. ಉದಾಹರಣೆಗೆ, ಕುಡಲೂರ್ ಮತ್ತು ಕುಲಮಂಗಳಂ ಗ್ರಾಮಗಳ "ಊರವರ್", ಪೊನ್ನನ್ ಎಂಬ ಗೋಪಾಲಕನು ದೇವಸ್ಥಾನಕ್ಕೆ ಹಬ್ಬದ ದಿನಗಳಲ್ಲಿ ಮಕ್ಕಳನ್ನು ಒದಗಿಸುತ್ತಿದ್ದುದರಿಂದ, ಇತರ ದೇವಸ್ಥಾನದ ಮರ್ಯಾದೆಗಳೊಡನೆ "ಕಲಂಗಾದ ಕಂದನ್"

---

1. *EC*, V, Ak. 63.
2. 509 of 1925.
3. Mahalingam: *SIP*, p. 211.

ಎಂಬ ಬಿರುದನ್ನು ಕೊಟ್ಟರು.[1] ಕ್ರಿ.ಶ. ೧೩೫೦ ರಲ್ಲಿ ಅನೇಕ ಗೌಡರು ಮತ್ತು ಇತರರು, ಕುರವ ಮತ್ತು ಆಲೂರು ರಾಮೇಶ್ವರ ದೇವರಿಗೆ ಶಾಶ್ವತವಾದ ದೀಪಾರಾಧನೆಗೆ ಮತ್ತು ನೈವೇದ್ಯಕ್ಕೆ, ಅಂಕರನ ಗೊಂಟಿ ಗ್ರಾಮವನ್ನು ದಾನಮಾಡಿ ಅದಕ್ಕೆ ರಾಮಪುರವೆಂಬ ಹೆಸರನ್ನಿಟ್ಟರು.[2] ಕ್ರಿ.ಶ. ೧೪೦೨ ರಲ್ಲಿ ಕಳಲಿಗೆ ಸಭೆಯು ಯೆರ್ಮಾಲದ ಜನಾರ್ಧನದೇವರ ಸೇವೆಗೆ, ಗಣಪಣ್ಣನೆಂಬುವನಿಗೆ ಸ್ವಲ್ಪ ಭೂಮಿಯನ್ನು ದಾನಮಾಡಿತು.[3] ಕ್ರಿ.ಶ. ೧೫೫೧ ರಲ್ಲಿ, ಧಾರಾಪುರದ ನಾಯಕರು, ಗೊಲ್ಲರು,ಬೇಡರು, ಕೆಲಸಗಾರರು ಮತ್ತು ಇತರರು ವರ್ಷಕ್ಕೊಮ್ಮೆ ಆ ಗ್ರಾಮದ ರಾಘವ ದೇವರ ಪಲ್ಲಕ್ಕಿ ಸೇವೆಗೆ ಒಂದು ಗೊತ್ತಾದ ಹಣವನ್ನು ಕೊಡಲು ಒಪ್ಪಿದರು.[4] ಮುಂದೆ ಅಗ್ರಹಾರಗಳ ವಿಷಯವನ್ನು ಚರ್ಚಿಸುವಾಗ ಗ್ರಾಮಸಭೆಗಳು ಮಾಡುತ್ತಿದ್ದ ಈ ಕರ್ತವ್ಯಕ್ಕೆ ಇನ್ನೂ ಹೆಚ್ಚಿನ ನಿದರ್ಶನಗಳನ್ನು ಕೊಡಲಾಗಿದೆ.

ಗ್ರಾಮಸಭೆಗಳ ಚರ್ಚೆಯನ್ನು ಅಂತ್ಯಗೊಳಿಸುವ ಮೊದಲು, ಈ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನು ತಿಳಿಸುವುದು ಆವಶ್ಯಕ. ವೆಂಕೋಬರಾಯರು ಚೋಳರ ಕಾಲದಲ್ಲಿ ಪ್ರಬಲವಾದ ಸ್ಥಳೀಯ ಸಂಸ್ಥೆಗಳಾದ ಈ ಗ್ರಾಮಸಭೆಗಳು ಇದ್ದುವು ; ಚೋಳ ಸಾಮ್ರಾಜ್ಯದ ಅವನತಿಯಾದ ಮೇಲೆ ಇವು ಕ್ರಮೇಣ ನಶಿಸಿಹೋದುವೆಂದು ಅಭಿಪ್ರಾಯಹೊಂದಿದ್ದಾರೆ. ಇವರ ಪ್ರಕಾರ ಕ್ರಿ.ಶ. ೧೩೮೨ ರ ಒಂದು ಶಾಸನದಲ್ಲಿ ದೊರಕುವ ವ್ಯವಹಾರ, ಈ ಸಭೆಗಳು ಅಳಿದುಹೋಗುವುದಕ್ಕೆ ಮೊದಲು ಮಾಡಿದ ಕೊನೆಯ ವ್ಯವಹಾರಗಳು.[5] ಪುನಃ ಕ್ರಿ.ಶ. ೧೩೮೬ ರ ಒಂದು ಶಾಸನವನ್ನು ಟೀಕೆ ಮಾಡುವಾಗ ಈ ಶಾಸನದಲ್ಲಿ ದಾಖಲಾಗಿರುವ ವ್ಯವಹಾರ ಗ್ರಾಮಸಭೆ ಹೊಂದಿದ್ದ ಅಧಿಕಾರದ ಮತ್ತೊಂದು ಕಡೆಯ ನಿದರ್ಶನವೆನ್ನುತ್ತಾರೆ.[6] ಈ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದಕ್ಕೆ ಅವರು ಆಧಾರಗಳನ್ನು ಕೊಟ್ಟಿಲ್ಲ. ಈ ಅಧ್ಯಾಯದಲ್ಲಿ ಶಾಸನಗಳ ನಿದರ್ಶನದಿಂದ ಮಾಡಿರುವ ಗ್ರಾಮಸಭೆಗಳ ಪರಿಶೀಲನೆ ಕ್ರಿ.ಶ. ೧೬ ನೇ ಶತಮಾನದ ಕೊನೆಯವರೆಗೆ, ವಿಜಯನಗರ ಸಾಮ್ರಾಜ್ಯದಲ್ಲಿ ಗ್ರಾಮಸಭೆಗಳು ಅಸ್ತಿತ್ವದಲ್ಲಿದ್ದುವೆಂಬುದು ಸ್ಪಷ್ಟವಾಗುತ್ತದೆ. ಕೆ. ವಿ. ಸುಬ್ರಹ್ಮಣ್ಯ ಅಯ್ಯರ್‌ರವರ ಪ್ರಕಾರ ವಿಜಯನಗರ ಸಾಮ್ರಾಟರ ಕಾಲದಲ್ಲಿ ಮತ್ತು ಮಲ್ಲಿಕಾಫರನ ದಂಡಯಾತ್ರೆಯ ಕರಾಳ ದಿನಗಳಲ್ಲಿ ಮತ್ತು ಬಹಮನಿ ಸುಲ್ತಾನರ ಆಳ್ವಿಕೆಯಲ್ಲಿ, ದಕ್ಷಿಣ ಭಾರತದಲ್ಲಿ ಮೊದಲಿನಿಂದ ಇದ್ದ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳು ಬುಡ ಸಮೇತ

1. *IPS*, No. 692.
2. *EC*, VII, Hl. 6.
3. *SII*, IX (ii), No. 426.
4. *Ibid.*, No. 644.
5. *ARSIE*, 1923-24, para 40.
6. *Ibid.*, 1925-26, para 35.

ನಶಿಸಿಹೋದುವೆಂದು ತಿಳಿಸುತ್ತಾರೆ.[1] ಈ ರೀತಿಯಲ್ಲಿ ಸುಬ್ರಹ್ಮಣ್ಯ ಅಯ್ಯರ್‌ರವರು ವಿಜಯನಗರ ಗ್ರಾಮ ಸಭೆಗಳ ವಿಚಾರದಲ್ಲಿ ವೆಂಕೋಬರಾಯರ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ: ನೀಲಕಂಠಶಾಸ್ತ್ರಿಯವರು ಚೋಳರು ಸ್ಥಾಪಿಸಿದ್ದ ಸ್ವಯಮಾಡಳಿತ ಪದ್ಧತಿಯ ಗ್ರಾಮ ಆಳ್ವಿಕೆ, ವಿಜಯನಗರ ಕಾಲದಲ್ಲಿ ಕಡೆಗಣಿಸಲ್ಪಟ್ಟು ಹೆಚ್ಚುಕಡಿಮೆ ಅಳಿದುಹೋಯಿತೆಂದು ಹೇಳುತ್ತಾರೆ. ಇದಕ್ಕೆ ಸೈನಿಕ ಆವಶ್ಯಕತೆ ಮತ್ತು ಅಧೀನ ನಾಯಕರ ಒತ್ತಡಗಳ ಕಾರಣಗಳು ಎಂದು ಹೇಳುತ್ತಾರೆ.[2]

ಡಾ. ಮಹಾಲಿಂಗಂರವರು ವಿಜಯನಗರ ಸಾಮ್ರಾಜ್ಯದ ಕೊನೆಯಲ್ಲಿ, ಪ್ರಾದೇಶಿಕ ಸ್ಥಳೀಯ ಸಂಸ್ಥೆಗಳ ಅಸ್ತಿತ್ವಕ್ಕೆ ದಾಖಲೆ ಇದ್ದರೂ ಆ ವೇಳೆಗೆ ಅವು ಶಕ್ತಿ ಹೀನವಾಗಿದ್ದುವೆಂದು ಅಭಿಪ್ರಾಯಪಟ್ಟಿದ್ದಾರೆ.[3] ವೆಂಕೋಬರಾಯರ ಅಭಿಪ್ರಾಯ ವನ್ನು ಅಂದರೆ, ಕ್ರಿ.ಶ. ೧೩೪೬ ರಲ್ಲಿ ಗ್ರಾಮಸಭೆಗಳ ಕಡೆಯ ದಾಖಲೆಗಳಿವೆ ಎಂಬುವು ದನ್ನು ಡಾ. ಮಹಾಲಿಂಗಂರವರು ಒಪ್ಪುವುದಿಲ್ಲ. ಇವು ಅಸ್ತಿತ್ವದಲ್ಲಿದ್ದುವೆಂದೂ ಆದರೆ ವಿಜಯನಗರ ಸಾಮ್ರಾಜ್ಯದ ಕೇಂದ್ರೀಕೃತ ಆಡಳಿತ ಗ್ರಾಮ ಸಂಸ್ಥೆಗಳಿಗೆ ಹಿತಕರ ವಾಗಿರಲಿಲ್ಲವೆಂದೂ ತಿಳಿಸುತ್ತಾರೆ. ಸಾಮ್ರಾಟರು ಈ ಗ್ರಾಮ ಗಣರಾಜ್ಯಗಳನ್ನು ನಾಶ ಮಾಡಲು ಉದ್ದೇಶ ಹೊಂದಿರಲಿಲ್ಲ. ಆದರೆ ರಾಜರು ಸಾಮ್ರಾಜ್ಯದ ದೂರದ ಭಾಗ ಗಳನ್ನು ಹತೋಟಿ ಹೊಂದಿದ್ದ ರೀತಿ ಗ್ರಾಮಸಂಸ್ಥೆಗಳು ಚುರುಕಾಗಿ ಮತ್ತು ವಿವೇಕಯುತವಾಗಿ ಅಧಿಕಾರ ಚಲಾಯಿಸುವುದಕ್ಕೆ ಉತ್ತೇಜನಕರವಾಗಿರಲಿಲ್ಲವೆಂದೂ ಮತ್ತು ಸರ್ಕಾರದಿಂದ "ಆಯಗಾರರ" ನೇಮಕ ಗ್ರಾಮ ಗಣಗಳ ಸ್ವತಂತ್ರ ಜೀವನ ವನ್ನು ದುರ್ಬಲಗೊಳಿಸಿತೆಂದೂ ಡಾ. ಮಹಾಲಿಂಗಂ ಅಭಿಪ್ರಾಯ ಪಟ್ಟಿದ್ದಾರೆ.[4] ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕೊನೆಯಲ್ಲಿ ಸ್ಥಳೀಯ ಸಂಸ್ಥೆಗಳು ಕ್ಷೀಣಿಸಿದು ವೆಂಬ ಡಾ. ಮಹಾಲಿಂಗಂರವರ ಅಭಿಪ್ರಾಯವು ಒಪ್ಪತಕ್ಕದ್ದಾಗಿದೆ.

ಸಾಲತೂರ್‌ರವರು, ವಿಜಯನಗರ ಸಾಮ್ರಾಟರು ಸ್ಥಳೀಯ ಸಂಸ್ಥೆಗಳ ಅಧಿಕಾರ ವನ್ನು ಕೇಂದ್ರಕ್ಕೆ ವರ್ಗಾಯಿಸಲು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ, ಅವರ ಪ್ರಕಾರ ವಿಜಯನಗರ ಸಾಮ್ರಾಟರು ಪೂರ್ವದ ಮರ್ಯಾದೆಯನ್ನು ಕಾಪಾಡಲು ಅವರು ಹಿಂದಿನ ಪದ್ಧತಿ ಗಳಿಗೆ ಉತ್ತೇಜನ ಕೊಟ್ಟರೆಂದು ಹೇಳಿದ್ದಾರೆ. ಸರ್ಕಾರದಲ್ಲಿ ಮೊದಲು ಇದ್ದ ಅಧಿಕಾರಿ ಗಳನ್ನು ಮುಂದುವರಿಸಿದರು ಮತ್ತು ಸ್ಥಳೀಯ ಸಂಸ್ಥೆಗಳ ಮೇಲೆ ಕೇಂದ್ರ ಸರ್ಕಾರದ ಅಧಿಕಾರಿಗಳನ್ನು ನೇಮಿಸಿದರೆಂದು ಸಾಲತೂರ್ ತಿಳಿಸಿದ್ದಾರೆ.[5] ವಿಜಯನಗರ ಕಾಲದಲ್ಲಿ

---

1. Subrahmanya Ayyar, K. V.: *Historical Sketches of Ancient Dekhan* (Madras, 1951), p. 313.
2. Nilakanta Sastri K. A.: *A History of South India* (Madras, 1958), p 11
3. Mahalingam: *SIP*, p. 370.
4. Mahalingam: *Adm. and Soc. Life*, p. 217.
5. Saletore: *Soc. and Po Life*, I, p. 342.

ಅಸ್ತಿತ್ವದಲ್ಲಿದ್ದ ಗ್ರಾಮಾಡಳಿತ ಪದ್ಧತಿ ಗ್ರಾಮಗಳನ್ನು ಹೆಚ್ಚು ಕಡಿಮೆ ಸಣ್ಣ ಗಣರಾಜ್ಯಗಳನ್ನಾಗಿ ಮಾಡಿದುವೆಂದು ಸೋಮಶೇಖರ ಶರ್ಮ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.[1]

ಚೋಳರ ಕಾಲದಷ್ಟು ಗ್ರಾಮ ಸಭೆಗಳಿಗೆ ಸಂಬಂಧಪಟ್ಟ ಶಾಸನಗಳು ಮತ್ತು ಆ ಸಭೆಗಳ ಚಟುವಟಿಕೆಗಳು ವಿಜಯನಗರ ಕಾಲದಲ್ಲಿಲ್ಲದಿದ್ದರೂ ಗ್ರಾಮ ಸಭೆಗಳು ಅಸ್ತಿತ್ವದಲ್ಲಿದ್ದವೆಂಬ ವಿಷಯ ವಿವಾದಾಸ್ಪದವಲ್ಲ. ಈಗ ದೊರಕಿರುವ ಸಾಕ್ಷ್ಯದ ಆಧಾರದ ಮೇಲೆ ವಿಜಯನಗರ ಸಾಮ್ರಾಟರು ಸ್ಥಳೀಯ ಸಂಸ್ಥೆಗಳು ಮುಂದುವರಿಯಲು ಮತ್ತು ಅವು ತಮ್ಮ ಕರ್ತವ್ಯ ನಿರ್ವಹಿಸಲು ಅವಕಾಶ ಕೊಟ್ಟರೆಂಬುದನ್ನು ನಿರಾಕರಿಸು ವಂತಿಲ್ಲ. ಅವರಿಗೆ "ಪೂರ್ವದ ಮರ್ಯಾದೆ"ಯಲ್ಲಿ ಸಹಾನುಭೂತಿಯಿಲ್ಲದಿರಲಿಲ್ಲ. ಆದರೆ ಸಂದರ್ಭಗಳು ಸ್ಥಳೀಯ ಸಂಸ್ಥೆಗಳನ್ನು ಅವುಗಳ ಅದೃಷ್ಟಕ್ಕೆ ಬಿಡಬೇಕಾಯಿತು. ಪ್ರಾಂತ್ಯಾಡಳಿತದಲ್ಲಿ "ನಾಯಂಕರ" ಪದ್ಧತಿಯನ್ನು ತಂದುದರಿಂದ ನಾಯಕರು ತಮ್ಮ ಕಂದಾಯದ ವಸೂಲಿಯಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದರು. ಆದರೆ ಗ್ರಾಮ ಸಭೆಗಳ ಬಗ್ಗೆ ನಮ್ಮ ಈ ಅಧ್ಯಯನದಿಂದ ಅವು ವಿಜಯನಗರ ಸಾಮ್ರಾಜ್ಯದಲ್ಲಿ ಅದೃಶ್ಯ ವಾಗಲಿಲ್ಲವೆಂಬುದು ಮನದಟ್ಟಾಗುತ್ತದೆ. ಅಗ್ರಹಾರಗಳ ಅಸ್ತಿತ್ವದಲ್ಲೂ ಸ್ಥಳೀಯ ಸಂಸ್ಥೆಗಳು ಮುಂದುವರಿದುವೆಂಬ ಅಭಿಪ್ರಾಯಕ್ಕೆ ಇವು ಸಾಕ್ಷ್ಯವಾಗಿವೆ.

ಅಗ್ರಹಾರಗಳು ಮತ್ತು ಅವುಗಳ ಸ್ಥಾಪನೆ : ಬ್ರಾಹ್ಮಣ ವಿದ್ವಾಂಸರ ಜೀವನೋ ಪಾಯಕ್ಕೆ ಕೊಟ್ಟ ಗ್ರಾಮ, ಅಗ್ರಹಾರವೆಂದು ಕರೆಯಲ್ಪಡುತ್ತಿತ್ತು. ಭಾರತದ ಇತರ ಭಾಗಗಳಂತೆಯೆ ಮಧ್ಯಯುಗದ ಕರ್ನಾಟಕ, ತಮಿಳುನಾಡು ಮತ್ತು ಆಂಧ್ರದೇಶದಲ್ಲಿ ಅದು ಅಸ್ತಿತ್ವದಲ್ಲಿದ್ದಿತು. ಬ್ರಾಹ್ಮಣ ಪಾಲುಗಾರರನ್ನು "ಮಹಾಜನರೆಂದು" ಕರೆಯು ತ್ತಿದ್ದರು. "ಮಹಾಜನ ಸಭೆ" ಅಗ್ರಹಾರದ ವಿಷಯಗಳ ಮೇಲ್ವಿಚಾರಣೆ ಹೊಂದಿದ್ದಿತು. ವಿಜಯನಗರ ಕಾಲದಲ್ಲಿ, ಅವುಗಳ ಅಸ್ತಿತ್ವಕ್ಕೆ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಹೆಚ್ಚಿನ ಸಾಕ್ಷ್ಯವಿದೆ. ಅಗ್ರಹಾರ ಸಭೆಗಳು ಅಲ್ಲಿನ ಮೇಲ್ವಿಚಾರಣೆ ಮತ್ತು ಇತರ ಪೌರಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುವು. ಅವು ದೇವಸ್ಥಾನಗಳಿಗೆ ವತ್ತಿಗಳನ್ನು ಕೊಡುತ್ತಿದ್ದವು ಮತ್ತು ಸಾರ್ವಜನಿಕ ಹಿತಕಾರ್ಯಗಳನ್ನು ಕೈಗೊಳ್ಳು ತ್ತಿದ್ದುವು. ಅಗ್ರಹಾರಗಳು ಸಣ್ಣ ವಿಶ್ವವಿದ್ಯಾನಿಲಯ ಕೇಂದ್ರಗಳಾಗಿದ್ದುವು. ಮಹಾ ಜನರು ವಿದ್ವಾಂಸರಾಗಿದ್ದರು. ಅಗ್ರಹಾರಗಳಿಗೆ ಸೈನಿಕರ ಮತ್ತು ತೆರಿಗೆ ವಸೂಲು ಮಾಡುವವರ ಅತಿಕ್ರಮಣವಿರಲಿಲ್ಲ. ರಾಜರು, ರಾಣಿಯರು, ಶ್ರೀಮಂತರು ಮತ್ತು ಬಡವರು ಅಗ್ರಹಾರಗಳಿಗೆ ಆಸರೆ ಕೊಡುತ್ತಿದ್ದರು. ಈ ಸಂಸ್ಥೆಗಳು ಮಾಡುತ್ತಿದ್ದ ಸೇವೆ ನಿಜವಾಗಿಯೂ ಅದ್ಭುತವೂ ಮತ್ತು ಪ್ರಖ್ಯಾತವೂ ಆಗಿತ್ತೆಂಬ ಅಭಿಪ್ರಾಯ

1. Somasekhara Sarma : *op.cit.*, 224.

ವನ್ನು ಕರ್ಮರ್‌ಕರ್‌ರವರು ವ್ಯಕ್ತಪಡಿಸಿದ್ದಾರೆ.[1] ವಿಜಯನಗರ ಕಾಲದಲ್ಲಿ ಅಗ್ರಹಾರ ಸ್ವಯಮಾಧಿಕಾರವುಳ್ಳ ಸಂಸ್ಥೆಯಾಗಿದ್ದಿತು.

ವಿಜಯನಗರ ಕಾಲದಲ್ಲಿ ಅಗ್ರಹಾರಗಳು ವಿವಿಧ ರೀತಿಯಲ್ಲಿ ಸ್ಥಾಪಿತವಾಗುತ್ತಿದ್ದವು. ರಾಜ ಅಥವಾ ಅವನ ಒಪ್ಪಿಗೆಯ ಮೇಲೆ ಅವನ ಅಧಿಕಾರಿಗಳು ಅಗ್ರಹಾರವನ್ನು ಸ್ಥಾಪಿಸುತ್ತಿದ್ದರು. ದಾನ ಪಡೆದವನು ಒಬ್ಬನೆ ಆಗಿರಬಹುದಿತ್ತು ಅಥವಾ ದಾನ ಪಡೆದವನು ಗ್ರಾಮದಲ್ಲಿ ಇತರರಿಗೆ ಪಾಲುಗಳನ್ನು ಹಂಚುತ್ತಿದ್ದನು ಅಥವಾ ದಾನಿಯೆ ಇತರ ಪಾಲುದಾರರಿಗೆ ಭೂಮಿಯನ್ನು ಹಂಚುತ್ತಿದ್ದನು. ಹೀಗೆ ಅಗ್ರಹಾರಗಳು ಸ್ಥಾಪಿತ ವಾಗುತ್ತಿದ್ದುದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು :

(೧) ಕ್ರಿ.ಶ. ೧೩೪೫ ರಲ್ಲಿ ವೀರಮ್ಮಾಜಿ ಹಿರಿಯ ಪೆಮ್ಮಯನಾಯಕ, ರಂಗನಾಥ ಭಟ್ಟನ ಮಗ ಭವಭೂತಿಗೆ ಎಲಹಂಕನಾಡಿನ ಜಾಲ ಎಂಬ ಗ್ರಾಮವನ್ನು, ಸಮಸ್ತ ತೆರಿಗೆಗಳನ್ನು ಮಾಫಿ ಮಾಡಿ, ಅಗ್ರಹಾರವನ್ನಾಗಿ ದಾನ ಮಾಡಿದನು.[2] ಈ ನಿದರ್ಶನದಲ್ಲಿ ದಾನ ಪಡೆದವನು ಒಬ್ಬನೆ ವ್ಯಕ್ತಿ.

(೨) ಯೆಡನಾಡಿನಲ್ಲಿ ಅಗ್ರಹಾರಗಳಿದ್ದುವು. ಸೊರಬ ತಾಲ್ಲೂಕಿನ ಹೆಜ್ಜೆಯ ಕ್ರಿ. ಶ. ೧೩೪೬ ರ ಒಂದು ಶಾಸನ, ಮೊದಲನೆಯ ಹರಿಹರನ ಕಿರಿಯ ಸಹೋದರ ರಾಜಕುಮಾರ ಮಾರಪ್ಪ ಹೆಡ್ಡಸೆ (ಸೊರಬ ತಾಲ್ಲೂಕಿನ ಹೆಜ್ಜೆ) ಗ್ರಾಮವನ್ನು ದಾನ ಮಾಡಿದನೆಂದು ತಿಳಿಸುತ್ತದೆ. ಈ ಶಾಸನ ಆ ಅಗ್ರಹಾರದ ಸ್ಥಾಪನೆಯ ಸಂದರ್ಭ ಗಳನ್ನು ವಿವರಿಸುತ್ತದೆ. ರಾಜನು ಒಂದು ಕೆರೆ, ಪವಿತ್ರ ಸ್ಥಳವಾದ ಹೆಡ್ಡಸೆ ಮತ್ತು ವರದಾ ನದಿಯನ್ನು ಕಂಡು, ಅವುಗಳ ಹತ್ತಿರ ಒಂದು ಅಗ್ರಹಾರವನ್ನು ಸ್ಥಾಪಿಸಲು ನಿಶ್ಚಯಿಸಿದನು. ದಾನವನ್ನು ಸ್ವೀಕರಿಸಿದವರು ವೇದಗಳನ್ನು ಚೆನ್ನಾಗಿ ಬಲ್ಲವರಾಗಿದ್ದು ಆಂಧ್ರ ದೇಶದಿಂದ ಬಂದಿದ್ದರು. ಅಗ್ರಹಾರಕ್ಕೆ ಸಂಗಮಪುರವೆಂಬ ಹೆಸರನ್ನು ಕೊಡ ಲಾಯಿತು. ದಾನ ಸ್ವೀಕರಿಸಿದವರ ಹೆಸರು ಮತ್ತು ವೃತ್ತಿಗಳ ಹಂಚಿಕೆಯನ್ನು ಕೊಡ ಲಾಗಿದೆ. ಪ್ರಾಂತ್ಯದ ಪ್ರಮುಖ ನಾಯಕರು ಮತ್ತು ಎಲಸೆ ಮತ್ತು ಕುಪ್ಪಗದ್ದೆ ಅಗ್ರಹಾರಗಳ ಪ್ರಮುಖರ ಸಮ್ಮುಖದಲ್ಲಿ ಸನ್ನದನ್ನು ಸಿದ್ಧಪಡಿಸಲಾಯಿತು. ಅವರ ಹೆಸರುಗಳನ್ನೂ ಕೊಡಲಾಗಿದೆ. ಎಡೆನಾಡಿನ ಎರಡು ದೊಡ್ಡ ಅಗ್ರಹಾರಗಳಾದ ಎಲಸೆ ಮತ್ತು ಕುಪ್ಪಗದ್ದೆಯ ಮಹಾಜನರು, ಮುಖ್ಯಸ್ಥರು ಮತ್ತು ಗ್ರಾಮಗಳ ಮುಖ್ಯಸ್ಥ ರಾಗಿದ್ದ ಅನೇಕ ಮಹಾಪ್ರಭುಗಳು ಎಲ್ಲರೂ ಸೇರಿ ಹೆಡ್ಡಸೆ ಗ್ರಾಮವನ್ನು ದಾನ ಮಾಡಿದರು.[3] ಈ ನಿದರ್ಶನದಲ್ಲಿ ದಾನಿಯೆ ಭೂಮಿಯನ್ನು ಅನೇಕ ಪಾಲುದಾರರಿಗೆ ಹಂಚಿದನು. ಸಿರಸಿ ತಾಲ್ಲೂಕು ಬನವಾಸಿ ಗ್ರಾಮದ ಕ್ರಿ.ಶ. ೧೩೬೮ ರ ಒಂದು ಶಾಸನ

1. *QJMS*, XXXIII, No. 1, Karmarkar : *Society and Education in Mediaeval Karnataka*, p. 51.
2. *EC*, IX, Dv., No. 3.
3. *MAR*, 1929, No. 90.

ಈ ಎರಡು ಅಗ್ರಹಾರಗಳ ಮಹಾಜನರ ಸಂಯುಕ್ತ ಚಟುವಟಿಕೆಗಳನ್ನು ತಿಳಿಸುತ್ತದೆ. ಮಹಾಮಂಡಲೇಶ್ವರ ವೀರಬುಕ್ಕರಾಯ ಹಸ್ತಿನಾವತಿ ಪುರದಲ್ಲಿ (ಆನೆಗೊಂದಿ) ಆಳು ತ್ತಿದ್ದಾಗ ಮತ್ತು ಮಾಧವಾಂಕ ಬನವಾಸಿ ೧೨ ಸಾವಿರವನ್ನು ಆಳುತ್ತಿದ್ದಾಗ ಅವನ ಸೇವಕ ಅಹೋಬಲನಾಥ ಗುತ್ತಿಯ ಹದಿನೆಂಟು ಕಂಪಣಗಳ ಗೌಡಪ್ರಜೆಗಳಿಗೆ ಕರೆ ನೀಡಿ, ಬನವಾಸಿಯಲ್ಲಿ ಒಂದು ಸಭೆಯನ್ನು ಏರ್ಪಡಿಸಿದನು. ಈ ಸಭೆಯಲ್ಲಿ ಎಲಸೆ ಮತ್ತು ಕುಪ್ಪ ಗದ್ದೆಯ ಅಗ್ರಹಾರಗಳ ಮಹಾಜನರು, ಸೊರಬದ ತಮ್ಮಗೌಡ, ತವನಿಧಿ, ಕೆಸಲೂರು, ಕೊಂಡವತಿ ನಾಡಿನ ಹೆಚ್ಚಿತ, ಬಲೆಯ ಹಳ್ಳಿ, ನಾಗರಖಾಂಡದಲ್ಲಿನ ಕುಪ್ಪತೂರು ಮತ್ತು ಹುರುಳಿ ಗ್ರಾಮಗಳ ಪ್ರಜಾಮುಖಂಡರು ಹಾಜರಿದ್ದರು. ಈ ಸಭೆಯನ್ನು ಅಲ್ಲಿಯ ದೇವಸ್ಥಾನದ ದೇವರ ಸೇವೆಗೆ, ಅಲಂಕಾರಕ್ಕೆ ಮತ್ತು ಉತ್ಸವಗಳಿಗಾಗಿ ಕರೆಯ ಲಾಯಿತು. ಗುತ್ತಿಯ ೧೮ ಕಂಪಣಗಳ ಗೌಡಪ್ರಜೆಗಳ ಸಹಾಯವನ್ನು ಕೋರ ಲಾಯಿತು. ಸಭೆ ಮಾಡಿದ ದಾನವನ್ನು ಸ್ಪಷ್ಟವಾಗಿ ತಿಳಿಸದಿದ್ದರೂ ಸ್ವಲ್ಪ ಭೂಮಿ ಯನ್ನು ದಾನ ಮಾಡಿದ ಹಾಗೆ ಕಾಣುತ್ತದೆ.[1]

(೩) ಕ್ರಿ. ಶ. ೧೩೫೫ ರಲ್ಲಿ ರಾಯದುರ್ಗ ರಾಜ್ಯದ ಹಗಹರಿಯ ಸ್ಥಳದಲ್ಲಿ ಹಗಹರಿಯದ ದಕ್ಷಿಣಕ್ಕೆ ದೇವಬೆಟ್ಟದ ಸಮೀಪದ ಕನ್ನೇನಹಳ್ಳಿ ಗ್ರಾಮಕ್ಕೆ, ಪ್ರತಾಪ ದೇವರಾಜೇಂದ್ರಪುರವೆಂಬ ಹೊಸ ಹೆಸರನ್ನು ಕೊಟ್ಟು, ವೇದ, ವೇದಾಂತ ಮತ್ತು ಎಲ್ಲ ವಿಜ್ಞಾನಗಳ ಸಾರವನ್ನು ತಿಳಿದ, ವ್ಯಾಕರಣ, ತರ್ಕ ಮತ್ತು ತತ್ವಶಾಸ್ತ್ರ ಮುಂತಾದುವು ಗಳಲ್ಲಿ ಸಮರ್ಥನೆನಿಸಿಕೊಂಡಿದ್ದ ಲಕ್ಷ್ಮೀಧರಾರ್ಯನಿಗೆ ದಾನ ಮಾಡಿದನು. ಲಕ್ಷ್ಮೀ ಧರಾರ್ಯ ಆ ಗ್ರಾಮವನ್ನು ನೂರರವತ್ತು ವೃತ್ತಿಗಳನ್ನಾಗಿ ವಿಂಗಡಿಸಿ, ೩೦ ವೃತ್ತಿಗಳನ್ನು ತನ್ನ ಸ್ವಂತಕ್ಕೆ ಇಟ್ಟುಕೊಂಡು, ಉಳಿದುವನ್ನು ಬ್ರಾಹ್ಮಣ ವಿದ್ವಾಂಸರಿಗೆ ಕೊಟ್ಟನು.[2] ಇದು ದಾನ ಸ್ವೀಕರಿಸಿದವನು ಒಬ್ಬನೇ ವ್ಯಕ್ತಿಯಾಗಿ ಅವನು ಇತರರಿಗೆ ಪಾಲುಗಳನ್ನು ಹಂಚಿದುದಕ್ಕೆ ನಿದರ್ಶನವಾಗಿದೆ.

(೪) ಕ್ರಿ.ಶ. ೧೩೬೪ ರಲ್ಲಿ ವೀರ ಬುಕ್ಕಣ್ಣ ಒಡೆಯ ರಾಜನ ಆಜ್ಞೆಯ ಪ್ರಕಾರ ಮಂಗಳೂರಿನ ಮಾದರಸ ಪುದುಗ್ರಾಮವನ್ನು ಕೆಲವು ಬ್ರಾಹ್ಮಣರಿಗೆ ಎಲ್ಲಾ ತೆರಿಗೆ ಗಳನ್ನೂ ಮಾಫಿ ಮಾಡಿ ದಾನಮಾಡಿದನು.[3] ಇದು ದಾನಿಯೇ ಪಾಲುಗಳನ್ನು ಹಂಚಿದುದಕ್ಕೆ ನಿದರ್ಶನ.

(೫) ಮತ್ತೊಂದು ನಿದರ್ಶನದಲ್ಲಿ ದಾನವನ್ನು ಸ್ವೀಕರಿಸಿದವರು ಕಾಶ್ಮೀರ ಬ್ರಾಹ್ಮಣರು. ಶಿಕಾರಿಪುರದ ಒಂದು ಶಾಸನ ಕ್ರಿ.ಶ. ೧೩೬೮ ರಲ್ಲಿ ಬುಕ್ಕನ ಮಂತ್ರಿ ಮಾಧವ ಒಂದು ಅಗ್ರಹಾರವನ್ನು ಸ್ಥಾಪಿಸಿದ ವಿವರಗಳನ್ನು ಕೊಡುತ್ತದೆ. ಮಾಧವ ಬುಕ್ಕನಿಗೆ ಕೊಟ್ಟ ಅರ್ಜಿಯಲ್ಲಿ ತನ್ನ ಸ್ವಂತ ಆಸ್ತಿಯಲ್ಲೇ ಅಗ್ರಹಾರ ಸ್ಥಾಪಿಸುವುದಕ್ಕೆ

1. *Ibid.*, No. 113.
2. *MAR*, 1921, pp. 29-30, para 62.
3. *SII*, IX (ii), No. 408.

ರಾಜನ ಅಪ್ಪಣೆಯನ್ನು ಕೇಳಿದನು. ರಾಜನ ಅಪ್ಪಣೆಯನ್ನು ಪಡೆದು ನಾಗರಖಾಂಡದಲ್ಲಿ ಮುಳ್ಳುಂಡಿ, ಪಲಸಪಳ್ಳಿ ಮತ್ತು ತೇವಟ್ಟ ಎಂಬ ಗ್ರಾಮಗಳನ್ನು ಆಗಿನ ವರಗಳಲ್ಲಿ ಕೊಂಡು ಅದಕ್ಕೆ ವಿದ್ಯೇಶ್ವರಪುರವೆಂಬ ಹೆಸರನ್ನು ಕೊಟ್ಟನು. ಮಾಧವ ಕಾಶ್ಮೀರೀ ಬ್ರಾಹ್ಮಣ ವಿದ್ವಾಂಸರ ಒಂದು ಸಭೆಯನ್ನು ಕರೆದು, ಅಗ್ರಹಾರದಲ್ಲಿ ೮೦ ಪಾಲುಗಳನ್ನು ಮಾಡಿ ದಾನಮಾಡಿದನು.[1]

(೬) ಕೃಷ್ಣರಾಜಪೇಟೆ ತಾಲ್ಲೂಕಿನ ಬಾಚಹಳ್ಳಿಯ ಕ್ರಿ.ಶ. ೧೩೭೭ ರ ಒಂದು ಶಾಸನದಿಂದ, ಎರಡನೆ ಹರಿಹರನು ಹೊಸಣ ರಾಜ್ಯದ ಕಬಹು ಜಿಲ್ಲೆಗೆ ಸೇರಿದ ಬಾಚಿಹಳ್ಳಿಯನ್ನು ಅದರ ಹದಿಮೂರು ಪಾಳೆಯಗಳೊಡನೆ ಮತ್ತು ದಂಡೆವುರೆ ಗಟ್ಟ ಗ್ರಾಮವನ್ನು ಅದರ ಮೂರು ಪಾಳೆಯಗಳೊಡನೆ, ಇಮ್ಮಡಿ ಬುಕ್ಕರಾಜಪುರವೆಂಬ ಹೆಸರಿನ ಅಗ್ರಹಾರವನ್ನು ಮಾಡಿ, ಅದನ್ನು ೬೦ ವೃತ್ತಿಗಳಾಗಿ ವಿಂಗಡಿಸಿ ಅನೇಕ ಬ್ರಾಹ್ಮಣರಿಗೆ ದಾನ ಮಾಡಿದನೆಂದು ತಿಳಿದುಬರುತ್ತದೆ.[2]

(೭) ಎರಡನೆ ದೇವರಾಯನ ಸತ್ಯಮಂಗಲಂ ಶಾಸನಗಳ ಪ್ರಕಾರ ಕ್ರಿ. ಶ. ೧೪೨೪ ರಲ್ಲಿ ಚಿತೆಯತ್‌ಪುರ ಅಗ್ರಹಾರವನ್ನು ದೇವರಾಯಪುರವೆಂದು ಹೆಸರಿಸಿ ಎಂಟು ಜನ ಬ್ರಾಹ್ಮಣರಿಗೆ ದಾನ ಮಾಡಿದನೆಂದು ತಿಳಿಸುತ್ತದೆ.[3]

(೮) ಕ್ರಿ. ಶ. ೧೪೭೪ ರಲ್ಲಿ, ವಿರೂಪಾಕ್ಷರಾಜನು ಪ್ರಸನ್ನ ಚನ್ನಕೇಶವಪುರವನ್ನು ಕೃಷ್ಣಭಟ್ಟನಿಗೆ ದಾನಮಾಡಿದನು. ಕೃಷ್ಣಭಟ್ಟ ಆ ಅಗ್ರಹಾರದ ೪೦ ಪಾಲುಗಳನ್ನು "ಮಹಾಜನ"ರಿಗೆ ಹಂಚಿದನು.[4] ಈ ನಿದರ್ಶನದಲ್ಲಿ ದಾನವನ್ನು ಒಬ್ಬ ವ್ಯಕ್ತಿಗೆ ಮಾಡಿದ್ದು ಅವನು ಇತರರಿಗೆ ಭಾಗಗಳನ್ನು ಹಂಚಿದನು.

(೯) ಕ್ರಿ.ಶ. ೧೪೯೫ ರಲ್ಲಿ ರಾಜರ ಖಜಾಂಚಿ, ದೇವಪ್ಪನಾಯಕನ ಮಗ ಬಲನಾಥ ನರಸಂಬು ಅಗ್ರಹಾರವನ್ನು ಕಾಯ ನಂಜಿನಾಥ ದೀಕ್ಷಿತನ ಮಗ ನರಸಿಂಹ ದೀಕ್ಷಿತನಿಗೆ ಕೊಟ್ಟನು.[5] ಈ ನಿದರ್ಶನದಲ್ಲಿ ದಾನ ಸ್ವೀಕರಿಸಿದವನು ಒಬ್ಬ ವ್ಯಕ್ತಿ.

(೧೦) ಹೊಸಪೇಟೆ ತಾಲ್ಲೂಕಿನ ಹಂಪೆದೇವನಹಳ್ಳಿಯ ಕ್ರಿ. ಶ. ೧೫೧೧ ರ ಒಂದು ಶಾಸನ ಹಂಪೆ ದೇವನಹಳ್ಳಿ ಅಥವಾ ಕೃಷ್ಣರಾಯಪುರವನ್ನು ಹಲವು ಬ್ರಾಹ್ಮಣರಿಗೆ ದಾನ ಮಾಡಿದುದನ್ನು ತಿಳಿಸುತ್ತದೆ.[6] ಈ ನಿದರ್ಶನದಲ್ಲಿ ಕೃಷ್ಣದೇವರಾಯನೆ ಅಗ್ರಹಾರವನ್ನು ಸ್ಥಾಪಿಸಿದ ನಂತರ ವೃತ್ತಿಗಳನ್ನು ಹಂಚಿದನು.

1. *Ibid.*, No. 282.
2. *MAR*, 1914-15, pp. 57.58, para 88; *EC*, IV, No. 46.
3. *EI*, III, No 5.
4. *EC*, III, Ml. No. 121.
5. *EC*, X, Gd, No. 78.
6. *SII*, IX, (ii), No. 484.

(೧೧) ಕ್ರಿ.ಶ. ೧೫೧೨ ರ ನಾಗಮಂಗಲ ತಾಲ್ಲೂಕು ದೊಡ್ಡ ಜಾತಕದ ಒಂದು ಶಾಸನದ ಪ್ರಕಾರ, ಕೃಷ್ಣದೇವರಾಯ ಹಿರಿಜತ್ತಿಗ ಗ್ರಾಮವನ್ನು ಅದರ ನಾಲ್ಕು ಪಾಳೆಯಗಳೊಡನೆ ಚಿನ್ನದೇವಿಪುರವೆಂಬ ಹೆಸರನ್ನಿಟ್ಟು, ಶ್ರೀನಿವಾಸಾಧ್ವರಿಗೆ ದಾನ ಮಾಡಿದನು. ಶ್ರೀನಿವಾಸಾಧ್ವರಿ ಹತ್ತು ವೃತ್ತಿಗಳನ್ನು ಸ್ವಂತಕ್ಕೆ ಇಟ್ಟುಕೊಂಡು, ಉಳಿದ ಇಪ್ಪತ್ತು ವೃತ್ತಿಗಳನ್ನು ಅರ್ಹರಾದ ಬ್ರಾಹ್ಮಣರಿಗೆ ಕೊಟ್ಟನು.[1]

(೧೨) ಕ್ರಿ.ಶ. ೧೫೧೩ ರಲ್ಲಿ ತಿಪ್ಪಸೋಮ ಮಂತ್ರಿಯ ಅರ್ಜಿಯ ಮೇರೆಗೆ ಕೃಷ್ಣದೇವರಾಯ ವಿಶ್ವೇಶ್ವರನಿಗೆ ಭಂಡರಪಳ್ಳಿ ಗ್ರಾಮವನ್ನು ದಾನ ಮಾಡಿದನು.[2]

(೧೩) ಕ್ರಿ.ಶ. ೧೫೧೬ ರಲ್ಲಿ ಕೃಷ್ಣದೇವರಾಯ, ನಾಗಮಂಗಲ ರಾಜ್ಯದಲ್ಲಿದ್ದ ಚಿಕ್ಕಬ್ಬೆಹಳ್ಳಿಯನ್ನು ಅದರ ಮೂರು ಪಾಳೆಯಗಳೊಡನೆ ಹಾಗೂ ಚನ್ನಪಟ್ಟಣ ರಾಜ್ಯದ ಹಲವುಮರ ಹೊಸಹಳ್ಳಿ ಮತ್ತು ಬಿಲ್ಲಗೊಂಡನಪಳ್ಳಿ ರಾಜ್ಯದ ವೆಂಗೇನಹಳ್ಳಿ–ಈ ಮೂರು ಗ್ರಾಮಗಳನ್ನು ವ್ಯಾಸತೀರ್ಥರೆಂಬ ಸದ್ಗುಣಿ ತಪಸ್ವಿಗೆ ಕೊಟ್ಟನು.[3]

(೧೪) ಕ್ರಿ.ಶ. ೧೫೨೯ ರಲ್ಲಿ ಸಾಳುವ ಗೋವಿಂದರಾಜ ಮಂತ್ರಿ, ಉಮ್ಮತ್ತೂರು ಸೀಮೆಯ ಮಾಧವಪುರವನ್ನು ಒಂದು ಅಗ್ರಹಾರವಾಗಿ ಸಂಜಯರಸುವಿಗೆ ದಾನ ಮಾಡಿದನು.[4]

(೧೫) ಕ್ರಿ.ಶ. ೧೫೩೦ ರಲ್ಲಿ ಅಚ್ಯುತರಾಯ ವೆಂಕಟೇಶ್ವರವರಯಜ್ವನಿಗೆ, ಹೊಸಕೋಟೆ ಸೀಮೆಯ ಸಂಬಪುರಕ್ಕೆ ಅಚ್ಯುತ ಮಹಾರಾಯಾಂಬುಧಿ ಎಂಬ ಹೆಸರನ್ನು ಕೊಟ್ಟು ಅಗ್ರಹಾರವಾಗಿ ದಾನ ಮಾಡಿದನು. ವೆಂಕಟೇಶ್ವರವರಯಜ್ವ ಅಗ್ರಹಾರದ ಮಾಲೀಕತ್ವವನ್ನು ಒಪ್ಪಿ, ಅದನ್ನು ೨೪ ಭಾಗಗಳನ್ನಾಗಿ ವಿಂಗಡಿಸಿ " ಮಹಾಜನ "ರಿಗೆ ಕೊಟ್ಟನು.[5]

(೧೬) ಕ್ರಿ.ಶ. ೧೫೮೪ ರಲ್ಲಿ ಶ್ರೀರಂಗರಾಜ ಉಪ್ಪರಹಳ್ಳಿ ಗ್ರಾಮವನ್ನು ಅಗ್ರಹಾರವಾಗಿ ತಿರುಮಲೆ ಪೆನುಗೊಂಡೆಗೆ ದಾನಮಾಡಿದನು.[6]

(೧೭) ಕ್ರಿ. ಶ. ೧೫೮೯ ರಲ್ಲಿ ತಿರುಮಲರಾಯನ್ನ ಮಕ್ಕಳು ರಾಮರಾಜಯ್ಯ ಮತ್ತು ತಿರುಮಲರಾಜಯ್ಯ ಮದ್ದೂರಿಗೆ ಸೇರಿದ ಕಬ್ಬರೆ ಗ್ರಾಮವನ್ನು ಅಗ್ರಹಾರ ವನ್ನಾಗಿ ಇಬ್ಬರು ಬ್ರಾಹ್ಮಣರಿಗೆ ದಾನಮಾಡಿದನು.[7]

---

1. *MAR*, 1914-15, para 92; *EC*, V, Bl. No 79.
2. *EC*, VII, Sn. No. 1.
3. *MAR*, 1919, para 90.
4. *EC*, III, Tn. No. 73.
5. *EC*, IX, Db. No. 30.
6. *EC*, X, Gd. No. 25.
7. *EC*, III, Md. No. 25.

(೧೮) ಕ್ರಿ.ಶ. ೧೫೯೩ ರಲ್ಲಿ ವೆಂಕಟದೇವ ಮಹಾರಾಯ ಪೆನುಗೊಂಡ ತಾತಾಚಾರ್ಯರಿಗೆ ಮರಗನೆಕುಂಟೆ ಗ್ರಾಮವನ್ನು ಅಗ್ರಹಾರವಾಗಿ ದಾನಮಾಡಿದನು.[1]

ರಾಜನ ಪುಣ್ಯಕ್ಕೋಸ್ಕರ ಅಗ್ರಹಾರಗಳ ಸ್ಥಾಪನೆಯಾದುದನ್ನು ಕಾಣುತ್ತೇವೆ. ಅದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ. ಶ. ೧೩೯೭ ರಲ್ಲಿ ಮಹಾಮಂಡಲೇಶ್ವರ ಮಲ್ಲಪ್ಪೊಡೆಯರ ಮಗ ನಾರಾಯಣದೇವ ಒಡೆಯರ್ ಹರಿಹರ ಮಹಾರಾಯರ ದೀರ್ಘಾಯಸ್ಸಿಗೆ, ಆರೋಗ್ಯ ಮತ್ತು ಐಶ್ವರ್ಯಕ್ಕೆ ಚನ್ನಪಟ್ಟಣಕ್ಕೆ ಸೇರಿದ ಕೊಳತೂರ್ ಗ್ರಾಮದಲ್ಲಿ ಪ್ರತಾಪ ಹರಿಹರಪುರವೆಂಬ ಅಗ್ರಹಾರವನ್ನು ಸ್ಥಾಪಿಸಿ ಅದನ್ನು ೩೬ ಪಾಲುಗಳನ್ನಾಗಿ ಭಾಗ ಮಾಡಿ ಬ್ರಾಹ್ಮಣರಿಗೆ ಕೊಟ್ಟನು.[2]

(೨) ಕ್ರಿ.ಶ. ೧೪೯೫ ರಲ್ಲಿ ಮಹಾಮಂಡಲೇಶ್ವರ ಗೊದೆರಾಯ ತನ್ನ ನಾಯಕತನಕ್ಕೆ ಸೇರಿದ ಕುಕ್ಕಲನಾಡಿನ ಗಂಗದಿಹಳ್ಳಿಯನ್ನು ದೇವಸ್ಥಾನದ ಪೂಜಾರಿ ತಿಮ್ಮರಸನ ಪುತ್ರರು ಮತ್ತು ಇತರರಿಗೆ ಕೊಟ್ಟನು. ಆ ಹಳ್ಳಿಗೆ ಗೊದೆರಾಯನು ತಿಮ್ಮಣ್ಣರಾಜಪುರವೆಂಬ ಹೆಸರನ್ನು ಕೊಟ್ಟು ಇಮ್ಮಡಿ ನರಸಿಂಗರಾಯಮಹಾರಾಯರ ಪುಣ್ಯಕ್ಕೋಸ್ಕರ ಸ್ಥಾಪಿಸಿದನು.[3]

(೩) ಕ್ರಿ.ಶ. ೧೫೨೦ ರಲ್ಲಿ ಮಾಗಡಿ ತಾಲ್ಲೂಕಿನ ಒಂದು ಶಾಸನದ ಪ್ರಕಾರ ಸಾಳುವ ತಿಮ್ಮರಸಯ ನಾಗಿಸೆಟ್ಟಿಹಳ್ಳಿಯನ್ನು "ಆರಾಧ್ಯ" ತಾತಯ್ಯನ ಪತ್ನಿ ನಲ್ಲದಯಮ್ಮನಿಗೆ ಅಗ್ರಹಾರವಾಗಿ, ಕೃಷ್ಣದೇವರಾಯರ ಪುಣ್ಯಕ್ಕೋಸ್ಕರ ಕೊಟ್ಟನು.[4]

(೪) ಟಿ. ನರಸೀಪುರ ತಾಲ್ಲೂಕಿನ ಒಂದು ಶಾಸನ ಕ್ರಿ. ಶ. ೧೫೨೧ ರಲ್ಲಿ ಕೃಷ್ಣರಾಯನ ಪುಣ್ಯಕ್ಕೋಸ್ಕರ ಕಲೌರು ಗ್ರಾಮವನ್ನು ಕೃಷ್ಣಾಪುರವೆಂದು ಹೆಸರಿಸಿ, ೩೨ ಪಾಲುಗಳನ್ನಾಗಿ ವಿಂಗಡಿಸಿ ಸಾಳುವ ಗೋವಿಂದರಾಜಮಂತ್ರಿ, ಬ್ರಾಹ್ಮಣರಿಗೆ ಕೊಟ್ಟನು.[5]

(೫) ಕ್ರಿ.ಶ. ೧೬೦೩ರಲ್ಲಿ ಮೈಸೂರಿನ ಚಾಮರಾಜ ಒಡೆಯರ್ ಅವರು ವೆಂಕಟಪತಿದೇವ ಮಹಾರಾಯರಿಗೆ ತಾನು ಒಂದು ಅಗ್ರಹಾರವನ್ನು ಸ್ಥಾಪಿಸುವ ಆಸೆ ಹೊಂದಿರುವುದಾಗಿ ಮನವಿಯನ್ನು ಕಳುಹಿಸಲು, ವೆಂಕಟಪತಿರಾಯ ತನ್ನ ಒಪ್ಪಿಗೆಯನ್ನು ಸೂಚಿಸಿದನು. ಚಾಮರಾಜ ಒಡೆಯರು ತಮ್ಮ ಕುಲಕೋಟಿ ಜನ ಶಾಶ್ವತವಾಗಿ ವೈಕುಂಠವಾಸಿಗಳಾಗಲು ನವಿಲೂರ್ ಮತ್ತು ಆಲದೂರ್ ಎಂಬ ಎರಡು ಗ್ರಾಮಗಳನ್ನು ಒಂದುಗೂಡಿಸಿ ಅದಕ್ಕೆ ಚಾಮರಾಜಸಮುದ್ರವೆಂಬ ಹೆಸರನ್ನು ಕೊಟ್ಟು ೪೧ ಪಾಲುಗಳನ್ನಾಗಿ

1. *EC*, X, Br. No. 38
2. *EC*, III, Tn. 64.
3. *EC*, IX, Bn. 123.
4. *EC*, IX, Ma. 11.
5. *EC*, III, Tn. 42.

ವಿಂಗಡಿಸಿ, ಒಂದು ಪಾಲನ್ನು ದೇವರಿಗೂ ಮತ್ತು ಉಳಿದ ೪೦ ಪಾಲುಗಳನ್ನು ೩೩ ಬ್ರಾಹ್ಮಣರಿಗೂ ಕೊಟ್ಟರು.[1]

ಗ್ರಾಮ ಮತ್ತು ನಾಡುಸಭೆಗಳು ಅಗ್ರಹಾರಗಳನ್ನು ಸ್ಥಾಪಿಸಿದುವು. ಕ್ರಿ.ಶ. ೧೩೭೯ ರ ಜೋಡಿಲಕ್ಕೊಂಡನ ಹಳ್ಳಿಯ ಒಂದು ಶಾಸನ, ಹುಲ್ಲೂರಿನ ಗೌಡ ಪ್ರಜೆಗಳು ಲಕ್ಕಗೊಂಡನಹಳ್ಳಿ ಅಥವಾ ರಾಮಚಂದ್ರ ಸಮುದ್ರವೆಂಬ ಅಗ್ರಹಾರದಲ್ಲಿ ಸ್ಥಾಪನೆಯಲ್ಲಿ ಭಾಗಿಗಳಾಗಿದ್ದರೆಂದು ತಿಳಿಸುತ್ತದೆ.[2] ಕ್ರಿ.ಶ. ೧೪೦೮ ರಲ್ಲಿ ಆರಗ ೧೮ ಕಂಪಣಗಳ ಗೌಡಪ್ರಜೆಗಳು ಮತ್ತು ಮೂರು ಪಟ್ಟಣದವರು ತಮ್ಮಲ್ಲಿಯೆ ಒಪ್ಪಿ ನಾಗಸಮುದ್ರವೆಂಬ ಅಗ್ರಹಾರವನ್ನು ಸ್ಥಾಪಿಸಿದರು.[3]

ನಾಡು ಸಭೆಯು ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದ ನಿದರ್ಶನಗಳನ್ನು, ನಾಡು ಸಭೆಯ ಅಧ್ಯಯನದಲ್ಲಿ ಮುಂದೆತಿಳಿಯಪಡಿಸಿದೆ.

ನಾಟ್ಯಗಾರ್ತಿಯರು ಅಗ್ರಹಾರವನ್ನು ಸ್ಥಾಪಿಸಿದ ಒಂದು ನಿದರ್ಶನವಿದೆ. ಕ್ರಿ.ಶ. ೧೫೯೯ರ ಕುಣಿಗಲ್ಲಿನ ಒಂದು ಶಾಸನ, ಎಲಹಂಕ ನಾಡುಪ್ರಭು ಇಮ್ಮಡಿ ಹಿರಿಕೆಂಪಯ್ಯ ಗೌಡನ " ಪಟ್ಟದ ನಾಟಕ ಶಾಲೆ "ಯ ಶ್ರೀರಂಗಮ್ಮ, ಶೃಂಗಾರಸಾಗರ ವೆಂಬ ಅಗ್ರಹಾರವನ್ನು ಸ್ಥಾಪಿಸಿದಳೆಂದು ತಿಳಿಸುತ್ತದೆ.[4] " ಪಟ್ಟದ ನಾಟಕಶಾಲೆ " ಎನ್ನುವುದು ನೃತ್ಯ ಸಭಾಂಗಣಕ್ಕೆ ಅನ್ವಯಿಸುತ್ತದೆ.

ಹಲವು ವೇಳೆ, ಮಹಾಜನರು ಕಾಡುಗಳನ್ನು ಉಪಯೋಗಿಸಿ ಗ್ರಾಮಗಳನ್ನು ಸ್ಥಾಪಿಸುತ್ತಿದ್ದರು. ಬಳ್ಳಾರಿ ಜಿಲ್ಲೆಯ ರಾಜಬವನಹಳ್ಳಿ ತಾಲ್ಲೂಕಿನ ಒಂದು ಶಾಸನ, ಕ್ರಿ.ಶ. ೧೪೬೯ ರಲ್ಲಿ ಹರಿಯಣ್ಣನ ಮುಖಂಡತ್ವದಲ್ಲಿ ಮಹಾಜನರು ಹರಿಯ ಸಮುದ್ರ ಗ್ರಾಮವನ್ನು ಕಾಡುಪ್ರದೇಶದಿಂದ ಪ್ರಯೋಜನಕ್ಕೆ ತಂದು ಮತ್ತು ಅಲ್ಲಿ ಒಂದು ಕೆರೆಯನ್ನು ಕಟ್ಟಿದ್ದಕ್ಕೆ, ಆ ಮಹಾಜನರಿಗೆ ಆ ಗ್ರಾಮವನ್ನು ದಾನಮಾಡಿ ಹಲವು ತೆರಿಗೆಗಳನ್ನು ಮಾಫಿ ಮಾಡಲಾಯಿತೆಂದು ತಿಳಿಸುತ್ತದೆ.[5] ಮತ್ತೊಂದು ನಿದರ್ಶನದಲ್ಲಿ, ಒಡೆದುಹೋಗಿದ್ದ ಒಂದು ಕೆರೆಯನ್ನು ಊರ್ಜಿತಗೊಳಿಸಲು ಹಣ ವೆಚ್ಚಮಾಡಲು ಬ್ರಾಹ್ಮಣರು ಒಪ್ಪಿದ್ದಕ್ಕೆ ಒಂದು ಅಗ್ರಹಾರವನ್ನು ಕೊಡಲಾಯಿತು. ಕ್ರಿ.ಶ. ೧೪೬೩ ರಲ್ಲಿ ಅರಲಿಕಟ್ಟೆಯು ಒಡೆಯಿತು. ಹಲವು ಬ್ರಾಹ್ಮಣರು ಆ ಕಟ್ಟೆಯನ್ನು ಪುನಃ ನಿರ್ಮಿಸಲು ಹಣ ವೆಚ್ಚಮಾಡಲು ಮತ್ತು ಅಲ್ಲಿ ಮುಳುವಾಯಿ ನಾಚಿಪುರವೆಂಬ ಗ್ರಾಮವನ್ನು ಕಟ್ಟಲು ಒಪ್ಪಿದರು. ಅವರಿಗೆ ಕಾಡನ್ನು ಕೃಷಿಯೋಗ್ಯವನ್ನಾಗಿ ಮಾಡಲು ಭೂಮಿಯನ್ನು ಕೊಡಲಾಯಿತು. ಅದನ್ನು ನಾಲ್ಕು ಭಾಗವನ್ನಾಗಿ

---

1· *EC*, III, Tn. 62.
2. *MAR*., 1919, para 86.
3. *EC*, VIII, Tl. 222.
4. *EC*, XII, Kg. 29.
5. *SII*, IX, (ii) No. 440.

ವಿಂಗಡಿಸಿ, ಒಂದು ಭಾಗವನ್ನು ದೇವಸ್ಥಾನಕ್ಕೆ ಕೊಟ್ಟು, ಉಳಿದ ೩ ಭಾಗಗಳನ್ನು ಒಂದು ಅಗ್ರಹಾರವನ್ನಾಗಿ ರಚಿಸಲಾಯಿತು.[1] ಈ ನಿದರ್ಶನದಲ್ಲಿ ಮುಳುವಾಯಿ ನಾಚಿ ದೇವಿ ದೇವಸ್ಥಾನದ ಪೂಜಾರಿಗಳು ತಮ್ಮಲ್ಲಿ ಒಪ್ಪಿ ದಾನವನ್ನು ಮಾಡಿದರು. ದಾನ ಮಾಡಿದ ಭೂಮಿ ದೇವಸ್ಥಾನದ ಪೂಜಾರಿಗಳಿಗೆ ಸೇರಿದ್ದಿರಬೇಕೆಂದು ಕಾಣುತ್ತದೆ. ಮುಳುವಾಯಿ ಚಾವಡಿಯಲ್ಲಿ ೧೧ ಗ್ರಾಮಗಳಿದ್ದುವು.

ವಿಜಯನಗರ ಕಾಲದಲ್ಲಿ ಹೊಸ ಅಗ್ರಹಾರಗಳನ್ನು ಸ್ಥಾಪಿಸಿದ್ದುದಲ್ಲದೆ ನಾಶ ವಾಗಿದ್ದ ಅನೇಕ ಅಗ್ರಹಾರಗಳನ್ನು ಊರ್ಜಿತಗೊಳಿಸಲಾಯಿತು. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು:

(೧) ಕ್ರಿ.ಶ. ೧೩೪೬ ರ ಒಂದು ಶಾಸನವು, ಮೊದಲನೆಯ ಹರಿಹರನ ಕಿರಿಯ ಸಹೋದರ ಮಾರಪ ಹೆಡ್ದಸೆ ಅಗ್ರಹಾರವನ್ನು[2] ಸ್ಥಾಪಿಸಿದ ಸಂದರ್ಭಗಳನ್ನು ಹಿಂದೆ ತಿಳಿಸಲಾಗಿದೆ.

(೨) ಕ್ರಿ.ಶ. ೧೫೭೭ ರಲ್ಲಿ ಕೆಳದಿಯ ರಾಮರಾಜನಾಯಕ ಎಡೆನಾಡಿನ ಹೆಡ್ತಸೆ ಅಗ್ರಹಾರ ನಾಶವಾಗಿದ್ದುದನ್ನು ಮತ್ತು ಹಕ್ಕಿಲ್ಲದ ಅನೇಕರು ಅದನ್ನನುಭವಿಸುತ್ತಿರು ವುದನ್ನು ಕಂಡು, ಅದನ್ನು ವಶಪಡಿಸಿಕೊಂಡು ೧೦ ಜನ ಬ್ರಾಹ್ಮಣರಿಗೆ ಪ್ರತಿದಿನವೂ ಆಹಾರ ಕೊಡಲು ಆ ಭೂಮಿಯನ್ನು ಒಂದು ಸತ್ರಕ್ಕೆ ದಾನಮಾಡಿದನು.[3] ಈ ಅಗ್ರಹಾರದ ಚರಿತ್ರೆ, ವಿಜಯನಗರ ಮತ್ತು ಕೆಳದಿ ರಾಜರು "ಪೂರ್ವಮರ್ಯಾದೆ" ಯನ್ನು ಹೇಗೆ ಅವಲಂಬಿಸಿದ್ದರೆಂದು ತಿಳಿಯುತ್ತದೆ.

(೩) ಮತ್ತೊಂದು ನಿದರ್ಶನದಲ್ಲಿ ಒಂದು ಅಗ್ರಹಾರ ಊರ್ಜಿತವಾದುದು ಅಲ್ಲದೆ ಕೆಳದಿ ಸದಾಶಿವನಾಯಕ (ಕ್ರಿ.ಶ. ೧೫೧೩–೧೫೪೬) ಮತ್ತು ರಾಮರಾಜನಾಯಕರ (ಕ್ರಿ. ಶ. ೧೫೭೨–೧೫೮೩) ಕಾಲದಲ್ಲಿಯ ಅದರ ಚರಿತ್ರೆ ತಿಳಿದು ಬರುತ್ತದೆ. ಸದಾಶಿವನಾಯಕನ ಮಂತ್ರಿ ಮಾದಪ್ಪಯ್ಯ, ಕುಶವತಿ ನದಿಯ ದಡದ ಮೇಲೆ ಆರಗದ ವಿರೂಪ ಸಮುದ್ರ ಕೆರೆಯ ಪೂರ್ವಕ್ಕೆ ಸದಾಶಿವನಾಯಕನ ಹೆಸರಿನಲ್ಲಿ ಸದಾಶಿವಪುರ ವೆಂಬ ಅಗ್ರಹಾರವನ್ನು ಸ್ಥಾಪಿಸಿದನು. ಕ್ರಿ.ಶ. ೧೫೭೭ ರಲ್ಲಿ ರಾಮರಾಜನಾಯಕನ ಕಾಲದಲ್ಲಿ ಆ ಅಗ್ರಹಾರದ ಸ್ವತ್ತು ಬ್ರಾಹ್ಮಣರಿಗೆ ಮತ್ತು ಅವರ ಸಂಸಾರಗಳಿಗೆ ಸಾಲದು ಎಂದು ಕಂಡುಬಂದಿತು. ಇದೂ ಅಲ್ಲದೆ ಮಾದಪ್ಪನ ಮಕ್ಕಳು ವೃತ್ತಿಗಳನ್ನು ವಿಲೆ ಮಾಡಿದ್ದರು. ಆ ಗ್ರಾಮಕ್ಕೆ ಮೇಲ್ವಿಚಾರಕರಿಲ್ಲದೆ ನಾಶವಾಗುತ್ತಿತ್ತು. ಈ ನಡುವೆ ರಾಜನು ಸ್ಥಾಪಿಸಿದ್ದ ಅಗ್ರಹಾರಗಳಲ್ಲಿ ಯಗಿಮಳಲಿ ಗ್ರಾಮ ಅರಮನೆಗೆ ಸೇರಿ ಹೋಗಿತ್ತು. ಆದ್ದರಿಂದ ರಾಮರಾಜನಾಯಕನು ಆ ಗ್ರಾಮದ ವಿಷಯದಲ್ಲಿ ವಿಚಾರಣೆ ನಡೆಸಿ, ಅಕ್ರಮಗಳನ್ನು ಹೋಗಲಾಡಿಸಿ, ನಾಶವಾಗಿದ್ದ ಅಗ್ರಹಾರದ ಮತ್ತು ಅರಮನೆಗೆ

1. *EC*, X, Mb. 7.
2. *MAR*, 1929, No. 90.
3. *EC*, VIII, Sb. 475.

ಸೇರಿದ್ದ ಭೂಮಿಯನ್ನು ದಾನಮಾಡಿ ಅದಕ್ಕೆ ಯಜಮಾನ ಸದಾಶಿವಪುರವೆಂಬ ಹೆಸರನ್ನು ಕೊಟ್ಟು ಕೃಷ್ಣಪ್ಪಯ್ಯನನ್ನು ಮೇಲ್ವಿಚಾರಣೆಗೆ ನೇಮಿಸಿದನು.[1]

(೪) ಶೃಂಗಾಪುರ ಮತ್ತು ವಿದ್ಯಾರಣ್ಯಪುರವೆಂಬ ಇತರ ಎರಡು ಅಗ್ರಹಾರಗಳ ಇತಿಹಾಸ ದೊರಕುತ್ತದೆ. ಹರಿಹರ ಆ ಎರಡು ಅಗ್ರಹಾರಗಳನ್ನು ಸ್ಥಾಪಿಸಿ ೨೫೦ ಭಾಗಗಳನ್ನಾಗಿ ಮಾಡಿ ಅವುಗಳನ್ನು ಮಠದ ಮಲ್ಲಿಕಾರ್ಜುನ ವಿದ್ಯಾಶಂಕರಸ್ವಾಮಿ ಮತ್ತು ಶಾರದಾಂಬ ದೇವರುಗಳ ಪೂಜೆಗೆ ವಿದ್ಯಾರಣ್ಯಭಾರತೀ ಸ್ವಾಮಿಗಳಿಗೆ ಕೊಟ್ಟನು. ಕಾಲಕ್ರಮೇಣದಲ್ಲಿ ಆ ಭಾಗಗಳೆಲ್ಲಾ ಕ್ರಿಯಿಲೆಯಾಗಿ ಸಾಮಾನ್ಯ ಜನರು ಅವುಗಳ ಸ್ವಾಧೀನ ಹೊಂದಿದ್ದರು. ಅವರು ಅಲ್ಲಿ ಅಡಿಕೆ ತೋಟಗಳನ್ನು ಮಾಡಿ ವಿಶೇಷ ಲಾಭ ಸಂಪಾದಿಸಿದುದಲ್ಲದೆ ಪರಸ್ಪರ ಭೋಗ್ಯ ಮಾಡಿಕೊಂಡಿದ್ದರು. ಅವರು ಮಠ, ಅಗ್ರಹಾರ ಮತ್ತು ದೇವಸ್ಥಾನಗಳಿಗೆ ಸಲ್ಲಿಸಬೇಕಾದ ಹಣವನ್ನು ಪಾವತಿಮಾಡಿರಲಿಲ್ಲ. ಕ್ರಿ.ಶ. ೧೬೫೪ ರಲ್ಲಿ ಕೆಳದಿ ಶಿವಪ್ಪನಾಯಕ (ಕ್ರಿ. ಶ. ೧೬೪೫-೧೬೬೦) ಕೂಲಂಕಷವಾಗಿ ವಿಚಾರಣೆ ಮಾಡಿ ಆ ಭೂಮಿಯನ್ನು ಮಠ, ಅಗ್ರಹಾರ ಮತ್ತು ದೇವಸ್ಥಾನಗಳಿಗೆ ಹಿಂತಿರುಗಿಸಿದನು. ಶೃಂಗಾಪುರ ಮತ್ತು ವಿದ್ಯಾರಣ್ಯಪುರಗಳನ್ನು ೨೫೦ ಭಾಗಗಳನ್ನಾಗಿ ಮಾಡಿ ಆ ಹಣವನ್ನು ಮಠ, ಅಗ್ರಹಾರ ಮತ್ತು ದೇವಸ್ಥಾನಗಳಿಗೆ ಹಂಚಿದನು.[2]

## ಅಗ್ರಹಾರದ ಅಧಿಕಾರಿಗಳು

**"ಮಾಸವೆಗ್ಗಡೆ" ಅಥವಾ ತಿಂಗಳವಧಿಯ ಮುಖಂಡರು :** ಕ್ರಿ. ಶ. ೧೪ ನೆಯ ಶತಮಾನದ ಪ್ರಾರಂಭದಲ್ಲಿ, ಮೈಸೂರು ಮತ್ತು ಮಂಡ್ಯ ಜಿಲ್ಲೆಗಳ ಹಲವು ಭಾಗಗಳಲ್ಲಿ ಗ್ರಾಮಗಳಲ್ಲಿದ್ದ ಗಾವುಂಡ ಅಥವಾ ಗೌಡಿಕೆಯನ್ನು ಹೋಲುವ "ಮಾಸವೆಗ್ಗಡೆ" ಪದ್ಧತಿಯ ಅಸ್ತಿತ್ವದಲ್ಲಿದ್ದಿತೆಂದು ತೋರುತ್ತದೆ. ಮಾಸವೆಗ್ಗಡೆಗಳು ತಮ್ಮ ಅಧಿಕಾರವನ್ನು ಅಗ್ರಹಾರಗಳಲ್ಲಿ ಪ್ರತಿ ತಿಂಗಳ ಸರದಿಯ ಮೇಲೆ ಚಲಾಯಿಸುತ್ತಿದ್ದರು. ಕ್ರಿ. ಶ. ೧೩೦೭ ರಲ್ಲಿ, "ತಂತ್ರ ಮಂತ್ರ ಚಿಂತಾಮಣಿ" ಶ್ರವಣಪ್ಪಾಚಾರ್ಯ ವಿಘ್ನೇಶ್ವರ ದೀಕ್ಷಿತೋಪಾಧ್ಯಾಯರ ಮಾಸವೆಗ್ಗಡೆತನದಲ್ಲಿ ಮದ್ದೂರಿನ ಬ್ರಾಹ್ಮಣರು ಇವರಿಗೆ ಒಂದು ದಾನ ಮಾಡಿದರು.[3] ಅದೇ ಸ್ಥಳದ ಕ್ರಿ.ಶ. ೧೩೦೮ ರ ಮತ್ತೊಂದು ಶಾಸನ ಹಿಂದಿನ ಶಾಸನದಲ್ಲಿ ಕಂಡು ಬರದ ಮಾಸವೆಗ್ಗಡೆ ಎಂಬ ಪದವನ್ನು ತಿಳಿಸುತ್ತದೆ. ಕ್ರಿ. ಶ. ೧೩೦೮ ರಲ್ಲಿ ಉಪೇಂದ್ರಪುರ ಅಗ್ರಹಾರದ ಸಮಸ್ತ ಬ್ರಾಹ್ಮಣರು, ಅಸಮ ದೇವನ "ಮಾಸವೆಗ್ಗಡೆ"ತನದಲ್ಲಿ, ಚಿರದುವು ಒಣಪ್ರದೇಶದಲ್ಲಿ, ಉಪೇಂದ್ರ ಪಟ್ಟಣವನ್ನು ಹೊಸದಾಗಿ ಕಟ್ಟಲು ಆರು ಜನರಿಗೆ ಒಂದು ದಾನ ಕೊಟ್ಟರು.[4] ಕ್ರಿ.ಶ. ೧೩೩೬ ರಲ್ಲಿ ಅದೇ ಅಗ್ರಹಾರದ ಎಲ್ಲ ಬ್ರಾಹ್ಮಣರು, ಉದುಗುಂದೂರಿನ ಕರತ್ತಿಯ "ಮಾಸ

1. *EC*, VIII. Tl. 5.
2. *EC*, VI, 11.
3. *EC*, IV, Yl. 40.
4. *Ibid.*, 39.

ವೆಗ್ಗಡೆ "ತನದಲ್ಲಿ ಮಂಬೋಜ ಎಂಬುವನಿಗೆ ಒಂದು ಶಿಲಾಸನ್ನದನ್ನು ಕೊಟ್ಟರು.[1] ಡಾ. ಸಾಲತೂರ್‌ರವರು, ಮದ್ದೂರು ಅಥವಾ ಉಪೇಂದ್ರಪುರದಲ್ಲಿ ತಿಂಗಳ ಸರದಿಯ ಮೇಲೆ ಅಧಿಕಾರ ಹೊಂದುತ್ತಿದ್ದ ಪದ್ಧತಿ ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದಿರಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[2] ವಿಜಯನಗರ ಕಾಲದಲ್ಲಿ ಈ ಪದ್ಧತಿಗೆ ಹೆಚ್ಚಿನ ನಿದರ್ಶನಗಳು ದೊರಕದಿರುವುದರಿಂದ, ಈ ಪದ್ಧತಿ ಸಾಮಾನ್ಯವಾಗಿ ರೂಢಿಯಲ್ಲಿದ್ದಿತೆಂದು ಹೇಳಲಾಗುವುದಿಲ್ಲ. ಈ ಪದ್ಧತಿಯಿಂದ ಸರ್ವಸದಸ್ಯರ ಸಹಕಾರವನ್ನು ಪಡೆದುಕೊಳ್ಳಬಹುದಾಗಿದ್ದುದು ಮುಖ್ಯ ಪ್ರಯೋಜನವಾಗಿತ್ತು.

ಬುದ್ಧಿವಂತರು: ಈಗಿನ ಕೊಪ್ಪ, ಮೂಡಿಗೆರೆ, ತೀರ್ಥಹಳ್ಳಿ ಮತ್ತು ನಗರ ತಾಲ್ಲೂಕುಗಳ ಶಾಸನಗಳಲ್ಲಿ "**ಬುದ್ಧಿವಂತರು**" ಎಂಬ ಪದವನ್ನು ಸಾಮಾನ್ಯವಾಗಿ ಬಳಸಲಾಗಿದೆ. ಉದಾಹರಣೆಗೆ, ಕ್ರಿ.ಶ. ೧೪೫೫ ರಲ್ಲಿ ಬೈರಪ್ಪ ಹೆಗ್ಗಡೆ ಬತ್ತ ಬೆಳೆಯುವ ಒಂದು ಜಮೀನನ್ನು ಕೊಂಡುಕೊಂಡು ದೇವರಿಗೆ ದಾನಮಾಡಿದನು.[3] ಈ ದಾನವನ್ನು ಪ್ರಭುಗಳು ಮತ್ತು "ಬುದ್ಧಿವಂತರು" ಕಾರ್ಯಗತಮಾಡಿದರು. ಕ್ರಿ.ಶ. ೧೫೮೫ ರ ಬ್ರಾಹ್ಮಣ ಸ್ಮಾರ್ತಪಂಥಕ್ಕೆ ಸೇರಿದ ಹರಿಹರಪುರ ಮಠದ ಒಂದು ಶಾಸನ "ಬುದ್ಧಿವಂತರು" ಎಂಬ ಪದವನ್ನು ಉಪಯೋಗಿಸುತ್ತದೆ.[4] ಈ ಶಾಸನ ವಿವಿಧ ಸ್ಥಳಗಳಲ್ಲಿದ್ದ ನಾಲ್ವರು ಸಮಕಾಲೀನರನ್ನು ಹೆಸರಿಸುತ್ತದೆ. ಅವರು ಕಾರ್ಕಳದ ನಾಯಕ ಶ್ರೀರಂಗರಾಯ, ಶೃಂಗೇರಿ ಪೀಠಾಧಿಕಾರಿಯಾಗಿದ್ದ ನರಸಿಂಹಭಾರತಿ (ಕ್ರಿ.ಶ. ೧೫೬೩-೧೫೭೬) ಮತ್ತು ಹರಿಹರಪುರಮಠದ ಮುಖ್ಯಸ್ಥರಾಗಿದ್ದ ಮಾಧವಸರಸ್ವತಿ. ಈ ಶಾಸನದ ಪ್ರಕಾರ ಈ ಗುರುಗಳ ಒಬ್ಬ ಶಿಷ್ಯ ಮಠಕ್ಕೆ ೭೮ ವರಹಗಳನ್ನು ಪಾವತಿಮಾಡಿ, ಭೂಮಿಯನ್ನು ಕೊಂಡು ಅದನ್ನು ಹರಿಹರದಪುರದಲ್ಲಿ ನರಸಿಂಹದೇವಸ್ಥಾನದ ಸೇವೆಗೆ ಕೊಟ್ಟನು. ಹರಿಹರಪುರದ ಮಹಾಜನರು, ಕಾರ್ಕಳದ ದೊರೆಯ ಸೇವೆಯಲ್ಲಿದ್ದ "ಬುದ್ಧಿವಂತರು," ಹೆಲ್ತೊರೆಯ ತಿಮ್ಮಯಸೇನಬೋವ ಮತ್ತು ನಾಡಿನ ನಿವಾಸಿಗಳು ಈ ವ್ಯವಹಾರಕ್ಕೆ ಸಾಕ್ಷಿಗಳಾಗಿದ್ದರು. "ಬುದ್ಧಿವಂತರು" ಆ ಸ್ಥಳದ ವಿವೇಕಿಗಳಾಗಿದ್ದರು.

"ಗ್ರಾಮಹೆಬ್ಬಾರುವ", "ಹೆಬ್ಬಾರು ವಕ್ಕಲು", "ಹೆಬ್ಬಾರ್", "ಪ್ರಭು", "ಒಡೆಯ": "**ಗ್ರಾಮಹೆಬ್ಬಾರುವ**" ಬ್ರಾಹ್ಮಣರ ಮುಖಂಡನಾಗಿದ್ದನು. "ಮಹಾಜನ"ರನ್ನು ಹೆಬ್ಬಾರುವರೆಂದು ಕರೆಯಲಾಗುತ್ತಿತ್ತು. ಉದಾಹರಣೆಗೆ, ಕ್ರಿ.ಶ. ೧೩೭೦ ರಲ್ಲಿ ವಿರೂಪಣ್ಣ ಒಡೆಯರು ಕಳಸನಾಥದೇವರ "ಬ್ರಹ್ಮಪುರಿ"ಯ ಬ್ರಾಹ್ಮಣರಿಗೆ ಒಂದು ದಾನಮಾಡಿದರು. ಬ್ರಾಹ್ಮಣರು ಪೂಜೆ ಮೊದಲಾದ ವ್ರತಗಳನ್ನು ಆಚರಿಸಲು "ಹೆಬ್ಬಾರು"ವರಿಗೆ ೧೩ ಭಾಗಗಳನ್ನು ಕೊಟ್ಟರು.[5] ಕ್ರಿ.ಶ. ೧೪೬೮ ರಲ್ಲಿ

---

1. *Ibid.*, 38.
2. Saletore: *Soc. and Life*, II, p. 141.
3. *MAR*, 1934, No. 21.
4. *MAR*, 1932, No. 40.
5. *EC*, VI, Mg. 57.

ಯಮುವಣ್ಣನೆಂಬುವನು ಹರಹುಗ್ರಾಮಕ್ಕೆ ಹೆಬ್ಬಾರನಾಗಿದ್ದನು.[1] ಕ್ರಿ.ಶ. ೧೪೯೪ ರ ಒಂದು ಶಾಸನ ದಾನವಾಗಿ ಕೊಟ್ಟ ಹಣವನ್ನು ಭೂಮಿಗೆ ವಿನಿಯೋಗಿಸಿ, ಅದರಿಂದ ಬರುವ ವರಮಾನದಿಂದ ಕಳಸನಾಥದೇವಸ್ಥಾನದ ರುದ್ರಪೂಜೆಯ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣನಿಗೆ ಆಹಾರ ನೀಡಬೇಕೆಂದು ದಾಖಲೆಮಾಡಿದೆ. ಈ ಹಣವನ್ನು ಗ್ರಾಮ ಹೆಬ್ಬಾರುವ ಅಥವಾ ಗ್ರಾಮದ ಬ್ರಾಹ್ಮಣಮುಖಂಡನ ಹಾಜರಿಯಲ್ಲಿ ಕೊಡಲಾಯಿತು.[2] ಕಳಸದ ಮಾವಿನಕೇರಿ, ಹೊಸಕೇರಿ ಮತ್ತು ಗುಲಕೇರಿ ಬೀದಿಗಳಲ್ಲಿ ಹೆಬ್ಬಾರುವರಿದ್ದರು.[3] ಕ್ರಿ.ಶ. ೧೫೩೪ ರಲ್ಲಿ ಮೇಲೆ ಹೇಳಿದ ಕೇರಿಗಳ "ಹೆಬ್ಬಾರ" ಸಂಸಾರಗಳು ಮತ್ತು ಇತರರ ಹಾಜರಿಯಲ್ಲಿ ಭೈರರಸ ಒಡೆಯರು ಕಳಸನಾಥ ದೇವರಿಗೆ ಒಂದು ದಾನವನ್ನು ಕೊಟ್ಟರು.[4] ಕ್ರಿ.ಶ. ೧೫೭೩ ರಲ್ಲಿ ಸಿಂಗಣನೆಂಬುವನು ಶಾಂತಿಗ್ರಾಮದ "ಹೆಬ್ಬಾರುವ" ನಾಗಿದ್ದನು.[5] ಮತ್ತೊಂದು ಶಾಸನದಿಂದ "ಹೆಬ್ಬಾರ" ಹುದ್ದೆಯಿದ್ದಿತೆಂದು ತಿಳಿಯುತ್ತದೆ. ಕ್ರಿ.ಶ. ೧೫೬೧ ರ ಒಂದು ಶಾಸನ ಶ್ರೀರಂಗರಾಯ ಶಂಕರನೆಂಬುವನಿಗೆ, ಬೇಲೂರು ಪ್ರದೇಶ ದಲ್ಲಿ ಭರತವಳ್ಳಿ ಎಂಬ ಗ್ರಾಮವನ್ನು ದಾನ ಮಾಡಿದನೆಂದು ತಿಳಿಸುತ್ತದೆ. ಶಂಕರನು ಅದನ್ನು ೧೩ ವೃತ್ತಿಗಳನ್ನಾಗಿ ವಿಂಗಡಿಸಿದನು. ಶಂಕರನು ಕನಲೂರು ಜಿಲ್ಲೆಯಲ್ಲಿ "ಹೆಬ್ಬಾರ" ಹುದ್ದೆಗೆ ಸಂಭಾವನೆಯಾಗಿ ಶಂಕರಯ್ಯನೆಂಬುವನಿಗೆ ಭೂಮಿಯನ್ನು ದಾನಮಾಡಿದನೆಂದು ತಿಳಿಸುತ್ತದೆ.[6] ಈ ಶಾಸನದಿಂದ ಎರಡು ವಿಷಯಗಳನ್ನು ತಿಳಿಯ ಬಹುದು. ಮೊದಲನೆಯದಾಗಿ, ಈ ಪ್ರದೇಶದ ಅಗ್ರಹಾರಗಳಲ್ಲಿ "ಹೆಬ್ಬಾರ" ಹುದ್ದೆ ಅಸ್ತಿತ್ವದಲ್ಲಿದ್ದಿತು. ಎರಡನೆಯದಾಗಿ, ಆ ಹುದ್ದೆಗೆ ಸಂಭಾವನೆ ತೆರಿಗೆ ಮನ್ನಾಮಾಡಿ ದಾನಮಾಡಿದ ಭೂಮಿ. ಕ್ರಿ. ಶ. ೧೪೯೮ ರ ಒಂದು ಶಾಸನ ಒಬ್ಬ ಮಹಿಳೆ ಕಳಸ ನಾಥ ದೇವರ ನೈವೇದ್ಯಸೇವೆಗೆ ಹಲವು ಜಮೀನುಗಳನ್ನು ದಾನ ಮಾಡಿದಳೆಂದು ತಿಳಿಸುತ್ತದೆ. ಆ ದಾನವನ್ನು ಆ ಗ್ರಾಮದ ಹೆಬ್ಬಾರು ವಕ್ಕಲು ಮತ್ತು ಹಿರಿಯ ಮಕ್ಕಿಯ ಮನಕಿ ಗ್ರಾಮದ "ಹೆಬ್ಬಾರು"ವರ ಸಮ್ಮುಖದಲ್ಲಿ ಮಾಡಲಾಯಿತು.[7] ಗ್ರಾಮದ ಮುಖ್ಯಸ್ಥನನ್ನು ಸೂಚಿಸಲು **"ಮಹಾಪ್ರಭು"** ಮತ್ತು **"ಹೆಗ್ಗಡೆ"** ಎಂಬ ಪದಗಳು ರೂಢಿಯಲ್ಲಿದ್ದವು. ಕ್ರಿ.ಶ. ೧೪೦೫ ರಲ್ಲಿ ಆರಗ ವೇಂಠೆಯ ಸಾತಳಿಗೆ-೧೦೦೦ ದಲ್ಲಿನ ೫೪ ಅಗ್ರಹಾರಗಳ "ಮಹಾ ಪ್ರಭುಗಳು" ಮತ್ತು ಸಮಸ್ತ "ನಾಡು" ಬ್ರಾಹ್ಮಣರು ತಮ್ಮಲ್ಲಿಯೆ ಒಪ್ಪಿ ಒಂದು ಶಾಸನವನ್ನು ಕೊಟ್ಟರು.[8] ಕ್ರಿ.ಶ. ೧೪೧೬

1. *EC*, III. Sr. 139.
2. *MAR*, 1934, No. 18.
3. *EC*, VI, Mg. 57.
4. *EC*, VI. Mg. 62.
5. *EC*, V, Hn. 117.
6. *MAR*, 1226, No. 5.
7. *MAR*, 1934, No. 18, II grant.
8. *EC*, VIII, Tl. 22.

ರಲ್ಲಿ ಬೊಮ್ಮದೇವ ಹೆಗ್ಗಡೆ ಮತ್ತು ಹರಂದೂರಿನ ಬ್ರಾಹ್ಮಣರು ಅಹೋಬಲಿ ಭಟ್ಟನಿಗೆ ಭೂಮಿಯನ್ನು ದಾನಮಾಡಿದರು.[1] ಇದೇ ರೀತಿ ಕ್ರಿ.ಶ. ೧೪೧೮ ರಲ್ಲಿ ಚಿದಿರವಲಿಯ ಸಮಸ್ತ ಬ್ರಾಹ್ಮಣರು, ಹರಿಕಾರ ಬೊಮ್ಮನ ಹೆಗ್ಗಡೆ ಮತ್ತು ಇತರರು ಭೂಮಿಯನ್ನು ದಾನಮಾಡಿದರು.[2] ಕ್ರಿ. ಶ. ೧೬ ನೆಯ ಶತಮಾನದ ಮತ್ತೊಂದು ಶಾಸನ ಶಿವಗಂಗೆಯ ಶಿವಗಂಗಾಧರ ದೇವರ ಗೌರವಕ್ಕಾಗಿ, ಶಿವಗಂಗೆ ಜಿಲ್ಲೆಯ ಪ್ರಭು ಗೌಡರು ಹೆಗ್ಗಡೆಯರು ಮುಂತಾದವರ ಅನುಮತಿಯಿಂದ ವಾರ್ಷಿಕ ಮೇಳದಲ್ಲಿ ವಸೂಲು ಮಾಡ ಬೇಕಾಗಿದ್ದ ಹಲವು ತೆರಿಗೆಗಳನ್ನು ತಿಳಿಸುತ್ತದೆ.[3] ಅಗ್ರಹಾರದ ಮುಖಂಡನನ್ನು ಸೂಚಿಸಲು **"ಒಡೆಯ"** ಎಂಬ ಪದವನ್ನು ಉಪಯೋಗಿಸಲಾಗಿದೆ.[4] **"ಮೂಲಿಗರು"** ಎಂಬ ಪದವನ್ನು ಅಗ್ರಹಾರದ ಮುಖಂಡರನ್ನು ಸೂಚಿಸಲು ಬಳಕೆಯಲ್ಲಿದ್ದಿತು. ಕ್ರಿ.ಶ. ೧೫೧೫ ರ ಒಂದು ಶಾಸನ ಕಳಸ-ಸಾವಿರ ಗ್ರಾಮದ ಮೂರು "ಹೆಬ್ಬಾರು" ಗಳನ್ನು ಮೂಲಿಗರೆಂದು ಕರೆಯಲಾಗುತ್ತಿತ್ತೆಂದು ತಿಳಿಸುತ್ತದೆ. ಅವರು ಆ ಗ್ರಾಮದ ಮುಖ್ಯಸ್ಥರು ಅಥವಾ ಹಿರಿಯರಾಗಿದ್ದಿರಬೇಕು.[5] ಗ್ರಾಮದಲ್ಲಿ ಕೆಲಸ ಮಾಡುತ್ತಿದ್ದ "ಆಯಗಾರರು", ಅಗ್ರಹಾರದಲ್ಲೂ ಕೆಲಸಮಾಡುತ್ತಿದ್ದಿರಬೇಕು.

ವಿಜಯನಗರ ಸಾಮ್ರಾಟರ ಆಳ್ವಿಕೆಯಲ್ಲಿ ಅಗ್ರಹಾರಗಳ ಒಂದು ವಿಶೇಷ ಲಕ್ಷಣ ವನ್ನು ಕಾಣಬಹುದು. ಮಹಾಜನರಿಗೆ ಸ್ವಾಯುತ್ತತೆಯನ್ನು ಕೊಟ್ಟಿದ್ದರೂ ಅಗ್ರಹಾರ ಗಳ ಮೇಲೆ ಸರ್ಕಾರ ತನ್ನ ಅಧಿಕಾರಿಗಳನ್ನು ನೇಮಿಸುತ್ತಿದ್ದಿತು. ಕ್ರಿ. ಶ. ೧೩೭೫ ರಲ್ಲಿ ಹರಿಹರ, ಬುಕ್ಕರಾಜಪುರ ಅಗ್ರಹಾರದ ಪಾರುಪತ್ಯಗಾರನಾಗಿ ದೇವೇಶ್ವರ ಪಂಡಿತನನ್ನು ನೇಮಿಸಿದನು.[6] ಕ್ರಿ.ಶ. ೧೫೧೭ ರಲ್ಲಿ ಪುರದ ಎರಡು ಅಗ್ರಹಾರಗಳ ಪಾರುಪತ್ಯನಾಗಿ ಬೆಳಗೊಳದ ಅನ್ನಮಗಸ-ಹೆಬ್ಬಾರನ್ನು ನೇಮಿಸಲಾಯಿತು.[7] ಕ್ರಿ.ಶ. ೧೫೩೨ ರ ಒಂದು ಶಾಸನ ದುರ್ಗಾಗ್ರಹಾರದಲ್ಲಿ ಯೋಗನರಸಿಂಹದೇವರ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಆದವಾನಿ ರಾಜ್ಯದ ಪಿಡವೆಯ ಹರಮಲ್ಲಯ್ಯನ ಮಗ ರಾಮಯ್ಯ ದುರ್ಗಾಗ್ರಹಾರದ ಪಾರುಪತ್ಯವನ್ನು ಹೊಂದಿದ್ದನೆಂದು ತಿಳಿಸುತ್ತದೆ.[8] ಇದೇ ರೀತಿ ಕ್ರಿ.ಶ. ೧೫೭೭ ರಲ್ಲಿ ಸದಾಶಿವಪುರ ಅಗ್ರಹಾರದಲ್ಲಿ ಗಲಭೆ ತೋರಿದಾಗ ರಾಮರಾಯ ನಾಯಕ ವಿಚಾರಣೆ ನಡೆಸಿ, ಹೊಸ ದಾನಗಳನ್ನು ಮಾಡಿ ನಾರಾಯಣಪ್ಪನ ಮಗ ಕೃಷ್ಣಪ್ಪಯ್ಯನನ್ನು ಪಾರುಪತ್ಯಗಾರನನ್ನಾಗಿ ನೇಮಿಸಿದನು.[9]

---

1. *EC*, VI Sg. 29.
2. *EC*, VI, Sg. 33.
3. *MAR*, 1935, No. 3.
4. *EC*, IV. Gu. 2,
5. *EC*, VI, Mg. 88.
6. *EC*, IV, Yd. 46.
7. *EC*, III, Nj. 46.
8. *EC*, IV, Yl. 45.
9. *EC*, VIII, Tl. 5.

ಅಗ್ರಹಾರವನ್ನು ದಾನ ಪಡೆದ ಮಾಲೀಕನು ಅನೇಕ ವೇಳೆ ಅದನ್ನು ವೃತ್ತಿಗಳನ್ನಾಗಿ ಭಾಗಮಾಡಿ ಬ್ರಾಹ್ಮಣರಿಗೆ ಹಂಚಿದುದನ್ನು ಹಿಂದೆ ತಿಳಿಸಲಾಗಿದೆ. ಅಂತಹ ಸಂದರ್ಭಗಳಲ್ಲಿ ಮಾಲೀಕನೆ, ಪಾರುಪತ್ಯಗಾರನನ್ನು ನೇಮಿಸುತ್ತಿದ್ದನು. ಉದಾಹರಣೆಗೆ, ಕ್ರಿ.ಶ. ೧೩೭೦ ರಲ್ಲಿ ಬುಕ್ಕರಾಯ ಹದಿನೆಂಟು ಪುರಾಣಗಳಲ್ಲಿ ಜ್ಞಾನವನ್ನು ಹೊಂದಿದ್ದ ಮತ್ತು ಎಂಟು ಭಾಷೆಗಳಲ್ಲಿ ಕವಿಯಾಗಿದ್ದ ಸೋಮನಿಗೆ, ಗುತ್ತಿದುರ್ಗ ರಾಜ್ಯದಲ್ಲಿ ಪಿನಾಕಿನಿ ನದಿಯ ದಡದಲ್ಲಿ ಬುಕ್ಕರಾಯಪುರವನ್ನು ದಾನಮಾಡಿದನು. ಅದನ್ನು ೧೧೦ ಭಾಗಗಳನ್ನಾಗಿ ಮಾಡಿ ಪಾರುಪತ್ಯಕ್ಕಾಗಿ ತನಗೆ ೩೬ ಭಾಗಗಳನ್ನು ಉಳಿಸುಕೊಂಡು, ಉಳಿದುವನ್ನು ಬ್ರಾಹ್ಮಣರಿಗೆ ಕೊಟ್ಟನು.[1]

**ಮಹಾಜನಸಭೆ :** ಅಗ್ರಹಾರ ಗ್ರಾಮಗಳ ಆಡಳಿತ ಮಹಾಜನರನ್ನೊಳಗೊಂಡ ಸಭೆಗೆ ಸೇರಿದ್ದಿತು. ಎರಡು ರೀತಿಯ ಸಭೆಗಳಿದ್ದುವು. ಮೊದಲನೆಯದರಲ್ಲಿ, ಮನೆಯ ಯಜಮಾನರು ಸಭೆಯ ಸದಸ್ಯರಾಗಿದ್ದರು. ಅವರು ವಿಧಿಬದ್ಧ ಸದಸ್ಯರಾಗಿದ್ದರು. ಈ ವಿಧದ ಸಭೆಯ ಸದಸ್ಯರ ಸಂಖ್ಯೆಯು ದಾನವನ್ನು ಪಡೆದವರ ಸಂಖ್ಯೆಯನ್ನು ಅವಲಂಬಿಸಿದ್ದಿತು. ಈ ರೀತಿಯ ಸಭೆಗೆ ಕೆಲವು ನಿದರ್ಶನಗಳನ್ನು ಕೊಡಬಹುದು.

(೧) ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ೪೫ ಮಹಾಜನರಿದ್ದು, ಅವರು ಕ್ರಿ.ಶ. ೧೩೭೮ ರಲ್ಲಿ ಒಂದು ದಾನವನ್ನು ಮಾಡಲು ಒಪ್ಪಿದರು.[2]

(೨) ಕ್ರಿ.ಶ. ೧೩೮೦ ರಲ್ಲಿ ಚಾಮರಾಜನಗರ ತಾಲ್ಲೂಕಿನ ಸರ್ವಜ್ಞ ವಿಷ್ಣುಪುರ (ಹೊಮ್ಮ) ಅಗ್ರಹಾರದಲ್ಲಿ ೧೦೮ ಮಹಾಜನರಿದ್ದರು. ಅವರು ಮೂಲಸ್ಥಾನ ದೇವರ ಪೂಜೆಗೆ ಭೂದಾನ ಮಾಡಿದರು.[3]

(೩) ಕೊಪ್ಪ ತಾಲ್ಲೂಕಿನ ಒಂದು ಶಾಸನದ ಪ್ರಕಾರ ಕ್ರಿ.ಶ. ೧೪೦೪ ರಲ್ಲಿ ಆರಗ ರಾಜ್ಯದಲ್ಲಿ ತುಂಗಾನದಿಯ ದಡದಲ್ಲಿ ಸಕರಿಪುರ ಅಗ್ರಹಾರದಲ್ಲಿ ೫೨ ಪಾಲುದಾರರಿದ್ದರು.[4]

(೪) ಕ್ರಿ. ಶ. ೧೪೦೫-೬ ರಲ್ಲಿ ಪಾಂಡುಚೆರಿ ಪ್ರದೇಶದ ತಿರುವಾಂದರ್ ಕೋಯಿಲ್‌ನಲ್ಲಿದ್ದ, ತ್ರಿಭುವನ-ಮಹಾದೇವಿ-ಚತುರ್ವೇದಿ ಮಂಗಳದಲ್ಲಿ ೪೦೦೦ ಮಹಸೀಯರಿದ್ದರು.[5]

---

1. *EC*, X, Gd. 46.
2. *EC*, VIII, Tl. 108.
3. *EC*, IV, Ch. 64.
4. *EC*, VI, Kp. 25
5. 217 of 1917.

(೫) ಕ್ರಿ.ಶ. ೧೪೬೮ ರಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನ ರಾಮ-ಸೀತಪುರದಲ್ಲಿ ೭೬ ಮಹಾಜನರಿದ್ದರು.[1]

(೬) ಕ್ರಿ.ಶ. ೧೫೩೯ ರಲ್ಲಿ ಅಚ್ಯುತೇಂದ್ರಪುರ ಅಗ್ರಹಾರದಲ್ಲಿ ೩೫ ಸಾಲುಗಾರರಿದ್ದರು.[2]

ಈ ಸಭೆಗಳಲ್ಲಿ ಅಗ್ರಹಾರಗಳ ಸಮಸ್ತ ನಿವಾಸಿಗಳು ಹಾಜರಿರುತ್ತಿದ್ದರು. ಎಲ್ಲರೂ ಇದ್ದರೆಂಬುದನ್ನು ಸೂಚಿಸಲು, ಶಾಸನಗಳಲ್ಲಿ "ಅಶೇಷ" ಎಂಬ ಪದವನ್ನು ಉಪಯೋಗಿಸಲಾಗಿದೆ. ಇದಕ್ಕೆ ಹಲವು ನಿದರ್ಶನಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೬೬ ರಲ್ಲಿ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ರಾಮಪುರದ (ಬನ್ನೂರು)ಮಹಾಜನರು ಒಂದು ಸಭೆಯಲ್ಲಿ ಹಾಜರಿದ್ದರು.[3]

(೨) ಕ್ರಿ.ಶ. ೧೩೯೯ ರಲ್ಲಿ, ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಮಧುಸೂದನಪುರ (ತಳಿರೂರು) ಅಗ್ರಹಾರದ ಮಹಾಜನರು ತಮ್ಮಲ್ಲೆ ಒಪ್ಪಿ ಒಂದು ದಾನಮಾಡಿದರು.[4]

(೩) ಕ್ರಿ.ಶ. ೧೩೭೭ ರಲ್ಲಿ ಹರಹಳ್ಳಿ ನಾಡಿನ ಎರಡು ಕನ್ನೂರು ಅಗ್ರಹಾರಗಳ "**ಅಶೇಷ ಮಹಾಜನಂಗಳು**", ಮತ್ತು ಶಿವಮೊಗ್ಗ ತಾಲ್ಲೂಕಿನ ಎಡಿಹಳ್ಳಿ ಮತ್ತು ಗವಲೂರಿನ ಅಶೇಷ ಮಹಾಜನಗಳು ನಾಡು ನಾಯಕರಿಗೆ ಅರ್ಜಿ ಹಾಕಲು ಸೇರಿದರು.[5]

(೪) ಕ್ರಿ.ಶ. ೧೫೨೧ ರಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲ ಅಗ್ರಹಾರದ "ಅಶೇಷ" ಮಹಾಜನರು ಒಂದು ದಾನ ಮಾಡಿದರು.[6]

(೫) ಕ್ರಿ.ಶ. ೧೫೪೯ರಲ್ಲಿ ಭಟ್ಟರತ್ನಾಕರ (ನಾಗಮಂಗಲ) ಅಗ್ರಹಾರದ "ಅಶೇಷ" ಮಹಾಜನಗಳು ಒಂದು ದಾನಮಾಡಿದರು.[7]

ಎಲ್ಲರೂ ಹಾಜರಿದ್ದರೆಂದು ಸೂಚಿಸುವುದಕ್ಕೆ "ಸಮಸ್ತ" ಎಂಬ ಪದವನ್ನು ಉಪಯೋಗಿಸಲಾಗಿದೆ. ಉದಾಹರಣೆಗೆ, ಕ್ರಿ.ಶ. ೧೩೭೪ ರಲ್ಲಿ ಅರಸೀಕೆರೆ ತಾಲ್ಲೂಕು ಹೊನ್ನಾವಳಿಯ ಸಮಸ್ತ ಮಹಾಜನರು ಮತ್ತು ಹಲುಕೂರಿನ "ಸಮಸ್ತ" ಗಾವುಂಡ ಪ್ರಜೆಗಳು ಮಹಾಜನಂಗಳು" ಭೂಮಿಯನ್ನು ವಿನಿಮಯಮಾಡಲು ಒಂದು ಶಾಸನ

---

1. *EC*, III, Sr. 139.
2. *EC*, V, Bl. 197.
3. *EC*, III, Tn. 110.
4. *EC*, V, Ak. 134.
5. *EC*, VII, Sn. 35.
6. *EC*, IV, Ng. 82.
7. *EC*, IV, Ng. 5.

ಮಾಡಿದರು.[1] ಕ್ರಿ.ಶ. ೧೪೦೫ ರಲ್ಲಿ "ಸಮಸ್ತ ನಾಡು ಮಹಾಜನಂಗಳು" ಒಂದು ದಾನ ಮಾಡಿದರು.[2]

ಕೆಲವು ಶಾಸನಗಳಲ್ಲಿ "ಮುಂತಾದ"[3], "ಮೊದಲಾದ"[4] ಎಂಬ ಪದಗಳನ್ನು ಉಪಯೋಗಿಸಿ ಹಲವು ಸದಸ್ಯರನ್ನು ಹೆಸರಿಸಲಾಗಿದೆ. ಇಂತಹ ಸಂದರ್ಭಗಳಲ್ಲಿ ಹಲವು ಪ್ರಮುಖ ಸದಸ್ಯರನ್ನು ಹೆಸರಿಸಿ, ಅವರು ಮತ್ತು ಇತರರು (ಮುಂತಾದ, ಮೊದಲಾದ) ಹಾಜರಿದ್ದರೆಂದು ಹೇಳಲಾಗಿದೆ.

ಎರಡನೆಯದಾಗಿ, ಮತ್ತೊಂದು ರೀತಿಯ ಸಭೆಯಲ್ಲಿ ಮಹಾಜನರಲ್ಲದೆ ಅದೇ ಗ್ರಾಮದ ಇತರರು ಅಥವಾ ನೆರೆಹೊರೆಗೆ ಸೇರಿದವರು ಹಾಜರಾಗುತ್ತಿದ್ದರು— (೧) ಕ್ರಿ.ಶ. ೧೩೮೧ ರಲ್ಲಿ ಮದ್ದೂರಿನ "ಅಶೇಷ ಮಹಾಜನಂಗಳು, ಸಮಸ್ತ ಹಲರು, ಸಮಸ್ತ ಗವುಡ ಪ್ರಜೆಗಳು" ಒಂದು ದಾನ ಮಾಡಿದರು.[5] ೨) (ಕ್ರಿ.ಶ. ೧೪೧೮ ರಲ್ಲಿ, ಒಂಬತ್ತು ಅಗ್ರಹಾರಗಳ ಮತ್ತು ಸಾತಳಿಗೆ–ಸಾನಿರದೈದು ಸಮಸ್ತ ನಿವಾಸಿಗಳ ಒಂದು ಸಭೆ ಸೇರಿತು.[6] (೩) ಕ್ರಿ.ಶ. ೧೫೩೧ ರಲ್ಲಿ ಶಿವಬ್ರಾಹ್ಮಣ ವಿದ್ವಾಂಸರ, ಮಹೇಶ್ವರರ ಮತ್ತು ದೇವಸ್ಥಾನದ ಅಧಿಕಾರಿಗಳ ಒಂದು ಸಭೆಯು ಕಾಂಚಿಯಲ್ಲಿ ಸೇರಿತು.[7]

**ಮಹಾಜನ ಸಭೆಗಳಿಗೆ ಕರೆ:** ಶಾಸನಗಳ ಆಧಾರದ ಮೇಲೆ, ಮಹಾಜನ ಸಭೆಗಳನ್ನು ಎರಡು ವಿಧದಲ್ಲಿ ಕರೆಯಲಾಗುತ್ತಿದ್ದಿತೆಂದು ತಿಳಿಯಬಹುದು. ಸಾಮಾನ್ಯವಾಗಿ ಮಹಾಜನರು ತಾವೇ ಸಭೆ ಸೇರುತ್ತಿದ್ದರು. ಈ ರೀತಿಯ ಸಭೆಗಳಿಗೆ ಶಾಸನಗಳ ಆಧಾರವು ಬಹುವಾಗಿವೆ. ಉದಾಹರಣೆಗೆ, ಕ್ರಿ.ಶ. ೧೩೭೨ ರಲ್ಲಿ ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಪ್ರಸನ್ನ ವಿಜಯಪುರ ಅಗ್ರಹಾರದ ಮಹಾಜನರು[8] ತಮ್ಮಲ್ಲಿ ಒಪ್ಪಿ ನಾಟ್ಯಗಾರ್ತಿಯರ ಆಸರೆಗೆ ಒಂದು ದಾನಮಾಡಿದರು. ಕ್ರಿ.ಶ. ೧೪೭೧ ರಲ್ಲಿ ಸಾಂತಳಿಗೆ ನಾಡಿನ (ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು) ಸಿರಿಯ ಹೊಲತೂರು ಮಹಾಜನರು ಸ್ವಲ್ಪ ಭೂಮಿಯನ್ನು ಮಾರಿದರು.[9] ಕ್ರಿ.ಶ. ೧೫೭೫ ರಲ್ಲಿ ಮುಳುವಾಗಿಲು ರಾಜ್ಯಕ್ಕೆ ಸೇರಿದ ಹೊರೆ ನಾಡಿನ ಪ್ರತಾಪ ದೇವರಾಯಪುರದ ಮಹಾಜನರು ಒಂದು ದಾನ ಮಾಡಿದರು.[10]

---

1. *EC*, V, Ak. 63
2. *EC*, VIII, Tl. 22.
3. *SII*, IX (ii), No 440 ; *MAR*, 1940. No. 16.
4. *EC*, IV, Ch. 64.
5. *MAR*, 1938. No. 73.
6. *MAR*, 1938. No. 42.
7. *EI*, XXXIII, P. 199.
8. *EC*, IV, Gu. 32.
9. *EC*, VIII, Tl. 144.
10. *EC*, X, Mb. 238.

ಎರಡನೆಯದಾಗಿ, ಮಹಾಜನ ಸಭೆಯನ್ನು ಹಲವು ಅಧಿಕಾರಿಗಳು ಕರೆಯಬಹುದಿತ್ತು. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು—(೧) ಕ್ರಿ.ಶ. ೧೩೪೬ ರಲ್ಲಿ ಮಾಧವ ಮಂತ್ರಿಯ ಆಜ್ಞೆಯ ಮೇಲೆ, ಜೋಲ್ಲುರಾಜನು, ಹೆಜ್ಜಸೆಯ ಮಹಾಜನರು ಮತ್ತು ಎರಡುಅಗ್ರಹಾರಗಳ ಮುಖಂಡರೊಡಗೂಡಿ ಒಂದು ದಾನ ಶಾಸನವನ್ನು ಸಿದ್ಧಪಡಿಸಿದನು.[1] (೨) ಕ್ರಿ.ಶ. ೧೩೬೮ ರಲ್ಲಿ, ಮಾಧವ ಮಂತ್ರಿಯು ವಿದ್ವಾಂಸರಾದ ಕಾಶ್ಮೀರಿ ಬ್ರಾಹ್ಮಣರ ಒಂದು ಸಭೆಯನ್ನು ಕರೆದು ೮೦ ಭಾಗಗಳನ್ನಾಗಿ ಮಾಡಿ ಅವನ್ನು ಹಂಚಿದನು.[2] (೩) ಕ್ರಿ.ಶ. ೧೩೬೮ ರಲ್ಲಿ, ಅಹೋಬಲನಾಥ ತನ್ನ ಯಜಮಾನನ ಅಭಿಲಾಷೆಯಂತೆ ಗೋಪಿನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ, ಅಲ್ಲಿ ಸೇವೆಗಳು ಶಾಶ್ವತವಾಗಿ ನಡೆಯಲು ಬನವಾಸಿಯಲ್ಲಿ ಒಂದು ಸಭೆಯನ್ನು ನಡೆಸಿದನು. ಆ ಸಭೆಗೆ ಯಳಸೆ ಮತ್ತು ಕುಪ್ಪಗದ್ದೆ ಅಗ್ರಹಾರಗಳ ಮಹಾಜನರು ಇತರರೊಡನೆ ಹಾಜರಿದ್ದರು.[3] (೪) ಕ್ರಿ.ಶ. ೧೪೧೮ ರಲ್ಲಿ, ಆರಗವನ್ನು ಆಳುತ್ತಿದ್ದ ಸಾವಣ್ಣ ಒಡೆಯರು ಒಂಬತ್ತು ಅಗ್ರಹಾರಗಳ ಮತ್ತು ಸಾತಳಿಗೆ ಸಾವಿರದೈದು ನಿವಾಸಿಗಳ ಒಂದು ಸಭೆಯನ್ನು ಕರೆದರು.[4] (೫) ಕ್ರಿ.ಶ. ೧೫೩೧ ರಲ್ಲಿ ಕಾಂಚಿಯ ಪ್ರಾಂತ್ಯಾಧಿಕಾರಿ ಭೋಗರಾಜ, ವಿದ್ವಾಂಸ ಶಿವಬ್ರಾಹ್ಮಣರು, ಮಾಹೇಶ್ವರರು ಮತ್ತು ದೇವಸ್ಥಾನದ ಅಧಿಕಾರಿಗಳ ಒಂದು ಸಭೆಯನ್ನು ಕರೆದನು.[5]

**ಮಹಾಜನ ಸಭೆಯು ಸೇರುತ್ತಿದ್ದ ಸ್ಥಳ:** ಮಹಾಜನ ಸಭೆಗಳು ಮಂಟಪಗಳಲ್ಲಿ (ಸಭಾಂಗಣ) ಸೇರುತ್ತಿದ್ದುವು. ಅವು ದೇವಸ್ಥಾನಗಳಲ್ಲಿ ಸೇರುತ್ತಿದ್ದವೊ ಅಥವಾ ಹೊರಗೊ ಎಂಬುದು ತಿಳಿಯದು. ಶಾಸನಗಳಿಂದ ಅವು ದೇವಸ್ಥಾನಗಳಲ್ಲಿ ಸೇರುತ್ತಿದ್ದವೆಂದು ಸ್ಪಷ್ಟವಾಗಿ ಹೇಳಬಹುದು. ಉದಾಹರಣೆಗೆ, ಕ್ರಿ.ಶ. ೧೪೬೬ ರ ಒಂದು ಶಾಸನದ ಪ್ರಕಾರ ಗೊರೂರು ಗ್ರಾಮದ ಮಹಾಜನರು ಅವರ ದೇವಸ್ಥಾನದಲ್ಲಿ ಸಭೆ ಸೇರಿದರು.[6]

ಮಹಾಜನ ಸಭೆಗಳು ಸಾರ್ವಜನಿಕ ಸ್ಥಳಗಳಲ್ಲಿಯೂ ಸೇರುತ್ತಿದ್ದುವು. ಪುದುಕೊಟ್ಟೈ ಸಂಸ್ಥಾನದ ಒಂದು ಶಾಸನದ ಪ್ರಕಾರ, ಕ್ರಿ.ಶ. ೧೪೪೩-೪೪ ರಲ್ಲಿ ದೇವಸ್ಥಾನದ ಅಧಿಕಾರಿಗಳು ಮತ್ತು ವಿರಯ್ಯಚಿಲೈ ನಿವಾಸಿಗಳ ಪ್ರತಿನಿಧಿಗಳು ಒಂದು ಹೂವಿನ ತೋಟದಲ್ಲಿ ಸಭೆಯನ್ನು ನಡೆಸಿದರು.[7]

**ಸಭೆಗಳನ್ನು ನಡೆಸುತ್ತಿದ್ದ ರೀತಿ:** ಶಾಸನಗಳು ಮಹಾಜನರ ತೀರ್ಮಾನಗಳನ್ನು ಒಮ್ಮತದಿಂದ ತೆಗೆದುಕೊಳ್ಳಲಾಗುತ್ತಿದ್ದಿತೆಂಬುದಕ್ಕೆ "ಸರ್ವೈಕಮತ್ಯರಾಗಿ"[8]

1. *MAR*, 1929, No. 90.
2. *EC*, VII, Sk. 281.
3. *MAR*, 1929, No. 113.
4. *MAR*, 1932, No. 42.
5. *EI*, XXXIII, p. 199.
6. *MAR*, 1936, No. 5.
7. *IPS*, No. 705.
8. *MAR*, 1936, No. 5.

"ಏಕಸ್ವಾಮ್ಯವಾಗಿ"[1] "ಒಡಂಬಟ್ಟು"[2] ಎಂಬ ಪದಗಳನ್ನು ಉಪಯೋಗಿಸುತ್ತವೆ. ಇದರಿಂದ ಚರ್ಚೆಯ ನಂತರ ಒಮ್ಮತ ನಿರ್ಧಾರಕ್ಕೆ ಬರುತ್ತಿದ್ದರೆಂದು ತಿಳಿಯಬಹುದು.

**ಮಹಾಜನ ಸಭೆಯ ಕರ್ತವ್ಯಗಳು :** "ಊರು" ಎಂಬ ಗ್ರಾಮ ಸಭೆಯು ಅನೇಕ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದ ಹಾಗೆಯೆ ಅಗ್ರಹಾರದ "ಮಹಾಜನ" ಸಭೆಯು ಮತೀಯ, ಆಡಳಿತ, ಸಾರ್ವಜನಿಕ, ಆರ್ಥಿಕ, ಸಾಮಾಜಿಕ ಮತ್ತು ನ್ಯಾಯ ವಿತರಣೆಗೆ ಸಂಬಂಧಪಟ್ಟ ಅನೇಕ ಕರ್ತವ್ಯಗಳನ್ನು ಮಾಡುತ್ತಿದ್ದಿತು.

**ಮತೀಯ ಕ್ಷೇತ್ರ :** ಮಹಾಜನ ಸಭೆಗಳ ಒಂದು ಮುಖ್ಯ ಕರ್ತವ್ಯ, ದೇವಸ್ಥಾನ ಮತ್ತು ಮಠಗಳೇ ಮುಂತಾದ ಮತೀಯ ಸಂಸ್ಥೆಗಳ ಆಡಳಿತಕ್ಕೆ ಸಂಬಂಧಿಸಿತ್ತು. ಅವು ಛತ್ರಗಳೆ ಮುಂತಾದ ದಾನ ಸಂಸ್ಥೆಗಳನ್ನು ನಡೆಸಿಕೊಂಡು ಬರುತ್ತಿದ್ದವು. ಅವು ದೇವಸ್ಥಾನಗಳಿಗೆ ದತ್ತಿಗಳನ್ನು ಕೊಡುತ್ತಿದ್ದುವು. ಈ ರೀತಿಯ ಚಟುವಟಿಕೆಗಳಿಗೆ ಹಲವು ನಿದರ್ಶನಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೬೮ ರಲ್ಲಿ ಅಹೋಬಲನಾಥ ತನ್ನ ಯಜಮಾನ ಬನವಾಸಿ ಹನ್ನೆರಡು ಸಾವಿರವನ್ನಾಳುತ್ತಿದ್ದ ಮಾಧವನ ಅಭಿಲಾಷೆಯಂತೆ ಗೋಪಿನಾಥ ದೇವಸ್ಥಾನವನ್ನು ಊರ್ಜಿತಗೊಳಿಸಿದನು. ದೇವಸ್ಥಾನದಲ್ಲಿ ಸೇವೆಗಳು ಶಾಶ್ವತವಾಗಿ ನಡೆಯುವ ಹಾಗೆ ಗುತ್ತಿ ಹದಿನೆಂಟು ಕಂಪಣಗಳ ಗೌಡ ಪ್ರಜೆಗಳಿಗೆ ಮತ್ತು ಯಳಸೆ ಮತ್ತು ಕುಪ್ಪಗದ್ದೆ ಅಗ್ರಹಾರಗಳ ಮಹಾಜನರ ಸಹಾಯವನ್ನು ಕೋರಿದನು. ಆ ಸಭೆಯು (ಕೂಟ) ದೇವಸ್ಥಾನದ ಉಪಯೋಗಕ್ಕೆ ಭೂಮಿಯನ್ನು ದಾನಮಾಡಿತು.[3]

(೨) ಕ್ರಿ.ಶ. ೧೩೮೦ ರಲ್ಲಿ ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕು ಸರ್ವಜ್ಞ ವಿಷ್ಣುಪುರದ (ಹೊಮ್ಮ) ಮಹಾಜನರು, ಮೂಲಸ್ಥಾನ ದೇವರ ಪೂಜೆಗೆ ಹೊಮ್ಮದ ನೈರುತ್ಯಕ್ಕೆ, ದೇವಸ್ಥಾನದ ಪೂಜಾರಿ ಭೂತಂಡಿ ಹೊರುವನಿಗೆ ಭೂದಾನ ಮಾಡಿದರು.[4]

(೩) ಗೇರುಸೊಪ್ಪೆ ಸಮೀಪದ ಸೂಳೇಕೆರೆಯ ಹತ್ತಿರದಲ್ಲಿ ದೇವರಾಯನ ಕಾಲದ ಒಂದು ಶಿಲಾಶಾಸನವು, ಕೋಟೀಶ್ವರ ದೇವರ ನೈವೇದ್ಯ ಮತ್ತು ಇತರ ಸೇವೆಗೆ ಕಲ್ಲಪ್ಪ ಮತ್ತು ಕೇತಪ್ಪ ಮಹಾಜನಗಳನ್ನು ಒಡಂಬಡಿಸಿ ಒಂದು ತರಿ ಜಮೀನನ್ನು ದಾನ ಮಾಡಲಾಯಿತೆಂದು ತಿಳಿಸುತ್ತದೆ.[5]

---

1. *EC*, IX, Ma. No. 11.
2. *EC*, XII, Tp. 60; *MAR*, 1938, No. 73; *MAR*, 1928, No. 56.
3. *MAR*, 1929, No. 113; *SII*, XX, No. 230.
4. *EC*, IV, Ch. 64.
5. *MAR*, 1928, No. 113.

(೪) ಕ್ರಿ. ಶ. ೧೫೨೧ ರಲ್ಲಿ, ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ವಿಷ್ಣುಸಮುದ್ರ ಅಗ್ರಹಾರದ ಮಹಾಜನರು, ಜನಾರ್ಧನ ದೇವರಿಗೆ ಸ್ವಲ್ಪ ತರಿ ಭೂಮಿಯನ್ನು ದಾನಮಾಡಿದರು.[1]

(೫) ಕ್ರಿ.ಶ. ೧೫೨೩ ರಲ್ಲಿ ಹೊಸಪೇಟೆ ತಾಲ್ಲೂಕಿನ ಕುರಿಯಕುಪ್ಪೆ ಅಗ್ರಹಾರದ (ಅನಂತಸೇತು) ಮಹಾಜನರು, ವಿರೂಪಾಕ್ಷದೇವರ ಪೂಜೆಗೆ ಒಂದು ತೋಟವನ್ನು ದಾನಮಾಡಿದರು.[2]

(೬) ಕ್ರಿ. ಶ. ೧೫೨೪ ರಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕು ಪ್ರತಾಪದೇವರಾಯಪುರದ ಮಹಾಜನರು ರಾಮಚಂದ್ರದೇವರ ನೈವೇದ್ಯಕ್ಕೆ ಮತ್ತು ದೀಪಾರಾಧನೆಗೆ ಭೂಮಿಯನ್ನು ದಾನಮಾಡಿದರು.[3]

(೭) ಕ್ರಿ.ಶ. ೧೫೪೯ ರಲ್ಲಿ, ಮಂಡ್ಯ ಜಿಲ್ಲೆಯ ಭಟ್ಟರತ್ನಾಕರದ (ನಾಗಮಂಗಲ) ಮಹಾಜನರು ವೀರಭದ್ರ ದೇವರಿಗೆ ಪ್ರತಿವರ್ಷವೂ ಆ ದೇವಸ್ಥಾನಕ್ಕೆ ಸಲ್ಲುತ್ತಿದ್ದ ಮೊದಲ ಐದು " ಪಣ "ವನ್ನು ದಾನ ಮಾಡಿದರು.[4]

(೮) ಕ್ರಿ.ಶ. ೧೫೫೭ ರಲ್ಲಿ ಬಳ್ಳಾರಿ ತಾಲ್ಲೂಕಿನ ಸೋಮ ಸಮುದ್ರ ಅಗ್ರಹಾರದ ಮಹಾಜನರು ಆ ಗ್ರಾಮದ ಲಕ್ಷ್ಮೀನಾರಾಯಣ ದೇವರ ಸೇವೆಗೆ ಭೂಮಿಯನ್ನು ದಾನಮಾಡಿದರು.[5]

(೯) ಕ್ರಿ.ಶ. ೧೫೫೦ ರಲ್ಲಿ, ಆರಗ ರಾಜ್ಯದ ಐವತ್ತು ನಾಡಿನ ಬೆಳ್ಗೊದ್ ಅಗ್ರಹಾರದ ಮಹಾಜನರು (ತೀರ್ಥಹಳ್ಳಿ ತಾಲ್ಲೂಕಿನ ನರಸಿಂಹಪುರ), ಲಕ್ಷ್ಮೀ ನಾರಾಯಣ ದೇವರ ನೈವೇದ್ಯಕ್ಕೆ ಭೂಮಿಯನ್ನು ದಾನಮಾಡಿ, ಅದೇ ದೇವಸ್ಥಾನದ ಛತ್ರಕ್ಕೆ ೧೪ ಗದ್ಯಾಣಗಳನ್ನು ಕೊಟ್ಟರು.[6]

ದೇವಸ್ಥಾನಗಳಲ್ಲಿ ಸೇವೆಗೆ ಮಹನೀಯರ ಕೊಡುಗೆಗಳನ್ನು ಸ್ವೀಕರಿಸುವುದು ಅಥವಾ ಸತ್ರ ಮತ್ತು ಮಠಗಳನ್ನು ನಡೆಸಿಕೊಂಡು ಹೋಗಲು ಸಾರ್ವಜನಿಕ ದತ್ತಿಗಳನ್ನು ಸ್ಥಳೀಯ ಮಹಾಜನರ ಸಂರಕ್ಷಣೆಗೆ ವಹಿಸಿದ ಅನೇಕ ನಿದರ್ಶನಗಳಿವೆ. ದೇವಾಲಯಗಳನ್ನು ಕಟ್ಟಲು ಮಹಾಜನರು ಭೂಮಿಯನ್ನು ದಾನ ಮಾಡುತ್ತಿದ್ದರು. ಈ ಕೆಳಗೆ ಕೊಟ್ಟಿರುವ ಶಾಸನಗಳು ಇವುಗಳಿಗೆ ಸಾಕ್ಷಿಯಾಗಿವೆ.

(೧) ಕ್ರಿ.ಶ. ೧೪೭೬ ರಲ್ಲಿ ಹಳೆಯ ಗ್ರಾಮವಾದ ಗೊರೂರು ಹಾಳಾಗಿದ್ದರಿಂದ, ಒಂದು ಹೊಸ ಗ್ರಾಮವನ್ನು ಸ್ಥಾಪಿಸಿ, ಅಲ್ಲಿಗೆ ಹಳೆಯ ಗ್ರಾಮದಿಂದ ವಾಸು

1. *EC*, VI, Kd. 91.
2. *SII*, IX (ii) No. 514.
3. *EC*, X, Mb. 238.
2. *EC*, IX, Ng. 5.
5. *SII*, IX (ii) No. 662.
6. *EC*, VIII, Tl. 103.

ದೇವರ ವಿಗ್ರಹವನ್ನು ಹೊಸ ಗ್ರಾಮದಲ್ಲಿ ಕಟ್ಟಲಾಗಿದ್ದ ದೇವಸ್ಥಾನಕ್ಕೆ ವರ್ಗಾಯಿಸ ಲಾಯಿತು. ಇದಕ್ಕೆ ಆವಶ್ಯಕವಾದ ಹಣಕ್ಕೆ ಪೊಸನ (ಹಾಸನ) ಗ್ರಾಮದ ಅರಮನೆಯ ಖಜಾನೆಯಿಂದ ೧೨೦ ಗದ್ಯಾಣಗಳ ದಾನವನ್ನು ಮತ್ತು ಬಾಗವಾದಿ ಗ್ರಾಮದ ಬೇಹುಗಾರ ನರಸಿಂಗ ಸಂಗ್ರಹಿಸಿದ ೫೦ ಗದ್ಯಾಣಗಳನ್ನು ಪಡೆಯಲಾಯಿತು. ಬೇಹುಗಾರ ಅದಕ್ಕಾಗಿ ಹಣ ಸಂಗ್ರಹಿಸಲು, ಹೊಸ ಗ್ರಾಮ ಮತ್ತು ದೇವಸ್ಥಾನವನ್ನು ಕಟ್ಟಲು ಮಾಡಿದ ಸೇವೆಗೆ, ಗೊರೂರು ಮಹಾಜನರು ದೇವಸ್ಥಾನದಲ್ಲಿ ಸೇರಿ, ಅವನ ಸೌಖ್ಯಕ್ಕೆ ಪ್ರಾರ್ಥನೆ ಮಾಡಿ ಆ ಗ್ರಾಮದ ನದಿಯ ದಡದಲ್ಲಿ ಅವನಿಗೆ ಸ್ವಲ್ಪ ತರೀಭೂಮಿಯನ್ನು ದಾನಮಾಡಿದರು.[1]

(೨) ಕ್ರಿ.ಶ. ೧೫೩೪ ರಲ್ಲಿ, ಕುಡಲೂರು ಮತ್ತು ಮಳಲೂರಿನ (ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ) ಹೆಬ್ಬಾರುವ ಬ್ರಾಹ್ಮಣರು, ಆ ಗ್ರಾಮಗಳ ಗೌಡ ಪ್ರಜೆಗಳ ಅನುಮತಿಯಿಂದ ಸ್ಥಾನಿಕ ನಾರಾಯಣಯ್ಯನಿಗೆ ತಿರುಮಲದೇವರ ಸೇವೆಗೆ, ಹಲವು ತೆರಿಗೆಗಳೊಡನೆ ಭೂಮಿಯನ್ನು ಕೊಟ್ಟರು.[2]

(೩) ಕ್ರಿ.ಶ. ೧೫೫೫ ರ ಒಂದು ಶಾಸನವು ಅರಕಲಗೂಡು ತಾಲ್ಲೂಕು ಶಿವಪುರದ ಮಹಾಜನರು (ಅರಕಲಗೂಡು ತಾಲ್ಲೂಕಿನ ಮಳಿ ಪಟ್ಟಣ) ದೇವಸ್ಥಾನದ ಬ್ರಾಹ್ಮಣ ಸೇವಕರು ತರೀಕಲ್ ಗ್ರಾಮವನ್ನು ಅನುಭವಿಸಲು ಮಾಡಿದ ಒಪ್ಪಂದವನ್ನು ದಾಖಲೆ ಮಾಡಿದೆ. ಆ ಗ್ರಾಮವನ್ನು ಉಲಮೇಶ್ವರ ದೇವಸ್ಥಾನದ ದೇವರಿಗೆ ನೈವೇದ್ಯ ಮತ್ತು ಇತರ ಸೇವೆಗೆ ದಾನ ಮಾಡಲಾಯಿತು.[3]

(೪) ಕ್ರಿ.ಶ. ೧೫೯೧ ರಲ್ಲಿ ಅರುಳಾಲ ಪೆರುಮಾಳ್ ದೇವಸ್ಥಾನದ ಪಾರುಪತ್ಯ ಗಾರರಲ್ಲೊಬ್ಬರಾದ ಎಟ್ಟೂರು ತಿರುಮಲ್ಲೈ ಕುಮಾರ ತಾತಾಚಾರ್ಯರ ನಿಯೋಗಿ ವಿಶ್ವ ಪಂಡಿತರು, ಆ ದೇವಸ್ಥಾನದಲ್ಲಿ, ಮಾರ್ಗಶಿರಮಾಸದಲ್ಲಿ ತಿರುವಧ್ಯಾನಂ–ಉಡೈಯ್ಯವಂ ಶಿವಪ್ಪ ಮತ್ತು ಉಲಗಮುಂಡ–ಪೆರುವಯನ್ ಶಿವಪ್ಪ ಉತ್ಸವಗಳನ್ನು ನಡೆಸಲು ಭೂಮಿಯನ್ನು ದಾನಮಾಡಿದರು.[4]

ಆಡಳಿತ ಕ್ಷೇತ್ರ : ಅಗ್ರಹಾರದಲ್ಲಿ ಗಡಿ ವಿವಾದಗಳನ್ನು ತೀರ್ಮಾನಿಸುವುದು ಮತ್ತು ಅಗ್ರಹಾರ ಗ್ರಾಮಗಳ ನಡುವೆ ಉಂಟಾಗಬಹುದಾದ ಗಡಿ ವಿವಾದಗಳನ್ನು ತೀರ್ಮಾನಿಸುವುದು ಮಹಾಜನರ ಆಡಳಿತಕ್ಕೆ ಸಂಬಂಧಪಟ್ಟ ಒಂದು ಮುಖ್ಯ ಕರ್ತವ್ಯ ವಾಗಿತ್ತು. ಮಹಾಜನರು ಭೂ ವಿನಿಮಯವನ್ನು ಮಾಡುತ್ತಿದ್ದರು. ಇವಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು—

---

1. *MAR*, 1936, No. 5.
2. *EC*, IX, Nl. 31.
3. *MAR*, 1940, No. 16.
4. 421 of 1919.

(೪) ಕ್ರಿ. ಶ. ೧೫೨೧ ರಲ್ಲಿ, ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ವಿಷ್ಣುಸಮುದ್ರ ಅಗ್ರಹಾರದ ಮಹಾಜನರು, ಜನಾರ್ಧನ ದೇವರಿಗೆ ಸ್ವಲ್ಪ ತರಿ ಭೂಮಿಯನ್ನು ದಾನಮಾಡಿದರು.[1]

(೫) ಕ್ರಿ.ಶ. ೧೫೨೩ ರಲ್ಲಿ ಹೊಸಪೇಟೆ ತಾಲ್ಲೂಕಿನ ಕುರಿಯಕುಪ್ಪೆ ಅಗ್ರಹಾರದ (ಅನಂತಸೇತು) ಮಹಾಜನರು, ವಿರೂಪಾಕ್ಷದೇವರ ಪೂಜೆಗೆ ಒಂದು ತೋಟವನ್ನು ದಾನಮಾಡಿದರು.[2]

(೬) ಕ್ರಿ. ಶ. ೧೫೨೪ ರಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕು ಪ್ರತಾಪದೇವರಾಯಪುರದ ಮಹಾಜನರು ರಾಮಚಂದ್ರದೇವರ ನೈವೇದ್ಯಕ್ಕೆ ಮತ್ತು ದೀಪಾರಾಧನೆಗೆ ಭೂಮಿಯನ್ನು ದಾನಮಾಡಿದರು.[3]

(೭) ಕ್ರಿ.ಶ. ೧೫೪೯ ರಲ್ಲಿ, ಮಂಡ್ಯ ಜಿಲ್ಲೆಯ ಭಟ್ಟರತ್ನಾಕರದ (ನಾಗಮಂಗಲ) ಮಹಾಜನರು ವೀರಭದ್ರ ದೇವರಿಗೆ ಪ್ರತಿವರ್ಷವೂ ಆ ದೇವಸ್ಥಾನಕ್ಕೆ ಸಲ್ಲುತ್ತಿದ್ದ ಮೊದಲ ಐದು " ಪಣ "ವನ್ನು ದಾನ ಮಾಡಿದರು.[4]

(೮) ಕ್ರಿ.ಶ. ೧೫೫೬ ರಲ್ಲಿ ಬಳ್ಳಾರಿ ತಾಲ್ಲೂಕಿನ ಸೋಮ ಸಮುದ್ರ ಅಗ್ರಹಾರದ ಮಹಾಜನರು ಆ ಗ್ರಾಮದ ಲಕ್ಷ್ಮೀನಾರಾಯಣ ದೇವರ ಸೇವೆಗೆ ಭೂಮಿಯನ್ನು ದಾನಮಾಡಿದರು.[5]

(೯) ಕ್ರಿ.ಶ. ೧೫೫೦ ರಲ್ಲಿ, ಆರಗ ರಾಜ್ಯದ ಐವತ್ತು ನಾಡಿನ ಬೆಳ್ಗೊಡ್ ಅಗ್ರಹಾರದ ಮಹಾಜನರು (ತೀರ್ಥಹಳ್ಳಿ ತಾಲ್ಲೂಕಿನ ನರಸಿಂಹಪುರ), ಲಕ್ಷ್ಮೀ ನಾರಾಯಣ ದೇವರ ನೈವೇದ್ಯಕ್ಕೆ ಭೂಮಿಯನ್ನು ದಾನಮಾಡಿ, ಅದೇ ದೇವಸ್ಥಾನದ ಛತ್ರಕ್ಕೆ ೧೪ ಗದ್ಯಾಣಗಳನ್ನು ಕೊಟ್ಟರು.[6]

ದೇವಸ್ಥಾನಗಳಲ್ಲಿ ಸೇವೆಗೆ ಮಹನೀಯರ ಕೊಡುಗೆಗಳನ್ನು ಸ್ವೀಕರಿಸುವುದು ಅಥವಾ ಸತ್ರ ಮತ್ತು ಮಠಗಳನ್ನು ನಡೆಸಿಕೊಂಡು ಹೋಗಲು ಸಾರ್ವಜನಿಕ ದತ್ತಿಗಳನ್ನು ಸ್ಥಳೀಯ ಮಹಾಜನರ ಸಂರಕ್ಷಣೆಗೆ ವಹಿಸಿದ ಅನೇಕ ನಿದರ್ಶನಗಳಿವೆ. ದೇವಾಲಯಗಳನ್ನು ಕಟ್ಟಲು ಮಹಾಜನರು ಭೂಮಿಯನ್ನು ದಾನ ಮಾಡುತ್ತಿದ್ದರು. ಈ ಕೆಳಗೆ ಕೊಟ್ಟಿರುವ ಶಾಸನಗಳು ಇವುಗಳಿಗೆ ಸಾಕ್ಷಿಯಾಗಿವೆ.

(೧) ಕ್ರಿ.ಶ. ೧೪೬೬ ರಲ್ಲಿ ಹಳೆಯ ಗ್ರಾಮವಾದ ಗೊರೂರು ಹಾಳಾಗಿದ್ದ ರಿಂದ, ಒಂದು ಹೊಸ ಗ್ರಾಮವನ್ನು ಸ್ಥಾಪಿಸಿ, ಅಲ್ಲಿಗೆ ಹಳೆಯ ಗ್ರಾಮದಿಂದ ವಾಸು

1. *EC*, VI, Kd. 91.
2. *SII*, IX (ii) No. 514.
3. *EC*, X, Mb. 238.
4. *EC*, IX, Ng. 5.
5. *SII*, IX (ii) No. 662.
6. *EC*, VIII, Tl. 103.

ದೇವರ ವಿಗ್ರಹವನ್ನು ಹೊಸ ಗ್ರಾಮದಲ್ಲಿ ಕಟ್ಟಲಾಗಿದ್ದ ದೇವಸ್ಥಾನಕ್ಕೆ ವರ್ಗಾಯಿಸಲಾಯಿತು. ಇದಕ್ಕೆ ಆವಶ್ಯಕವಾದ ಹಣಕ್ಕೆ ಪೊಸನ (ಹಾಸನ) ಗ್ರಾಮದ ಅರಮನೆಯ ಖಜಾನೆಯಿಂದ ೧೨೦ ಗದ್ಯಾಣಗಳ ದಾನವನ್ನು ಮತ್ತು ಬಾಗವಾದಿ ಗ್ರಾಮದ ಬೇಹುಗಾರ ನರಸಿಂಗ ಸಂಗ್ರಹಿಸಿದ ೫೦ ಗದ್ಯಾಣಗಳನ್ನು ಪಡೆಯಲಾಯಿತು. ಬೇಹುಗಾರ ಆದಕ್ಕಾಗಿ ಹಣ ಸಂಗ್ರಹಿಸಲು, ಹೊಸ ಗ್ರಾಮ ಮತ್ತು ದೇವಸ್ಥಾನವನ್ನು ಕಟ್ಟಲು ಮಾಡಿದ ಸೇವೆಗೆ, ಗೊರೂರು ಮಹಾಜನರು ದೇವಸ್ಥಾನದಲ್ಲಿ ಸೇರಿ, ಅವನ ಸೌಖ್ಯಕ್ಕೆ ಪ್ರಾರ್ಥನೆ ಮಾಡಿ ಆ ಗ್ರಾಮದ ನದಿಯ ದಡದಲ್ಲಿ ಅವನಿಗೆ ಸ್ವಲ್ಪ ತರೀಭೂಮಿಯನ್ನು ದಾನಮಾಡಿದರು.[1]

(೨) ಕ್ರಿ.ಶ. ೧೫೩೪ ರಲ್ಲಿ, ಕುಡಲೂರು ಮತ್ತು ಮಳಲೂರಿನ (ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ) ಹೆಬ್ಬಾರುವ ಬ್ರಾಹ್ಮಣರು, ಆ ಗ್ರಾಮಗಳ ಗೌಡ ಪ್ರಜೆಗಳ ಅನುಮತಿಯಿಂದ ಸ್ಥಾನಿಕ ನಾರಾಯಣಯ್ಯನಿಗೆ ತಿರುಮಲದೇವರ ಸೇವೆಗೆ, ಹಲವು ತೆರಿಗೆಗಳೊಡನೆ ಭೂಮಿಯನ್ನು ಕೊಟ್ಟರು.[2]

(೩) ಕ್ರಿ.ಶ. ೧೫೫೫ ರ ಒಂದು ಶಾಸನವು ಅರಕಲಗೂಡು ತಾಲ್ಲೂಕು ಶಿವಪುರದ ಮಹಾಜನರು (ಅರಕಲಗೂಡು ತಾಲ್ಲೂಕಿನ ಮಳಿ ಪಟ್ಟಣ) ದೇವಸ್ಥಾನದ ಬ್ರಾಹ್ಮಣ ಸೇವಕರು ತರೀಕಲ್ ಗ್ರಾಮವನ್ನು ಅನುಭವಿಸಲು ಮಾಡಿದ ಒಪ್ಪಂದವನ್ನು ದಾಖಲೆ ಮಾಡಿದೆ. ಆ ಗ್ರಾಮವನ್ನು ಉಲಮೇಶ್ವರ ದೇವಸ್ಥಾನದ ದೇವರಿಗೆ ನೈವೇದ್ಯ ಮತ್ತು ಇತರ ಸೇವೆಗೆ ದಾನ ಮಾಡಲಾಯಿತು.[3]

(೪) ಕ್ರಿ.ಶ. ೧೫೯೧ ರಲ್ಲಿ ಅರುಳಾಲ ಪೆರುಮಾಳ್ ದೇವಸ್ಥಾನದ ಪಾರುಪತ್ಯಗಾರರಲ್ಲೊಬ್ಬರಾದ ಎಟ್ಟೂರು ತಿರುಮಲೈ ಕುಮಾರ ತಾತಾಚಾರ್ಯರ ನಿಯೋಗಿ ವಿಶ್ವ ಪಂಡಿತರು, ಆ ದೇವಸ್ಥಾನದಲ್ಲಿ, ಮಾರ್ಗಶಿರಮಾಸದಲ್ಲಿ ತಿರುವಧ್ಯಾನಂ–ಉಡೈಯ್ಯವಂ ಶಿವಪ್ಪ ಮತ್ತು ಉಲಗಮುಂಡ–ಪೆರುವಯನ್ ಶಿವಪ್ಪ ಉತ್ಸವಗಳನ್ನು ನಡೆಸಲು ಭೂಮಿಯನ್ನು ದಾನಮಾಡಿದರು.[4]

ಆಡಳಿತ ಕ್ಷೇತ್ರ : ಅಗ್ರಹಾರದಲ್ಲಿ ಗಡಿ ವಿವಾದಗಳನ್ನು ತೀರ್ಮಾನಿಸುವುದು ಮತ್ತು ಅಗ್ರಹಾರ ಗ್ರಾಮಗಳ ನಡುವೆ ಉಂಟಾಗಬಹುದಾದ ಗಡಿ ವಿವಾದಗಳನ್ನು ತೀರ್ಮಾನಿಸುವುದು ಮಹಾಜನರ ಆಡಳಿತಕ್ಕೆ ಸಂಬಂಧಪಟ್ಟ ಒಂದು ಮುಖ್ಯ ಕರ್ತವ್ಯವಾಗಿತ್ತು. ಮಹಾಜನರು ಭೂ ವಿನಿಮಯವನ್ನು ಮಾಡುತ್ತಿದ್ದರು. ಇವಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು—

---

1. *MAR*, 1936, No. 5.
2. *EC*, IX, Nl. 31.
3. *MAR*, 1940, No. 16.
4. 421 of 1919.

(೧) ವಿಜಯನಗರ ಕಾಲಕ್ಕೆ ಮುಂಚೆ ಅಸ್ತಿತ್ವದಲ್ಲಿದ್ದ ಹರಿಹರಪುರ ಅಥವಾ ಕೆಲ್ಲಂಗೆರೆ ಅಗ್ರಹಾರವು ವಿಜಯನಗರ ಕಾಲದಲ್ಲೂ ಮುಂದುವರಿಯಿತು.[1] ಕ್ರಿ.ಶ. ೧೫೯೭ ರಲ್ಲಿ ಆ ಸ್ಥಳದ ಮಹಾಜನರು ಅಣ್ಣಯ್ಯನಿಗೆ ಮಾರಿದ್ದ ಸೂಳೆಯ ಕೆರೆ ಗ್ರಾಮದ ಭೂಮಿಯ ವಿವಾದವನ್ನು ತೀರ್ಮಾನಿಸುವುದಾಗಿ ನಿಯಮ ಮಾಡಿದರು.[2] ಅದೂ ಅಲ್ಲದೆ, ಕ್ರಿ.ಶ. ೧೩೧೮ ರಲ್ಲಿ ಅವರು ರಾಮಣ್ಣನೆಂಬುವನಿಗೆ ಹಲವು ಅಂಶಗಳನ್ನೊಳಗೊಂಡ ಒಂದು ಶಾಸನವನ್ನು ಕೊಟ್ಟಿದ್ದರು. ಇದರ ಪ್ರಕಾರ ಆ ಗ್ರಾಮದಲ್ಲಿ ಹರಿಯಣ್ಣ ಮತ್ತು ಇತರರು ಉಸ್ತುವಾರಿ ನಡೆಸಲು ಸಾಧ್ಯವಾಗದ ಮತ್ತು ಮೊದಲು ನಿಗದಿ ಪಡಿಸಿದ್ದ ಬಾಡಿಗೆ ಮತ್ತು ಇತರ ತೆರಿಗೆಗಳನ್ನು ಮಹಾಜನರಿಗೆ ವರ್ಗಾಯಿಸಲಾಯಿತು. ಆ ಗ್ರಾಮವನ್ನು ರಾಮಣ್ಣನಿಂದ ೮ ಗದ್ಯಾಣಗಳಿಗೆ ಪಡೆದರು. ರಾಮಣ್ಣನು ಪುಷ್ಯಮಾಸದಲ್ಲಿ "ಕಟ್ಟುಗೆ" ಮತ್ತು "ಕಾಣಿಕೆ"ಗಳಿಗೆ ಬ್ರಾಹ್ಮಣರಿಗೆ ವರ್ಷಕ್ಕೆ ಒಂದು "ಗದ್ಯಾಣ"ವನ್ನು ಕೊಡಬೇಕೆಂದೂ ಮತ್ತು ಆತನು ಭೂಮಿ ಮೇಲುಸ್ತುವಾರಿಯನ್ನು ಹೊಂದಿರಬೇಕೆಂದೂ ನಿರ್ಧರಿಸಲಾಯಿತು. ಅರಮನೆಯು ವಿಧಿಸಿದ ತೆರಿಗೆಗಳನ್ನು ಬ್ರಾಹ್ಮಣರು ಕೊಡಬೇಕೆಂದು ಮಾಡಲಾಯಿತು. ಆ ಭೂಮಿಯನ್ನು ರಾಮಣ್ಣನು ಭೋಗ್ಯ ಮಾಡಬಹುದಾಗಿಯೂ ಅಥವಾ ಕ್ರಯ ಮಾಡಬಹುದಾಗಿಯೂ ಅಥವಾ ಉಚಿತವಾಗಿ ಕೊಟ್ಟುಬಿಡಬಹುದಾಗಿಯೂ ಆ ಶಾಸನದಲ್ಲಿ ನಿಯಮ ಮಾಡಲಾಯಿತು. ಇದಕ್ಕೆ ಸಂಬಂಧಪಟ್ಟ ವಿವಾದವನ್ನು ಬ್ರಾಹ್ಮಣರು ತೀರ್ಮಾನಿಸಬೇಕೆಂದು ಮತ್ತು ರಾಮಣ್ಣನಿಗೆ ಕೊಟ್ಟ ಭೂಮಿಯನ್ನು ಅವನು ವಂಶಪಾರಂಪರ್ಯವಾಗಿ ಅನುಭವಿಸತಕ್ಕದ್ದೆಂದೂ ತಿಳಿಸಲಾಯಿತು.[3]

(೨) ಕ್ರಿ.ಶ. ೧೩೪೧ ರಲ್ಲಿ ಉದ್ಭವ ನರಸಿಂಹಪುರದ (ಬೇಲೂರು) ಮಹಾಜನರು ತಮ್ಮಲ್ಲಿಯೆ ಒಪ್ಪಿ ಮಾಧವ, ಗೋಪಾಲ ಮತ್ತು ಲಕ್ಷ್ಮೀನಾರಾಯಣ ದೇವಸ್ಥಾನಕ್ಕೆ ಸೇರಿದ ಭೂಮಿಯನ್ನು, ಇತರ ಭೂಮಿಗೆ ವಿನಿಮಯ ಮಾಡಿಕೊಂಡು ಒಂದು ಶಾಸನವನ್ನು ಮಾಡಿದರು.[4]

(೩) ಕ್ರಿ.ಶ. ೧೩೭೪ ರಲ್ಲಿ ಹೊನ್ನಾವಳಿಯ ಸಮಸ್ತ ಮಹಾಜನರು, ಬೊಮ್ಮಗೌಡ ಮತ್ತು ಇತರ ಗೌಡರಿಗೆ ಮತ್ತು ಹಲುಕೂರಿನ ಸಮಸ್ತ ಗೌಡ ಪ್ರಜೆಗಳಿಗೆ ಭೂ ವಿನಿಮಯ ಮಾಡಿಕೊಂಡು ಒಂದು ಶಾಸನವನ್ನು ಮಾಡಿದರು. ಇದರ ಪ್ರಕಾರ ಹೊನ್ನಾವಳಿಯ ಪಾಳ್ಯವಾಗಿದ್ದ ಭಗವತಿ ಘಟ್ಟದ ಸ್ವಲ್ಪ ಭೂಮಿಯನ್ನು ಹಲುಕೂರಿನ ಪಾಳ್ಯ ತುಲಿಕೆಯ ಹಳ್ಳಿಗೆ ಸೇರಿದ ಬುಡನಹಾಳು ಪ್ರದೇಶದಲ್ಲಿದ್ದ ಅದೇ ವಿಸ್ತೀರ್ಣವುಳ್ಳ ಭೂಮಿಗೆ ವಿನಿಮಯ ಮಾಡಿಕೊಂಡರು.[5]

---

1. *EC*, V, Ak. 115.
2. *EC*, V, Ak. 120.
3. *EC*, V, Ak. 113.
4. *EC*, IV, Ng. 40.
5. *EC*, V, Ak. 63.

## ಕಟ್ಟಡ ನಿರ್ಮಾಣದ ಚಟುವಟಿಕೆಗಳು

(೧) ಮಹಾಜನ ಸಭೆಯು ದೇವಸ್ಥಾನಗಳು ಮತ್ತು ಕೆರೆಗಳೆ ಮೊದಲಾದ ಲೋಕೋಪಯೋಗಿ ಕೆಲಸಗಳನ್ನು ನಿರ್ವಹಿಸುತ್ತಿದ್ದಿತು. ವಿಷ್ಣುಸಮುದ್ರ (ಕೆರೆಯ ಸಂತೆ) ಅಗ್ರಹಾರದ ಸಭೆಯು ಜನಾರ್ಧನ ದೇವರ ದೇವಾಲಯದ ಮುಂದೆ ಒಂದು ಭೋಗ ಮಂಟಪವನ್ನು ನಿರ್ಮಾಣ ಮಾಡಿತು.[1]

(೨) ಕ್ರಿ.ಶ. ೧೪೧೦ ರ ಒಂದು ಶಾಸನ, ಹರಿಹರ ಕ್ಷೇತ್ರದಲ್ಲಿ ವಾಸವಾಗಿದ್ದ ಬ್ರಾಹ್ಮಣರು ತಮ್ಮ ಸ್ವಂತ ವೆಚ್ಚದಲ್ಲಿ ಹರಿದ್ರಾ ನದಿಗೆ ಒಂದು ಸೇತುವೆಯನ್ನು ಕಟ್ಟಿಸಿ ನೀರಾವರಿ ಸೌಕರ್ಯಗಳನ್ನು ಒದಗಿಸಿದರು.[2] ಅದೇ ವರ್ಷದ ಹರಿಹರದ ಒಂದು ಶಾಸನ ಹೆಚ್ಚಿನ ವಿವರಗಳನ್ನು ಕೊಡುತ್ತದೆ. ಇದರ ಪ್ರಕಾರ ಮಹಾಜನರು ತಮ್ಮ ಸ್ವಂತ ಖರ್ಚಿನಲ್ಲಿ ಹರಿದ್ರ ನದಿಗೆ ಒಂದು ಸೇತುವೆಯನ್ನು ಕಟ್ಟಿ, ಹರಿಹರಕ್ಕೆ ಒಂದು ಕಾಲುವೆ ಯನ್ನು ಬಿಟ್ಟರು. ದೇವರಾಯನು, ಹರಿಹರ ದೇವರು ಮತ್ತು ಹರಿಹರ ಕ್ಷೇತ್ರದಲ್ಲಿದ್ದ ಮಹಾಜನಗಳ ನಡುವೆ, ಒಂದು ಒಪ್ಪಂದ ಮಾಡಿದನು. ಇದರ ಪ್ರಕಾರ, ಕಾಲುವೆ ಯಿಂದ ನೀರು ಹಾಯಿಸಿದ ಭೂಮಿಯಲ್ಲಿ ಹರಿಹರ ದೇವರಿಗೆ ಮೂರನೆಯ ಎರಡು ಭಾಗ ಮತ್ತು ತಮ್ಮ ವೆಚ್ಚದಲ್ಲೆ ಸೇತುವೆ ಕಟ್ಟಿಸಿದ ಮಹಾಜನರಿಗೆ ತೆರಿಗೆ ಮಾಫಿ ಮಾಡಿ ಮೂರನೆಯ ಒಂದು ಭಾಗ ಭೂಮಿ ಸಲ್ಲತಕ್ಕದ್ದೆಂದು ನಿಯಮ ಮಾಡಿದನು. ಮಹಾ ಜನರು ಈ ನಿರ್ಮಾಣವನ್ನು ಪೂರೈಸಿದುದಕ್ಕಾಗಿ ಬುಲ್ಲಪ್ಪನಿಗೆ ತಮ್ಮ ಪಾಲಿನಿಂದ ಮೂರು ಖಂಡುಗ ಭೂಮಿ ಕೊಟ್ಟರು. ಒಪ್ಪಂದದ ಪ್ರಕಾರ ವಾರ್ಷಿಕ ರಿಪೇರಿ ಮತ್ತು ಇತರವೆಚ್ಚಗಳನ್ನು ಕ್ರಮವಾಗಿ ಇವರು ಮೂರನೆಯ ಎರಡು ಮತ್ತುಮೂರನೆಯ ಒಂದರ ಪ್ರಮಾಣದಲ್ಲಿ ವಹಿಸತಕ್ಕದ್ದೆಂದು ತೀರ್ಮಾನಿಸಲಾಯಿತು.[3] ಈ ಶಾಸನದಿಂದ ಹಲವು ಅಂಶಗಳನ್ನು ತಿಳಿಯಬಹುದು: (ಅ) ಮಹಾಜನರು ಸಂಸ್ಥಾರೂಪವಾಗಿ ವರ್ತಿಸುತ್ತಿದ್ದರು. (ಆ) ಅವರು ಲೋಕೋಪಯೋಗಿ ಕೆಲಸಗಳನ್ನು ಕೈಗೊಳ್ಳುತ್ತಿದ್ದರು. (ಇ) ನಿರ್ಮಾಣದ ಕಾರ್ಯವನ್ನು ಕೈಗೊಂಡವರಿಗೆ ತಮ್ಮ ವೆಚ್ಚದಲ್ಲಿ ಭೂಮಿಯನ್ನು ಕೊಟ್ಟು ಮರ್ಯಾದೆ ಮಾಡುತ್ತಿದ್ದರು. ಈ ನಿದರ್ಶನದಲ್ಲಿ ಶಾಸನವನ್ನು ಬರೆದವನಿಗೂ ಭೂಮಿ ಯನ್ನು ದಾನ ಮಾಡಿದರು.

(೩) ಕ್ರಿ. ಶ. ೧೫೨೧ ರಲ್ಲಿ ನಾಗಮಂಗಲದ ಸಮಸ್ತ ಮಹಾಜನರು ವಿಠ್ಠಣ್ಣ ನೆಂಬುವನಿಗೆ, ಹೊಸಹಳ್ಳಿಗೆ ಪೂರ್ವಕ್ಕೆ ನದಿಯ ಹತ್ತಿರ ಕೆರೆಯೊಂದನ್ನು ಕಟ್ಟಲು ಒಂದು ಓಲೆಯನ್ನು ಕೊಟ್ಟರು. ಕೆರೆಯನ್ನು ಕಟ್ಟಿದುದಕ್ಕೆ, ಅವರು ವಿಠ್ಠಣ್ಣನಿಗೆ "ಕೆರೆಗೊಡಂಗೆ"ಯಾಗಿ ಮಾಯಿದೇವಿ ಕೆರೆಯ ಹತ್ತಿರ ಭೂಮಿಯನ್ನು ಮತ್ತು ತೂಬಿನ ಕೆಳಗಡೆ ಇದ್ದ ಹೊಲಗಳಲ್ಲಿ ಒಂದು ಭಾಗವನ್ನು ಕೊಟ್ಟರು.[4]

---

1. *EC*, VI, Kd. 91.
2. *EC*, VIII, Tl. 196.
3. *EC*, XI Dg. 23 and 29
4. *EC*, IV, Ng. 82.

(ಳ) ಅನಂತಪುರದ ಒಂದು ಶಾಸನದ ಪ್ರಕಾರ, ಕ್ರಿ. ಶ. ೧೫೩೮ ರಲ್ಲಿ, ನಾಗರಕೆರೆ ಮಹಾಜನರು ಒಂದು ಕಾಲುವೆ ಮತ್ತು ಒಂದು ಕೆರೆಯನ್ನು ದಾನಮಾಡಿದರು.[1]

**ಮಹಾಜನರು ಮತ್ತು ಇತರರಿಗೆ ಇದ್ದ ಅಭಿಮಾನ:** ಅನೇಕ ಶಾಸನಗಳು ಮಹಾಜನರು ಮತ್ತು ಇತರ ಜನರಿಗೆ ಇದ್ದ ಅಭಿಮಾನವನ್ನು ದೃಢೀಕರಿಸುತ್ತವೆ. ಕ್ರಿ.ಶ. ೧೩೬೮ ರ ಚಾಮರಾಜನಗರದ ಒಂದು ಶಾಸನ ಬ್ರಾಹ್ಮಣರು ಮತ್ತು ಇತರ ಕೋಮಿನವರಿಗೆ ಇದ್ದ ಅಭಿಮಾನವನ್ನು ತಿಳಿಸುತ್ತದೆ. ಉಯ್ಯನಪಳ್ಳಿಯ ಹಲವು ಗೌಡರು, ಕೇಶವಪುರ ಅಥವಾ ನಗರ ಮತ್ತು ಇತರ ಅನೇಕ ನಗರಗಳ ಬ್ರಾಹ್ಮಣರು ಹರವನಹಳ್ಳಿಯ ಅನಿತೇಶ್ವರ ದೇವರ ಸೇವೆಗೆ, ಮಾತೃಹಳ್ಳಿಯ ತೆರಿಗೆಗಳು ಮತ್ತು ಭೂಮಿಯನ್ನು ಪ್ರತಿ ಸಂಸಾರದಿಂದಲೂ ದಾನ ಮಾಡಿತು. ಈ ಶಾಸನದ ಪ್ರಕಾರ ಅಧಿಕಾರಿ ಸಿರಿಯಣ್ಣನ ಸಮ್ಮುಖದಲ್ಲಿ ತಾವಾಗಿಯೆ ಒಪ್ಪಿ, ಅನಿತೇಶ್ವರ ದೇವರಿಗೆ, ನಾಣ್ಯ ಮತ್ತು ನೀರಿನ ಮೂಲಕ ದಾನಮಾಡಿದರು.[2] ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಒಂದು ಶಾಸನದ ಪ್ರಕಾರ ಕ್ರಿ.ಶ. ೧೪೦೪ ರಲ್ಲಿ, "ಮಹಾಸಾಮಂತಾಧಿಪತಿ" ಕುಡಲೂರು ಮಂಚಾರ್ಯನಾಯಕ, ಕೊಳಲನೂರು ಸ್ಥಳದ ಸಮಸ್ತ ಗೌಡ ಪ್ರಜೆಗಳೊಡನೆ ಸರ್ವಜ್ಞ ಭಾಸ್ಕರಪುರ (ಕೊಳುನಲೂರ್) ಅಗ್ರಹಾರವನ್ನು, ತಗ್ಗು ಪ್ರದೇಶದಲ್ಲಿ ಒಂದು ಕೆರೆಯೊಡನೆ ಉತೆನಹಳ್ಳಿಯನ್ನು ದಾನಮಾಡಿದನು.[3] ಕ್ರಿ.ಶ. ೧೪೦೮ ರಲ್ಲಿ ಆರಗ ಹದಿನೆಂಟು ಕಂಪಣಗಳ ಮತ್ತು ಮೂರು ಪಟ್ಟಣಗಳ ಸಮಸ್ತ ಗೌಡ ಪ್ರಜೆಗಳು ತಮ್ಮಲ್ಲೇ ಒಪ್ಪಿ ಸುರಳಿಗ್ರಾಮವನ್ನು ನಾಗಸಮುದ್ರ ಅಗ್ರಹಾರವೆಂದು ಪರಿವರ್ತಿಸಿ ಬ್ರಾಹ್ಮಣರಿಗೆ ದಾನ ಮಾಡಿದರು.[4] ಕ್ರಿ.ಶ. ೧೫೩೪ ರಲ್ಲಿ ಕೆಳಲೆನಾಡಿನ ಕುಡಲೂರು ಸ್ಥಳದ ಚಿಕ್ಕರೆ ಅಥವಾ ರಾಜರಾಜಚೋಳ ಚತುರ್ವೇದಿ ಮಂಗಳದ ತಿರುಮಲ ದೇವಸ್ಥಾನವನ್ನು, ರಾಜನ ಖಜಾಂಚಿ ತಿಮ್ಮಪ್ಪಯ್ಯನ ಅಪ್ಪಣೆ ಮೇರೆಗೆ ವೇದಗಳ ವಿದ್ವಾಂಸ ನಾರಾಣಯ್ಯನಿಗೆ ಕೊಡಲಾಯಿತು. ಕುಡಲೂರು ಮತ್ತು ಮಲತೂರಿನ ಸಮಸ್ತ ಹೆಬ್ಬಾರವ ಬ್ರಾಹ್ಮಣರು ಆ ಗ್ರಾಮಗಳ ಗೌಡ ಪ್ರಜೆಗಳ ಸಮ್ಮತಿಯಿಂದ, ದೇವಸ್ಥಾನದ ಸ್ಥಾನಿಕ ನಾರಾಯಣಯ್ಯನಿಗೆ ತಿರುಮಲ ದೇವರ ಸೇವೆಗೆ ಅನೇಕ ತೆರಿಗೆಗಳ ಸಹಿತ ಭೂಮಿಯನ್ನು ಕೊಟ್ಟರು.[5]

**ಆರ್ಥಿಕ ಚಟುವಟಿಕೆಗಳು:** ಮಹಾಜನಸಭೆಗಳಿಗೆ ಭೂಕಂದಾಯದ ಪ್ರಶ್ನೆಗಳು ಮತ್ತು ಇತರ ತೆರಿಗೆಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ತೀರ್ಮಾನಿಸುವ ಅಧಿಕಾರವಿದ್ದಿತು. ಅವು ರಾಜ್ಯದ ವರಮಾನವನ್ನು ವಸೂಲಿಮಾಡಲು ಸರ್ಕಾರದ ನಿಯೋಗಿ

---

1. V. Rangacharya: *A Topographical List of the Inscriptions of the Madras presidency* (Collected till 1915) *with notes and references* (Madras, 1919), I Ap. 76.
2. *EC*, IV. Ch. 113.
3. *EC*, V, Ag, 52.
4. *EC*, VIII, Tl. 22.
5. *EC*, IX, Cp. 155.

ಗಳಾಗಿದ್ದುವು. ಅವುಗಳಿಗೆ ಹೊಸ ತೆರಿಗೆಗಳನ್ನು ಹಾಕುವ ಮತ್ತು ಹಳೆಯವನ್ನು ರದ್ದು ಮಾಡುವ ಅಲ್ಪ ಅಧಿಕಾರವಿದ್ದಿತು. ಆದರೆ ಸ್ಥಳೀಯ ಉದ್ದೇಶಗಳಿಗೆ ವಸೂಲು ಮಾಡುತ್ತಿದ್ದ ತೆರಿಗೆಗಳನ್ನು ಮಾತ್ರ ಮಾಫಿ ಮಾಡಬಹುದಾಗಿತ್ತು. ಸರ್ಕಾರ ಮಾಡುತ್ತಿದ್ದ ತೆರಿಗೆಗಳ ರಿಯಾಯಿತಿಯನ್ನು ಅಥವಾ ಹೊಸ ತೆರಿಗೆಗಳನ್ನು ವಿಧಿಸುವುದನ್ನು ಅಥವಾ ದೇವಸ್ಥಾನದ ಖರ್ಚಿಗೆ ಅವುಗಳನ್ನು ಕೊಡುತ್ತಿದ್ದುದನ್ನು ಸ್ಥಳೀಯ ಸಭೆಗೆ ತಿಳಿಸುತ್ತಿದ್ದಿತು. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು—

(೧) ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಒಂದು ಶಾಸನದ ಪ್ರಕಾರ ಕ್ರಿ. ಶ. ೧೪೦೦ ರಲ್ಲಿ, ... ಪಟ್ಟಣದ ಬ್ರಾಹ್ಮಣರು, ಸಾಂತಳಿಗೆ ನಾಡಿನಲ್ಲಿ ಹಾಲ ಮುತ್ತೂರ್ ಗ್ರಾಮವನ್ನು ಅದರ ಪಾಳ್ಯಗಳೊಡನೆ, ನಿಯೋಗಿಗಳ ಮೂಲಕ ೩೦೦ ವರಹಗಳಿಗೆ ಕೊಂಡು ಸಲ್ಲಿಸಬೇಕಾಗಿದ್ದ ಬಾಡಿಗೆ ಪಾವತಿಯನ್ನು ತಮ್ಮಲ್ಲೇ ಹಂಚಿಕೊಂಡರು.[1] (೨) ಕ್ರಿ. ಶ. ೧೪೮೯ ರಲ್ಲಿ, ಅದೇ ಕೊಪ್ಪತುಲೂರ್ ಅಗ್ರಹಾರದ ಮಹಾಜನರು ವಿದ್ಯನಾಥ ದೇವರಿಗೆ, ತೆರಿಗೆಗಳೊಡನೆ ಕಂದಾಯ ರಹಿತ ಭೂಮಿಯನ್ನು ದಾನ ಮಾಡಿದರು.[2] (೩) ಕ್ರಿ.ಶ. ೧೪೮೯ ರಲ್ಲಿ, ಬಳ್ಳಾರಿ ಜಿಲ್ಲೆಯ ಹಂಪನಹಾಳು ತಾಲ್ಲೂಕಿನ ರಾಜಬಾರನಹಳ್ಳಿ ಮಹಾಜನರು ಇತರ ಬ್ರಾಹ್ಮಣರಿಗೆ ಬಾಡಿಗೆರಹಿತ ಭೂಮಿಯನ್ನು ಕೊಟ್ಟರು.[3] (೪) ಅನಂತಪುರ ಜಿಲ್ಲೆಯ ಗೂಟಿ ತಾಲ್ಲೂಕಿನ ಪೆನ್ನ ಹೋಬಿಳಂ ಸ್ಥಳದ ಕ್ರಿ. ಶ. ೧೫೫೦ ರ ಒಂದು ಶಾಸನ, ಸದಾಶಿವರಾಯನು ಅನದಲೆ, ನಿಂಬೆಗಲು, ರಾಯಪನ ಹಳ್ಳಿ, ಕಲಿದೇವನ ಹಳ್ಳಿ, ಸಿರಿವರ, ರೇವಿನಾಯಕನ ಹಳ್ಳಿ, ಯರಗುದಿ, ತುಂಬೆಗನೂರು, ರಾಗನಹಾಳು, ತಾವರೆಗೊಳ, ಚಿಕಪೆಪಳಿ, ತಿಮ್ಮಾಪುರ, ಹೋತೂರು, ಬೆನಕನ ಹಳ್ಳಿ, ಅಂತರಸನಹಾಳು ಮತ್ತು ಉರುವಕೊಂಡೆ ಸೀಮೆಯ ಕಮಲಹಾಳು ಅಗ್ರಹಾರಗಳ ಮಹಾಜನರಿಗೆ ಹಲವು ತೆರಿಗೆಗಳಿಂದ ರಿಯಾಯಿತಿ ಕೊಟ್ಟನು.[4] (೫) ತಂಜಾವೂರು ಜಿಲ್ಲೆಯ ತಿರುಮಕ್ಕೊಟ್ಟೈ ಶಾಸನವೊಂದರ ಪ್ರಕಾರ, ರಾಜ್ಯವನ್ನು ರಕ್ಷಿಸಲು ಜಾರಿಯಲ್ಲಿದ್ದ ತೆರಿಗೆಗಳನ್ನು ಧಾನ್ಯ ಮತ್ತು ಹಣದ ರೂಪದಲ್ಲಿ ವಸೂಲಿ ಮಾಡುತ್ತಿದ್ದುದರ ಬದಲಾಗಿ, ಹಿಂದೆ ಇದ್ದ ತೆರಿಗೆಗಳನ್ನೇ ಧಾನ್ಯರೂಪವಾಗಿ ಸಂಗ್ರಹಿಸುವ ಪದ್ಧತಿಯನ್ನು ಊರ್ಜಿತಗೊಳಿಸಬೇಕೆಂದು ಪಳ್ಳಿಯೂರು ಮಹಾಜನರಿಗೆ ಅಪ್ಪಣೆ ಮಾಡಿದನು.[5] ಸರ್ಕಾರಕ್ಕೆ ಸಲ್ಲಬೇಕಾಗಿದ್ದ ಕಂದಾಯವನ್ನು ಸ್ಥಳೀಯ ಸಂಸ್ಥೆ ವಸೂಲು ಮಾಡುತ್ತಿದ್ದುದರಿಂದ ಅದರ ದಾಖಲೆ ಪುಸ್ತಕಗಳಲ್ಲಿ ಅವಶ್ಯಕವಾದ ಬದಲಾವಣೆಗಳನ್ನು ಮಾಡಲು ಸರ್ಕಾರ ಅದಕ್ಕೆ ಬದಲಾವಣೆಗಳನ್ನು ತಿಳಿಸಬೇಕಾಗಿದ್ದಿತು.

---

1 *EC*, VI, Kp. 35.
2. *EC*, VI, Kp. 26.
3. *SII*, IX (ii), No. 440.
4. *SII*, IX (ii), No. 663.
5. 259 of 1917.

(೬) ಶಿರುವಾಯಲ್ ಸಭೆ ದೇವರಿಗೆ ಸೇರಿದ "ಸರ್ವಮಾನ್ಯ" ಭೂಮಿಯನ್ನು ತೆರಿಗೆಗಳಿಂದ ವಿನಾಯಿತಿಗೊಳಿಸಿ ಇತರ ಭೂಮಿಯನ್ನು ತೆರಿಗೆ ಹಾಕಲು, ಸೇರಿಸಲು ತೀರ್ಮಾನಿಸಿತು.[1]

ಮಹಾಜನರು ನ್ಯಾಸಧಾರಿಗಳಾಗಿ ಕೆಲಸಮಾಡುತ್ತಿದರು. ಉದಾಹರಣೆಗೆ, ಕ್ರಿ.ಶ. ೧೩೩೦ರಲ್ಲಿ ಮಾರಿಹಳ್ಳಿ ಗಣಪತಿದೇವರ ನೈವೇದ್ಯಕ್ಕೆ ಮಲ್ಲಪ್ಪನೆಂಬುವನು ಅರ್ಧಖಂಡುಗ ಬತ್ತವನ್ನು ಬಿತ್ತಬಹುದಾದ ಭೂಮಿಯನ್ನು ದಾನಮಾಡಿದನು. ಮಹಾಜನರು ಆ ದಾನದ ಮೇಲ್ವಿಚಾರಣೆ ನೋಡಿಕೊಳ್ಳಬೇಕಾಗಿದ್ದಿತು.[2] ಇದೇ ರೀತಿ ಚಿನ್ನಪ್ಪನೆಂಬ ವರ್ತಕನ ಮಗ ರಾಚಪ್ಪ ಎರಡನೆ ಬುಕ್ಕನ ಕಾಲದಲ್ಲಿ ಕಲ್ಲೇದೇವರ ಸೇವೆಗೆ ಹತ್ತು ಕೊಳಗಗಳಷ್ಟು ಬಿತ್ತುವ ಒಣಭೂಮಿಯನ್ನು ದಾನಮಾಡಿ ಅದನ್ನು ಆ ಗ್ರಾಮದ ಮಹಾಜನರ ಹತೋಟಿಗೆ ಕೊಟ್ಟನು.[3] ಎರಡನೆ ದೇವರಾಯನ ಕಾಲದ ಕ್ರಿ.ಶ. ೧೪೩೦ ರ ಒಂದು ಶಾಸನ, ರಾಜನು ವರದರಾಜದೇವರಿಗೆ, ಹಲವು ತೆರಿಗೆಗಳನ್ನು ದಾನ ಮಾಡಿದ್ದನ್ನು ದಾಖಲೆಮಾಡಿದೆ. ವಗಟದ ಮಹಾಜನರು ಸೂರ್ಯಚಂದ್ರರಿರುವ ವರೆಗೆ[4] ಆ ದಾನದ ಷರತ್ತುಗಳನ್ನು ಪಾಲಿಸಬೇಕೆಂದು ತಿಳಿಸುತ್ತದೆ.

ಮಹಾಜನರು ಅಗ್ರಹಾರಗಳಲ್ಲಿ ತಮ್ಮ ಹತೋಟಿಯಲ್ಲಿದ್ದ ಭೂಮಿಯನ್ನು ಮಾರುವ ಅಥವಾ ದಾನಮಾಡುವ ಹಕ್ಕನ್ನು ಹೊಂದಿದ್ದರು. ಅವರು ಗ್ರಾಮದ ಪರವಾಗಿ ಭೂಮಿಯನ್ನು ಪಡೆಯಬಹುದಾಗಿದ್ದಿತು. ಅವರು ಭೂವಿನಿಮಯ ಮತ್ತು ಅದಕ್ಕೆ ಸಂಬಂಧಿಸಿದ ಒಪ್ಪಂದಗಳನ್ನು ಮಾಡಬಹುದಾಗಿದ್ದಿತು. ವ್ಯಕ್ತಿಗಳಿಗೆ ಭೂದಾನಮಾಡಬಹುದಾಗಿದ್ದಿತು. ಅಗ್ರಹಾರದ ಭೂಮಿಯನ್ನು ಪುನರ್ವಿಂಗಡಿಸ ಬಹುದಾಗಿತ್ತು. ಈ ಚಟುವಟಿಕೆಗಳಿಗೆ ಕೆಲವು ಉದಾಹರಣೆಗಳನ್ನು ಕೊಡಬಹುದು—

(೧) ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಒಂದು ಶಾಸನದ ಪ್ರಕಾರ, ಕ್ರಿ. ಶ. ೧೪೨೧ ರಲ್ಲಿ ಸಾಂತಳಿಗೆ ನಾಡಿನ ಹಿರಿಯ ಹೊಳತೂರು ಮಹಾಜನರು ಹಂಗರ ಬಯಲಿನಲ್ಲಿ, ಪಂಚಾಯಿತಿದಾರರು ತೀರ್ಮಾನಿಸಿದ ೪೮ "ಹಣ" ಬೆಲೆಗೆ ಸ್ವಲ್ಪ ಭೂಮಿ ಯನ್ನು ಮಾರಿದರು.[5] (೨) ತಿರುಪೆರುಂದುರೈ ಗ್ರಾಮಸಭೆ ಅದೇ ಗ್ರಾಮದ ದೇವಸ್ಥಾನಕ್ಕೆ ಎರಡು ಜಮೀನನ್ನು ದಾನಮಾಡಿದ್ದಿತು.[6] (೩) ಹಾಸನಜಿಲ್ಲೆ ಅರಸೀಕೆರೆ ತಾಲ್ಲೂಕಿನ ಒಂದು ಶಾಸನದ ಪ್ರಕಾರ, ಕ್ರಿ. ಶ. ೧೩೭೪ ರಲ್ಲಿ ಹೊನ್ನಾವಳಿಯ ಸಮಸ್ತ ಗೌಡ ಪ್ರಜೆಗಳು ಈ ಮುಂದೆ ಕಂಡಂತೆ ಭೂಮಿಯನ್ನು ವಿನಿಮಯಮಾಡಿಕೊಂಡರು.

1. 178 of 1926.
2. *MAR*, 1924, No. 90.
3. *MAR*, 1925, para 51.
4. *MAR*. 1919. para 88.
5. *EC*, VIII, Tl. 144.
6. 509 of 1925.

"ಹೊನ್ನಾವಳಿಯ ಒಂದು ಪಾಳ್ಯವಾದ ಭಗವತಿ ಘಟ್ಟದ ೪೭೦ 'ಪೋಲು' ಭೂಮಿಯನ್ನು ಹಲಕೂರು ಕುಲಿಕೆಯಹಳ್ಳಿ ಪಾಳ್ಯದ ಬುಡನಹಾಳಿನ, ಅದೇ ವಿಸ್ತೀರ್ಣವುಳ್ಳ ಭೂಮಿಗೆ ವಿನಿಮಯ ಮಾಡಿಕೊಂಡರು".[1] (೪) ಕ್ರಿ. ಶ. ೧೩೭೧ ರಲ್ಲಿ ತೀರ್ಥಹಳ್ಳಿಯ ೪೫ ಪಾಲುಗಳಲ್ಲಿ, ೧೫ ಪಾಲುಗಳ ಮಹಾಜನರು ತಮ್ಮಲ್ಲಿ ಒಪ್ಪಿ ವಿರೂಪಾಕ್ಷಪುರದ (ಕೊಣಂದೂರು) ೩೦ ಬ್ರಾಹ್ಮಣರಿಗೆ ಭೂಮಿಯನ್ನು ಮಾರಿದರು.[2] (೫) ಕ್ರಿ. ಶ. ೧೩೮೧ ರ ಮುಲೂರು ತಾಲ್ಲೂಕಿನ ಕರಡಿ ಗುರುಕಿ ಶಾಸನವೊಂದು ಮಧುಭಟ್ಟ ಮತ್ತು ಇತರ ಮಹಾಜನರು ಕಪಿಲಗೋತ್ರದ ಒಬ್ಬನಿಗೆ ಮಾಡಿದ ಒಂದು ದಾನವನ್ನು ದಾಖಲೆ ಮಾಡಿದೆ.[3]

**ಸಾಮಾಜಿಕ ಚಟುವಟಿಕೆಗಳು :** ಮಹಾಜನ ಸಭೆಗಳು ಸಮಾಜದ ಏಳಿಗೆಗೆ ಪ್ರಯತ್ನಿಸಿದುದಕ್ಕೆ ನಿದರ್ಶನಗಳಿವೆ. ಎರಡನೆ ದೇವರಾಯ ಕ್ರಿ.ಶ. ೧೪೩೬ ರಲ್ಲಿ ಬಲ್ಲಾಳಪುರದಲ್ಲಿ ಎಲ್ಲಾ ವರ್ಗದವರ ಮೇಲೂ ವಿವಾಹ ತೆರಿಗೆಯನ್ನು ರದ್ದುಗೊಳಿಸಿದುದಕ್ಕೆ, ಪಡೈವೀಡು ರಾಜ್ಯದ ಮಹಾಜನರು ಕ್ರಿ.ಶ. ೧೪೨೪–೨೫ ರಲ್ಲಿ ಮಾಡಿದ ಧೈರ್ಯಯುತ ನಿಲುವು ಕಾರಣವಾಯಿತು. ವರದಕ್ಷಿಣೆ ಮೊತ್ತ ಹೆಚ್ಚಾಗಿದ್ದುದರಿಂದ ವಿವಾಹದ ವೆಚ್ಚ ಬಹು ಹೆಚ್ಚಾಗಿ, ಜನರು ಜಮೀನುಗಳನ್ನು ಮಾರಬೇಕಾಯಿತು. ಪಡೈವೀಡು ರಾಜ್ಯದ ಬ್ರಾಹ್ಮಣರು ಈ ಶಾಸನದ ಪ್ರಕಾರ ಒಂದು ಒಪ್ಪಂದಕ್ಕೆ ಬಂದು, ಇನ್ನು ಮುಂದೆ ಕನ್ಯಾದಾನದಿಂದ ಮಾತ್ರ ಮದುವೆಗಳನ್ನು ನಡೆಸಬೇಕೆಂದು, ತೀರ್ಮಾನಿಸಿದರು. ಹಣವನ್ನು ತೆಗೆದುಕೊಳ್ಳುವ ತಂದೆ ಹಾಗೂ ಹಣವನ್ನು ಕೊಡುವ ಮದುವಣಿಗ ಇವರಿಬ್ಬರಿಗೂ ರಾಜನಿಂದ ಶಿಕ್ಷೆಯಾಗಬೇಕೆಂದು ಮತ್ತು ಜಾತಿಯಿಂದ ಅವರನ್ನು ಹೊರಹಾಕಬೇಕೆಂದು ಕಟ್ಟಳೆ ಮಾಡಲಾಯಿತು. ಈ ಪ್ರಮಾಣ ಪತ್ರಕ್ಕೆ ವೇದಗಳ ವಿವಿಧ ಶಾಖೆಗಳ ಅಧ್ಯಯನದಲ್ಲಿ ನುರಿತ ಹಿರಿಯರ ಸಹಿ ಇವೆ.[4] ಸಮಾಜದಲ್ಲಿ ಕೆಳಗಿದ್ದ ವರ್ಗಗಳನ್ನು ಸುಧಾರಣೆಯಿಂದ ಮೇಲಕ್ಕೆತ್ತಿದುದಕ್ಕೆ ಒಂದು ಶಾಸನದಲ್ಲಿ ನಿದರ್ಶನವಿದೆ. ಇದರ ಪ್ರಕಾರ, ಬ್ರಾಹ್ಮಣರು ೫೦೦ ಗಾಣಿಗರಿಗೆ ಯಜ್ಞೋಪವೀತ (ಜನಿವಾರ) ಧಾರಣೆ ಮಾಡಿದರು. ಮಲ್ಲುಂದ್ರುಂ ಅಥವಾ ಪ್ರೌಢದೇವರಾಯಪುರದ ಮಹಾಜನರಲ್ಲಿ ಒಬ್ಬನಾಗಿದ್ದ ದಿಂಡಿಮ ಕವಿ ಈ ವಿವರಗಳನ್ನು ಕೊಟ್ಟಿದ್ದಾನೆ. ಗಾಣಿಗರು ಬ್ರಾಹ್ಮಣರಿಗೆ ಕೃತಜ್ಞತೆಯನ್ನು ಸೂಚಿಸಲು ಬ್ರಾಹ್ಮಣರಲ್ಲೊಬ್ಬರನ್ನು ತಮ್ಮ ಗುರುವಾಗಿ ಒಪ್ಪಿಕೊಂಡರು. ಇದು ಬ್ರಾಹ್ಮಣರು ಸಮಾಜಕ್ಕೆ ಸಲ್ಲಿಸಿದ ಸೇವೆಗೆ ಒಂದು ನಿದರ್ಶನ.[5]

---

1. *EC*, V, Ak. 63.
2. *EC*, VIII, Tl. 28.
3. *MAR*, 1913-14, para 94.
4. *SII*, I, No. 56.
5. *ARSIE*, 1912, p. 90.

ಮಹಾಜನರು ಇತರರೊಡನೆ ಜಾತಿಭ್ರಷ್ಟ ಮೊಕದ್ದಮೆಯನ್ನು ತೀರ್ಮಾನಿಸಿದ ನಿದರ್ಶನವಿದೆ. ಕ್ರಿ. ಶ. ೧೬ ನೇ ಶತಮಾನದಲ್ಲಿ ಜಾತಿಯಿಂದ ಹೊರಹಾಕಿದ ಒಬ್ಬ ಬ್ರಾಹ್ಮಣನ ಆಸ್ತಿ ವಿಲೇ ಆಗಬೇಕಾಗಿದ್ದಿತು. ಅಂಬ ಸಮುದ್ರಂ ತಾಲ್ಲೂಕಿನ ಚೇರ ಮಹಾದೇವಿ (ಶರ್ಮಾದೇವಿ) ಗ್ರಾಮದ ಒಬ್ಬ ಬ್ರಾಹ್ಮಣನು ತನ್ನ ಉನ್ನತ ಜಾತಿಯಿಂದ ಹೊರಹಾಕಲ್ಪಟ್ಟು, ಅವನ ಭೂಮಿ ಮತ್ತು ಮನೆಯ ನಿವೇಶನವನ್ನು, ಸ್ಥಳೀಯ ತಿರುವೇಂಗಡನಾಥ ದೇವಸ್ಥಾನಕ್ಕೆ ವಶಪಡಿಸಿಕೊಂಡು ಅದರಿಂದ ಬಂದ ವರಮಾನದಲ್ಲಿ ದೇವರ ನೈವೇದ್ಯಕ್ಕೆ ಅನ್ನ ಮತ್ತು ಬ್ರಾಹ್ಮಣನಿಗೆ ಆಹಾರ ಕೊಡಲು ಉಪಯೋಗಿಸ ಲಾಗುತ್ತಿತ್ತು. ಈ ಮೊಕದ್ದಮೆಯನ್ನು ತೀರ್ಮಾನಿಸಿದವರು ಚೇರ ಮಹಾದೇವಿ, ಇಲಪುರಂ ಮತ್ತು ನರಸಾಪುರಂ ವಿದ್ವನ್ ಮಹಾಜನರು.[1]

**ನ್ಯಾಯ ವಿತರಣೆಯ ಅಧಿಕಾರ :** ಮಹಾಜನ ಸಭೆಗಳು ನ್ಯಾಯವಿತರಣೆಯ ಅಧಿಕಾರವನ್ನು ಚಲಾಯಿಸುತ್ತಿದ್ದ ಹಾಗೆ ತೋರುತ್ತದೆ. ಅವು ಹಲವು ಮೊಕದ್ದಮೆಗಳ ವಿಚಾರಣೆಮಾಡಿ ತಪ್ಪಿತಸ್ಥರನ್ನು ದಂಡಿಸಿದುದಕ್ಕೆ ಶಾಸನಾಧಾರಗಳಿವೆ. ಉದಾಹರಣೆಗೆ, ಕುಳತ್ತೂರ್, ಅಳಂಬಲಂ, ಶಡಯ್ಯನ್ ಪಟ್ಟು ಮತ್ತು ಮುತ್ತಿಯ ಕುರುಚ್ಚಿ ಅಗ್ರಹಾರ ಗಳ ಮಹಾಜನರು ಸೇಲಂ ಜಿಲ್ಲೆಯ ಆರಗಳೂರಿನ ಕಾಮೇಶ್ವರಂ ಉಡೈಯ್ಯ ನಾಯನರ್ ದೇವಸ್ಥಾನದ ಇಬ್ಬರು ಸ್ಥಾನಿಕರು ಮತ್ತು ಪಾರುಪತ್ಯಗಾರರ ವಿವಾದವನ್ನು ತೀರ್ಮಾನಿಸಿದರು. ಈ ಮೊಕದ್ದಮೆ, ತಿಂಗಳಿನ ೩೦ ದಿವಸಗಳಲ್ಲಿ ದೇವಸ್ಥಾನದಲ್ಲಿ ಪೂಜೆಮಾಡುವ ಹಕ್ಕಿಗೆ ಸಂಬಂಧಪಟ್ಟದ್ದುದು ಮತ್ತು ಸಂಬಂಧಪಟ್ಟ ಅಧಿಕಾರಿಗಳ ತೀರ್ಪನ್ನು ಆಚರಣೆಗೆ ತಂದುದಕ್ಕೆ ಸಂಬಂಧಿಸಿದೆ.[2] ಈ ಮೊಕದ್ದಮೆಯನ್ನು ಸಂಕ್ಷಿಪ್ತ ವಾಗಿ ಹೀಗೆ ತಿಳಿಯಬಹುದು— ದೇವಸ್ಥಾನದಲ್ಲಿ ತಿಂಗಳಿನ ೩೦ ದಿನಗಳು ಪೂಜೆ ಮಾಡುವ ಹಕ್ಕನ್ನು ಬಹಳ ಕಾಲದಿಂದ ಒಂದನೆಯವನು ಹೊಂದಿದ್ದನು. ಆದರೆ ವಾಸ್ತವವಾಗಿ ಅವನಿಗೆ ೧೫ ದಿನಗಳ ಹಕ್ಕಿದ್ದಿತು ಮತ್ತು ಎರಡನೆಯವನಿಗೆ ಉಳಿದ ೧೫ ದಿನಗಳ ಪೂಜೆ ಸೇರಿದ್ದಿತು. ಆದರೆ ಎರಡನೆಯವನು ಪೂಜೆಯನ್ನು ಕೈಬಿಟ್ಟು ತನ್ನ ಹಕ್ಕನ್ನು ಚಲಾಯಿಸುತ್ತಿರಲಿಲ್ಲ. ಎರಡನೆಯವನು ತನಗೆ ಸೇರಿದ ೧೫ ದಿನಗಳ ಪೂಜೆಯ ಹಕ್ಕಿನಲ್ಲಿ ಏಳುವರೆ ದಿನಗಳನ್ನು ಇನ್ನೊಬ್ಬ ಸ್ಥಳೀಯ ಮೂರನೆಯವನಿಗೆ ಕೊಟ್ಟು ಕ್ರಯಪತ್ರ ಮಾಡಿದನು. ಇದರಿಂದ ಹಲವು ತಲೆಮಾರುಗಳಿಂದ ಅನುಭವಿಸು ತ್ತಿದ್ದ ಹಕ್ಕನ್ನು ಒಂದನೆಯವನು ಕಳೆದುಕೊಂಡನು. ಒಂದನೆಯವನಿಗೆ ಸಂತಾನವಿಲ್ಲದ್ದ ರಿಂದ "ನಾಟ್ಟಾರ್" (ನಾಡಿನವರು) ಇದನ್ನು ತೀರ್ಮಾನಿಸಲು ಮುಂದೆ ಬಂದು, ತೀರ್ಮಾನವಾಗುವವರೆಗೆ ದೇವಸ್ಥಾನದ ಪೂಜೆ ಒಬ್ಬ ಹೊರಗಿನವನಿಂದ ಆಗುತ್ತಿದ್ದಿತು. ನಂತರ ಒಂದನೆಯವನು ಆ ನಾಡಿನ ತಿರುಮಲನಾಯಕನಿಗೆ ಅಹವಾಲು ತೆಗೆದುಕೊಂಡು

1. *ARSIE*, 1917, p. 130.
2. 430 of 1913.

ಹೋದನು. ತಿರುಮಲನಾಯಕ ಮತ್ತು "ನಾಟ್ಟಾರ್" ಮೊಕದ್ದಮೆಯನ್ನು ಕುಳತ್ತೂರು, ಅಳಂಬಲಂ, ಶಡಯ್ಯೈನ್‌ಪಟ್ಟು ಮತ್ತು ಮುಟ್ಟಮ ಕುರುಚಿ ಅಗ್ರಹಾರಗಳ ಮಹಾಜನರ ಮುಂದೆ ಇಡಬೇಕೆಂದು ಎಲ್ಲಾ ಪಕ್ಷಗಳಿಗೂ ತಿಳಿಸಿದನು. ಅವರು ಸಭೆಸೇರಿ ಮೊಕದ್ದಮೆಯನ್ನು ವಿಚಾರಿಸಿ ತೀರ್ಪು ಕೊಟ್ಟರು. ತೀರ್ಪಿನಲ್ಲಿ ಒಂದನೆಯವನು ವಂಶಪಾರಂಪರ್ಯವಾಗಿ ೧೫ ದಿನಗಳ ಹಕ್ಕನ್ನು ಹೊಂದಿರಬಹುದಾಗಿತ್ತು. ಆದರೆ ಎರಡನೆಯವನು ವಿವಾದಕ್ಕೊಳಗಾಗಿದ್ದ ೧೫ ದಿನಗಳ ಒಂದು ಭಾಗವನ್ನು ಮೂರನೆಯವನಾದ ಹೊರಗಿನವನಿಗೆ ಮಾರಿದುದು ಸರಿಯಾಗಿರಲಿಲ್ಲ. ಒಂದನೆಯವನು ಬಹಳ ಕಾಲ ಅನುಭವಿಸುತ್ತಿದ್ದುದರಿಂದ, ಕೊಳ್ಳುವ ಹಕ್ಕನ್ನು ಹೊಂದಿದ್ದನು. ಆದ್ದರಿಂದ ಮೊದಲಿನಂತೆಯೆ ಒಂದನೆಯವನು ೩೦ ದಿನಗಳ ಕಾಲವೂ ಅನುಭವಿಸಬೇಕೆಂದೂ ಮತ್ತು ಮೂರನೆಯವನಿಗೆ ಕೊಟ್ಟ ಕ್ರಯಪತ್ರವನ್ನು ವಜಾ ಮಾಡಬೇಕೆಂದೂ ತೀರ್ಪು ಕೊಡಲಾಯಿತು.[1]

ಮಹಾಜನ ಸಭೆ ತಪ್ಪಿತಸ್ಥರ ಭೂಮಿಯನ್ನು ವಶಪಡಿಸಿಕೊಳ್ಳಬಹುದಾಗಿದ್ದಿತು. ಕ್ರಿ. ಶ. ೧೩೮೬–೮೭ ರಲ್ಲಿ ತಂಜಾವೂರು ಜಿಲ್ಲೆಯ ತಿರುಪೆರುಂದುರೈ ಗ್ರಾಮ ಸಭೆ, ತಪ್ಪಿಸ್ಥನಾದ ತಿರುಪತ್ತೂರು ಆಂಡನ್ ಪಿಳ್ಳೆಯಿಂದ ವಶಪಡಿಸಿಕೊಂಡಿದ್ದ ಭೂಮಿಯನ್ನು, ಸ್ಥಳೀಯ ದೇವಸ್ಥಾನಕ್ಕೆ ಕೊಟ್ಟಿತು.[2]

**ಇತರ ಚಟುವಟಿಕೆಗಳು:** ಮಹಾಜನ ಸಭೆಗಳು ನಿರ್ವಹಿಸುತ್ತಿದ್ದ ಇನ್ನೂ ಅನೇಕ ಕರ್ತವ್ಯಗಳನ್ನು ಶಾಸನಗಳು ತಿಳಿಸುತ್ತವೆ. ಅವು ಪಾಂಡಿತ್ಯಕ್ಕೆ ಉತ್ತೇಜನ ಕೊಡುತ್ತಿದ್ದವು. ಕ್ರಿ. ಶ. ೧೩೮೧ ರ ಒಂದು ಶಾಸನವು ಮದ್ದೂರು ಗ್ರಾಮದ ಮಹಾಜನರು ಮತ್ತು ನಾಡಿನವರು, ದೇಶಿನಾಥದೇವಸ್ಥಾನದಲ್ಲಿ ಪುರಾಣ ಹೇಳಲು, ಯಾತ್ರಿಕರಿಗೆ ಆಹಾರ ಒದಗಿಸಲು ಮತ್ತು ವೇದಾಧ್ಯಯನಕ್ಕೆ ಆ ಗ್ರಾಮದ ಪೂರ್ವಕ್ಕೆ ಮಾಯಣ್ಣನೆಂಬವನಿಗೆ ಸೇರಿದ ಎರಡು ಖಂಡುಗದಷ್ಟು ಬಿತ್ತನೆ ಮಾಡಬಹುದಾದ ತರೀ ಭೂಮಿಯನ್ನು, ಒಂದು ಒಣ ಭೂಮಿಯನ್ನು, ಒಂದು ತೋಟವನ್ನು ದಾನಮಾಡಿದರು.[3]

ಮಹಾಜನರು ನಾಟ್ಯಕಲೆಗೆ ಉತ್ತೇಜನಕೊಡುತ್ತಿದ್ದರು. ಉದಾಹರಣೆಗೆ, ಕ್ರಿ.ಶ. ೧೩೯೯ ರಲ್ಲಿ ಮಧುಸೂಧನಪುರದ (ತಳಿರೂರು) ಮಹಾಜನರು, ಮಧುಸೂಧನ ದೇವರ ಸೇವೆಯ ನಾಟ್ಯಗಾರ್ತಿಯರ ಪೋಷಣೆಗೆ ಒಂದು ದಾನ ಮಾಡಿದರು.[4] ಇದೇ ರೀತಿ ಕ್ರಿ.ಶ. ೧೩೭೨ ರ ಗುಂಡ್ಲುಪೇಟೆಯ ಒಂದು ಶಾಸನದ ಪ್ರಕಾರ ಪ್ರಸನ್ನ ವಿಜಯಪುರದ ಮಹಾಜನರು, ನಾಟ್ಯಗಾರ್ತಿಯರ ಪೋಷಣೆಗೆ ಒಂದು ದಾನ ಮಾಡಿದರು.[5]

1. 413 of 1914; *ARSIE*, 1914, para 26.
2. 509 of 1925.
3. *MAR*, 1928, p. 59.
4. *EC*, V, Ak. 134.
5. *EC*, IV, Gu. 32.

**ಹಲವು ಅಗ್ರಹಾರಗಳು ನಶಿಸಿದುದು :** ವಿಜಯನಗರದ ಆಳ್ವಿಕೆಯಲ್ಲಿ ಹಲವು ಅಗ್ರಹಾರಗಳು ನಶಿಸಿಹೋದುದಕ್ಕೆ ಆಧಾರವಿದೆ. ಕ್ರಿ. ಶ. ೧೧ನೆ ಶತಮಾನದಿಂದ ಕ್ರಿ.ಶ. ೧೪ ನೇ ಶತಮಾನದ ಪ್ರಾರಂಭದವರೆಗೆ ೪೦೦ ವರ್ಷಗಳ ಕಾಲ, ಕರ್ನಾಟಕದಲ್ಲಿ ಬಾಳ್ಗುಳಿ (ಬಗಲಿ, ಬಳ್ಳಾರಿ ಜಿಲ್ಲೆ) ಪೌರ ಜೀವನವನ್ನು ಹೊಂದಿತ್ತು. ಕ್ರಿ.ಶ. ೧೫೩೪ರ ಒಂದು ಶಾಸನ, ಹಡಪದ ಬೈಯ್ಯಪ್ಪನಾಯಕನ ಮಗ ಕೃಷ್ಣಪ್ಪನಾಯಕ, ಕೊಗಲಿ ಜಿಲ್ಲೆಯ ಕೊಟ್ಟೂರನ್ನು ಮತ್ತು ೩೨ ಪ್ರಾಂತ್ಯಗಳನ್ನು ಆಳುತ್ತಿದ್ದಾಗ ಮತ್ತು ಕೊಟ್ಟೂರು "ವಳಿತ"ದ ಬಾಗುಲಿಯನ್ನು ಹಳವಿನಾಯಕ ಆಳುತ್ತಿದ್ದಾಗ, ಬಾಳ್ಗುಳಿಯ ಪಟ್ಟಣಸ್ವಾಮಿ ಲಕ್ಕಿಶೆಟ್ಟಿಯ ಪತ್ನಿ ಲಿಂಗಮ್ಮ, ಕಲಿದೇವರ ಸೇವೆಗೆ, ಬತ್ತ ಮತ್ತು ಬಂಗಾರವನ್ನು ದಾನಮಾಡಿದಳೆಂದು ತಿಳಿಸುತ್ತದೆ.[1] ಕ್ರಿ.ಶ. ೧೫೫೧ರ ಮತ್ತೊಂದು ಶಾಸನದ ಪ್ರಕಾರ, ಹಡಪದ ಕೃಷ್ಣಪ್ಪನಾಯಕ ಕೊಟ್ಟದ್ದ ಕೊಟ್ಟೂರು ಸೀಮೆಯ ಬಾಗುಲಿಯ ಜಾಮಿನಾಯಕನ ಮಗ ಹಳವಿನಾಯಕ, ಬಾಗುಳಿ ಮತ್ತು ಅದರ ಪಾಳ್ಯಗಳ ಕುರುಬರಿಗೆ, ಕುರಿಗಳ ಮೇಲಿನ ತೆರಿಗೆಯನ್ನು ರದ್ದುಮಾಡಿದನೆಂದು ತಿಳಿಯುತ್ತದೆ.[2] ಈ ಶಾಸನಗಳಿಂದ ಬಾಗುಲಿ ಹೇಗೆ "ಅಮರನಾಯಕ"ರ ಹತೋಟಿಗೆ ಬಂದು ತನ್ನ ಸ್ವಾಯತ್ತತೆಯನ್ನು ಕಳೆದುಕೊಂಡಿತೆಂದು ತಿಳಿದುಬರುತ್ತದೆ.

**ಕುದುವಳ್ಳಿ, ಉಪೇಂದ್ರಪುರ ಮತ್ತು ಕಳಸ ಅಗ್ರಹಾರಗಳ ಚರಿತ್ರೆ :** ಈ ಅಧ್ಯಾಯವನ್ನು ಅಂತ್ಯಗೊಳಿಸುವ ಮೊದಲು, ಕುದುವಳ್ಳಿ, ಉಪೇಂದ್ರಪುರ (ಮದ್ದೂರು) ಮತ್ತು ಕಳಸ ಅಗ್ರಹಾರಗಳ ಚರಿತ್ರೆಯನ್ನು ತಿಳಿಯಬಹುದು.

**ಕುದುವಳ್ಳಿ :** ವಿಜಯನಗರ ಕಾಲದ ಕುದುವಳ್ಳಿಯ ಸುಮಾರು ೧೦೦ ವರ್ಷಗಳ ಚರಿತ್ರೆಯನ್ನು ಶಾಸನಗಳಿಂದ ತಿಳಿಯಬಹುದು. ಕುದುವಳ್ಳಿ ಒಂದು ಅಗ್ರಹಾರ ಗ್ರಾಮವಾಗಿದ್ದಿತು. ಅದು ಚಿಕ್ಕಮಗಳೂರಿಗೆ ಸುಮಾರು ಏಳು ಮೈಲಿ ದೂರದಲ್ಲಿದೆ. ಶಾಸನವೊಂದರಿಂದ ಅಗ್ರಹಾರದ ಸ್ಥಾಪನೆಗೆ ಕಾರಣವಾದ ಸಂದರ್ಭಗಳನ್ನು ತಿಳಿಯಬಹುದು.[3] ಈ ಶಾಸನ ಎರಡನೆ ಹರಿಹರ, ಈ ಗ್ರಾಮವನ್ನು ಶೃಂಗೇರಿ ಮಠಕ್ಕೆ ದಾನ ಮಾಡಿದನೆಂದು ತಿಳಿಸುತ್ತದೆ. ಈ ಶಾಸನದ ತಾರೀಖು ನಿಜವಲ್ಲದಿದ್ದರೂ ಇನ್ನೊಂದು ಶಾಸನ,[4] ಹರಿಹರ, ಶೃಂಗೇರಿ ಮಠಕ್ಕೆ ಈ ಗ್ರಾಮವನ್ನು ದಾನಮಾಡಿದ್ದು, ಗ್ರಾಮವನ್ನು ವೃತ್ತಿಗಳನ್ನಾಗಿ ವಿಭಾಗಿಸಿದುದು ಮತ್ತು ಅವುಗಳನ್ನು ಹಲವು ಬ್ರಾಹ್ಮಣರಿಗೆ ಹಂಚಿದುದನ್ನು ತಿಳಿಸುತ್ತದೆ. ಪುರುಷೋತ್ತಮ ಭಾರತಿ ಶೃಂಗೇರಿ ಮಠಾಧಿಪತಿಯಾಗಿದ್ದಾಗ ಅವರು ವರ್ಷಕ್ಕೆ ೨೧ ವರಹಗಳಷ್ಟು ಬೆಲೆಯುಳ್ಳ ಆ ಗ್ರಾಮದ ಒಂದು ಭಾಗವನ್ನು ತಮ್ಮ ರಕ್ತ ಸಂಬಂಧಿಗಳಿಗೆ ಕೊಟ್ಟರು. ರಾಮಚಂದ್ರ ಭಾರತಿ ಮಠಾಧಿಪತಿಯಾದಾಗ,

1. *SII*, IX (ii), No. 640.
2. *Ibid.*, No. 641.
3. *MAR*, 1929, No. 18.
4. *EC*, VI, Cm. 88.

ಹಿಂದಿನ ಗುರುಗಳ ನಂತರಿಂದ ಈ ಭೂಮಿಯನ್ನೆಲ್ಲ ವಶಪಡಿಸಿಕೊಂಡು, ಆರಗದ ಮಲ್ಲಿಭಟ್ಟನೆಂಬುವನಿಗೆ ಕೊಟ್ಟರು. ಹೀಗೆ ಆ ಗ್ರಾಮದ ಒಂದು ಭಾಗ ಮಲ್ಲಿಭಟ್ಟನ ವಶದಲ್ಲಿದ್ದು ಉಳಿದುದು ಮಠಕ್ಕೆ ಸೇರಿದ್ದಿತು. ಶಾಸನದ ಪ್ರಕಾರ, ಶೃಂಗೇರಿ ಮಠದಲ್ಲಿ ಪೂಜಿಸಲ್ಪಡುತ್ತಿದ್ದ ಬ್ರಹ್ಮನಾಥದೇವರ, ಅಸಂತುಷ್ಟತೆಯಿಂದ, ದನಗಳು ಹೆಚ್ಚಿನ ಸಂಖ್ಯೆಯಲ್ಲಿ ಸಾಯಲು, ನರಹರಿಭಟ್ಟನೆಂಬುವನು ಶೃಂಗೇರಿಗೆ ಬಂದು, ಬ್ರಹ್ಮನಾಥದೇವರ ಆತ್ಮವನ್ನು ಪೂಜಿಸಿ ಕಷ್ಟನಿವಾರಣೆಮಾಡಿದನು. ಮಠಾಧಿಪತಿ ಇದರಿಂದ ಸಂತುಷ್ಟನಾಗಿ, ನರಹರಿಭಟ್ಟನಿಗೆ, ಮಲ್ಲಿಭಟ್ಟನಿಗೆ ಸೇರಿದ ಭಾಗವನ್ನು ಬಿಟ್ಟು ಕುದುವಳ್ಳಿಯ ಉಳಿದ ಭೂಮಿಯನ್ನು ದಾನಮಾಡಿದನು. ನರಹರಿಭಟ್ಟ ಸಮೀಪದಲ್ಲಿದ್ದ ಕೊಂಡನಹಳ್ಳಿಯಲ್ಲಿ ವಾಸಮಾಡುತ್ತ ತಾನು ಹೊಸದಾಗಿ ಪಡೆದ ಭೂಮಿಯನ್ನು ನೋಡಿಕೊಳ್ಳುತ್ತಿದ್ದನು. "ದೇವರ ಮಕ್ಕಳು" (ಬೆಸ್ತರು) ಕೋಮಿಗೆ ಸೇರಿದ ಬಾಡಿಗೆದಾರರು, ರಾತ್ರಿವೇಳೆ ನರಹರಿ ಭಟ್ಟನ ಮನೆಯನ್ನು ಕೊಳ್ಳೆಹೊಡೆದು ತಮ್ಮ ಮನೆಗೆ ಆಹಾರ ಸಾಮಗ್ರಿಗಳನ್ನು ಸಾಗಿಸಿದರು. ಆದುದರಿಂದ ನರಹರಿಭಟ್ಟ ಆ ಗ್ರಾಮದ ಉಸ್ತುವಾರಿಯನ್ನು ನೋಡಿಕೊಳ್ಳುವುದಕ್ಕೆ ತನಗೆ ಆಗಲಾರದೆಂದು, ಅದನ್ನು ವೃತ್ತಿಗಳನ್ನಾಗಿ ವಿಂಗಡಿಸಿ, ಬ್ರಾಹ್ಮಣರಿಗೆ ಹಂಚಬೇಕೆಂದು ಶೃಂಗೇರಿ ಸ್ವಾಮಿಗಳಿಗೆ ಅರಿಕೆ ಮಾಡಿಕೊಂಡನು. ಅದೇರೀತಿ ರಾಮಚಂದ್ರ ಭಾರತಿ, ಆ ಗ್ರಾಮದ ೧೪೭ ಖಂಡುಗಗಳಷ್ಟು ಬಿತ್ತಬಹುದಾದ ತರೀ ಜಮೀನನ್ನು, ಮೂವತ್ತಮೂರು ಮುಕ್ಕಾಲು ವೃತ್ತಿಗಳನ್ನಾಗಿ ವಿಂಗಡಿಸಿ, ಪ್ರತಿ ವೃತ್ತಿಗೂ ನಾಲ್ಕುಕಾಲು ಖಂಡುಗಗಳಷ್ಟು ಭೂಮಿಯನ್ನು ಅನೇಕ ಬ್ರಾಹ್ಮಣರಿಗೆ ಹಂಚಿದನು. ಉಳಿದ ಮೂರೂವರೆ ಖಂಡುಗಗಳಷ್ಟು ಬಿತ್ತಬಹುದಾದ ಭೂಮಿಯನ್ನು ಕ್ರಿ. ಶ. ೧೩೯೧ ರಲ್ಲಿ ಆ ಗ್ರಾಮದ "ದೇವರ ಮಕ್ಕಳು" ಕೋಮಿಗೆ ಕೊಟ್ಟನು.

"ದೇವರ ಮಕ್ಕಳು" ಕೋಮಿನವರು ಆ ಭೂಮಿಯನ್ನು ಸ್ವಲ್ಪ ಕಾಲ ಅನುಭವಿಸಿದರು. ನಂತರ ಕುದುವಳ್ಳಿಗೆ ಎರಡುಮೈಲಿ ದೂರವಿದ್ದ ಗೌತಮೇಶ್ವರದ, ಶಿವದೇವಸ್ಥಾನದ ಒಂದು ಸೇವೆಗೆ ದೊಡ್ಡಣ್ಣಭಟ್ಟನೆಂಬ ಬ್ರಾಹ್ಮಣನಿಗೆ ದಾನ ಮಾಡಿದರು. ಕಾಲಕ್ರಮೇಣ ಆ ಕೋಮಿನವರ ಸಂಖ್ಯೆ ಇಳಿಮುಖವಾಗಿ, ಕೊನೆಗೆ ಆ ಗ್ರಾಮದಲ್ಲಿ ಯಾರೂ ಉಳಿಯಲಿಲ್ಲ. ದೊಡ್ಡಣ್ಣಭಟ್ಟ ಸಂತಾನವಿಲ್ಲದೆ ಕಾಲವಾದ. ಅವನ ಆಸ್ತಿ, ಭೋಗ್ಯವಾಗಿ ಪಡೆದುಕೊಂಡಿದ್ದ ಸಿಂಗಾಪುರದ ಗಿರಿಭಟ್ಟನಿಗೆ ಸೇರಿತು. ಸ್ವಲ್ಪಕಾಲಾನಂತರ ಗಿರಿಭಟ್ಟನು ಸಂತಾನವಿಲ್ಲದೆ ಮರಣಹೊಂದಿದ ಮೇಲೆ, ಕ್ರಿ.ಶ. ೧೪೦೨ ರಲ್ಲಿ ಆ ಸ್ವತ್ತನ್ನು ಉಪಾಧ್ಯರ ನರಸಿದೇವರ ಸಂಸಾರ ಪಡೆದುಕೊಂಡಿತು. ಈ ಶಾಸನವನ್ನು ಬರೆದಿರುವವನ ಪ್ರಕಾರ ಆ ಸ್ವತ್ತಿನ ಮೇಲೆ, ಆ ಗ್ರಾಮದವರಿಗೆಲ್ಲ ಹಕ್ಕಿದ್ದುದರಿಂದ ಹಕ್ಕುದಾರನಿಲ್ಲದ ಭೂಮಿ ಪುನಃ ಶೃಂಗೇರಿ ಮಠಕ್ಕೆ ಸೇರಬೇಕಾಗಿದ್ದಿತು.

**ಉಪೇಂದ್ರಪುರ :** ಈಗಿನ ಯಳಂದೂರು ಹೋಬಳಿಯಲ್ಲಿರುವ ಮದ್ದೂರು ಉಪೇಂದ್ರಪುರವೆಂದು ಕರೆಯಲ್ಪಡುತ್ತಿದ್ದ ಅಗ್ರಹಾರವಾಗಿತ್ತು. ಈ ಅಗ್ರಹಾರದ ಸಂಬಂಧವಾಗಿ "ಮಾಸವೆಗ್ಗಡೆತನ"ವನ್ನು ತಿಳಿಸಲಾಗಿದೆ. ಕ್ರಿ.ಶ. ೧೩೨೭ ರ ಒಂದು ಶಾಸನದ ಪ್ರಕಾರ, ಶ್ರವಣಪ್ಪಾಚಾರ್ಯ ವಿಘ್ನೇಶ್ವರದೀಕ್ಷಿತೋಪಾಧ್ಯಾಯ ಎಂಬವನು "ಮಾಸವೆಗ್ಗಡೆ"ಯಾಗಿದ್ದನು.[1] ಆ ವರ್ಷ ಮಹಾಜನರು ಇವರಿಗೆ ಒಂದು ದಾನ ಮಾಡಿದರು. ಕ್ರಿ.ಶ. ೧೩೨೮ ರಲ್ಲಿ ಅಸಮದೇವನೆಂಬವನು "ಮಾಸವೆಗ್ಗಡೆತನ"ವನ್ನು ಹೊಂದಿದ್ದನೆಂದು ತಿಳಿಸುತ್ತದೆ.[2] ಆ ವರ್ಷ ಮಹಾಜನರು ಚಿರದುವ್ರ ಬಂಜರು ಭೂಮಿಯಲ್ಲಿ ಎಂಟು ಮನೆಗಳನ್ನೊಳಗೊಂಡ ಉಪೇಂದ್ರ ಪಟ್ಟಣವನ್ನು ಕಟ್ಟಲು ದಾನ ಮಾಡಿದರು. ಹೊಸ ಮನೆಗಳನ್ನು ಕಟ್ಟುವುದಕ್ಕೆ ಉತ್ತೇಜನ ಕೊಡಲು, ಮಹಾಜನರು ಆ ಮನೆಗಳಿಗೆ ಕಂದಾಯವನ್ನು ಮಾಫಿ ಮಾಡಿದರು. ಉಳಿದ ಮನೆಗಳು ಕಟ್ಟದಂದಿನಿಂದ ೩ ರಿಂದ ೭ ವರ್ಷಗಳವರೆಗೆ ತೆರಿಗೆಯಿಂದ ಮಾಫಿ ಹೊಂದಿದುವು. ಕ್ರಿ. ಶ. ೧೩೩೬ ರಲ್ಲಿ ಉದುಗುಂದೂರಿನ ಕರತ್ತಿ ಎಂಬವನು "ಮಾಸವೆಗ್ಗಡೆ"ಯಾಗಿದ್ದನು. ಮಹಾಜನರು ಕಮ್ಮಾರ ಪೆಮ್ಮೋಜನ ಮಗ ಮಂಬೋಜನಿಗೆ ಒಂದು ದಾನ ಮಾಡಿದರು. ಮಂಬೋಜ ತನ್ನ ವೃತ್ತಿಯಿಂದ ಮಹಾಜನರನ್ನು ಸಂತುಷ್ಟಿಗೊಳಿಸಲು, ಅವನಿಗೆ ತನ್ನ ಕೋಮಿನವರಿಗೆ ಮನೆಗಳನ್ನು ಕಟ್ಟಲು ಬಾಡಿಗೆ ಇಲ್ಲದೆ ಸ್ವಲ್ಪ ಭೂಮಿಯನ್ನು ಕೊಟ್ಟರು. ಆ ಭೂಮಿಯಲ್ಲಿ ನೆಲಸಿದ ಮಂಬೋಜ ಮತ್ತು ಕಮ್ಮಾರರ ಮಕ್ಕಳು ಆ ಭೂಮಿಯನ್ನು ತೆರಿಗೆ ಇಲ್ಲದೆ ಅನುಭವಿಸಬಹುದಾಗಿತ್ತು.[3] ಈ ನಿದರ್ಶನಗಳಲ್ಲಿ ಮಹಾಜನರು, ಜನರಿಗೆ ಭೂಮಿಯನ್ನು ದಾನಮಾಡುವ ಮತ್ತು ತೆರಿಗೆಯನ್ನು ಮಾಫಿ ಮಾಡುವ ಕರ್ತವ್ಯಗಳನ್ನು ಮಾಡುತ್ತಿದ್ದದನ್ನು ಕಾಣಬಹುದು. ಕ್ರಿ.ಶ. ೧೩೮೧ ರಲ್ಲಿ ಮದ್ದೂರಿನ "ಶ್ರೀಮದ್ ಅಶೇಷ ಮಹಾಜನಂಗಳು" ಮತ್ತು ಆ ಗ್ರಾಮದ ನಾಡಿನವರು ಸಮಸ್ತ ಗೌಡರೊಡನೆ ಒಮ್ಮತದಿಂದ ಮದ್ದೂರು ಗ್ರಾಮದ ಪೂರ್ವಕ್ಕೆ ಪುರಾಣಕಥೆಗಳನ್ನು ಹೇಳಲು, ಯಾತ್ರಿಕರಿಗೆ ಆಹಾರ ಒದಗಿಸಲು ಮತ್ತು ದೇವಸ್ಥಾನದಲ್ಲಿ ವೇದಘೋಷ ಮಾಡಲು ಸ್ವಲ್ಪ ಭೂಮಿಯನ್ನು ಕೊಟ್ಟರು. ದಾನ ತೆಗೆದುಕೊಂಡವರ ಹೆಸರನ್ನು ಈ ಶಾಸನ ತಿಳಿಸುವುದಿಲ್ಲ.[4]

**ನರಸಿಂಹ ಚತುರ್ವೇದಿ ಮಂಗಳ :** ವಿಜಯನಗರ ಕಾಲದಲ್ಲಿ ಈಗಿನ ಮಂಡ್ಯ ಜಿಲ್ಲೆಯಲ್ಲಿರುವ ಮದ್ದೂರು, ನರಸಿಂಹಚತುರ್ವೇದಿ ಮಂಗಳ ಎಂಬ ಹೆಸರುಳ್ಳ ಅಗ್ರಹಾರವಾಗಿದ್ದಿತು. ಕ್ರಿ.ಶ. ೧೪೦೬ ರ ಒಂದು ಶಾಸನದಿಂದ ಮದ್ದೂರು, ನರಸಿಂಹ ಚತುರ್ವೇದಿ ಮಂಗಳವೆಂದು ಕರೆಯಲ್ಪಡುತ್ತಿದ್ದಿತೆಂದು ತಿಳಿಯುತ್ತದೆ. ದೇವಸ್ಥಾನಗಳಿಗೆ

1. *EC*, IV, Yl. 40.
2. *EC*, IV, Yl, 39.
3. *EC*, IV, Yl, 38.
4. *MAR*, 1928, No. 55.

ದಾನಗಳನ್ನು ಕೊಡುವುದು ಅಗ್ರಹಾರಸಭೆಯ ಒಂದು ಮುಖ್ಯ ಕರ್ತವ್ಯವಾಗಿತ್ತು. ವೈದ್ಯನಾಥ ದೇವರ ಪೂಜೆಗೆ ಆ ಸ್ಥಳದ ಎಲ್ಲ ನಿವಾಸಿಗಳು ಹಲವು ತೆರಿಗೆಗಳನ್ನು ಬಿಟ್ಟು ಕೊಟ್ಟರು.[1] ಕ್ರಿ.ಶ. ೧೫೪೮ ರಲ್ಲಿ ಮಹಾಮಂಡಲೇಶ್ವರ ತಿರುಮಲರಾಯನ ಮಕ್ಕಳು ರಾಮರಾಜಯ್ಯ ಮತ್ತು ತಿರುಮಲರಾಜಯ್ಯ ಮದ್ದೂರಿಗೆ ಸೇರಿದ ಕಬ್ಬರೆ ಗ್ರಾಮವನ್ನು ಇಬ್ಬರು ಬ್ರಾಹ್ಮಣರಿಗೆ ಅಗ್ರಹಾರವಾಗಿ ಕೊಟ್ಟರು.[2] ಕ್ರಿ.ಶ. ೧೫೫೧ ರಲ್ಲಿ ರಾಮ ರಾಜಯ್ಯನ ಪುಣ್ಯಕ್ಕೆ, ನರಸಿಂಹ, ರಾಮಚಂದ್ರ ಮತ್ತು ಅಳ್ವಾಲನಾಥ ದೇವರ ಪೂಜೆಗೆ ದಾನಗಳನ್ನು ಕೊಡಲಾಯಿತು.[3] ಕ್ರಿ.ಶ. ೧೬೨೨ ರಲ್ಲಿ ರಾಮದೇವರಾಯ ಕೆಳಲೆ ನಾಡಿ ನಲ್ಲಿ ಮದ್ದೂರಿಗೆ ಸೇರಿದ ಹಲವು ಗ್ರಾಮಗಳನ್ನು ಮೂವರು ಬ್ರಾಹ್ಮಣರಿಗೆ ದಾನ ಮಾಡಿದನು.[4] ನರಸಿಂಹಚತುರ್ವೇದಿಮಂಗಳದ ಬಗ್ಗೆ ಹೇಳಿ ಮುಗಿಸುವ ಮೊದಲು ಈ ಅಗ್ರಹಾರ ವಿಜಯನಗರ ಕಾಲದ ನಂತರವೂ ಮುಂದುವರಿಯಿತೆಂಬುದಕ್ಕೆ ಶಾಸನಾಧಾರವನ್ನು ಉಲ್ಲೇಖಿಸಬಹುದು. ಕ್ರಿ .ಶ. ೧೬೬೩ ರಲ್ಲಿ ದೇವರಾಜ ಒಡೆಯರ ಮಗ ದೇವರಾಜ ತನ್ನ ವಿಜಯದಿಂದ ಪಡೆದಿದ್ದ ಮದ್ದೂರು ಗ್ರಾಮವನ್ನು ಅವನು ಸ್ಥಾಪಿಸಿದ್ದ ಕೂಡಲಿ ಅಥವಾ ದೇವರಾಜಪುರ ಅಗ್ರಹಾರಕ್ಕೆ ದಾನಮಾಡಿದನು.[5]

ಕಳಸ: ಮೂಡಿಗೆರೆ ತಾಲ್ಲೂಕಿನ ಕಳಸ ಅಗ್ರಹಾರದ ಸಭೆಯ ಕಾರ್ಯಕಲಾಪ ಗಳನ್ನು ಪರಿಶೀಲಿಸಬಹುದು. ಶಾಸನಗಳಲ್ಲಿ ಕಳಸವನ್ನು ಸಾವಿರ ಗ್ರಾಮವೆಂದು ಕರೆಯ ಲಾಗಿದೆ. ಮೂಡಿಗೆರೆ ಶಾಸನಗಳು ಕಳಸ ಸಾವಿರ ಗ್ರಾಮದ ಮೂವರು ಪ್ರಭುಗಳು ಎಂದು ಸೂಚಿಸುತ್ತವೆ. ಒಂದು ಶಾಸನ "ನಮ್ಮ ಚಾವಡಿಯ ಬುದ್ಧಿವಂತರು" ಎಂದು ತಿಳಿಸುತ್ತದೆ. ವಿಜಯನಗರ ಕಾಲದಲ್ಲಿ "ಚಾವಡಿ" ಎಂಬುದು ಒಂದು ಪ್ರಾದೇಶಿಕ ವಿಭಾಗವಾಗಿತ್ತು ಮತ್ತು ಅದು "ಬುದ್ಧಿವಂತರು" ಎಂದು ಕರೆಯಲ್ಪಡುತ್ತಿದ್ದ ಆ ಸ್ಥಳದ ವಿವೇಕಿಗಳ ಹತೋಟಿಯಲ್ಲಿದ್ದಿತು. ಕಳಸ ಮೂವರು ಗೌಡ ಪ್ರಭುಗಳ ಅಥವಾ ಅವರೊಡನೆ "ಹೆಬ್ಬಾರುವರ" ಹತೋಟಿಯಲ್ಲಿದ್ದಿತು.[6] ಅದು ಇತರ ಶಾಸನಗಳಲ್ಲಿನ ಮಹಾಜನರಿಗೆ ಅಥವಾ "ಹಿರಿಯ ಹಾರುವರು" ಅಥವಾ "ಹಿರಿಯ ಬ್ರಾಹ್ಮಣ"ರಿಗೆ ಅನ್ವಯಿಸುತ್ತಿತ್ತು. ಮಾವಿನ ಕೇರಿ, ಹೊಸಕೇರಿ ಮತ್ತು ಗುಳಕೇರಿಯ ಹೆಬ್ಬಾರುವರು ಒಂದು ದಾನಕ್ಕೆ ಸಾಕ್ಷಿಯಾಗಿದ್ದರು.[7] ಇವು ತಮ್ಮದೇ ಆದ "ಹೆಬ್ಬಾರುವರ"

---

1. *EC*, III, Md. 28.
2. *Ibid.*, 25.
3. *Ibid.*, 5.
4. *Ibid.*, 17.
5. *Ibid.*, 14.
6. *EC*, VI, Mg. Nos. 54, 57, 62 ; *MAR*, 1934, No. 18.
7. *EC*, VI, Mg. No. 62.

ಸಭೆಗಳನ್ನು ಹೊಂದಿದ್ದ ಕಳಸದ ಬೀದಿಗಳಾಗಿದ್ದುವು. ಒಂದು ಶಾಸನವು ಬ್ರಾಹ್ಮಣರ ಬ್ರಹ್ಮಪುರಿಗೆ ಅನ್ವಯಿಸುತ್ತದೆ.[1]

ಕ್ರಿ.ಶ. ೧೩೭೦ ರಲ್ಲಿ ಆ ಪ್ರದೇಶವನ್ನು ವಿರೂಪಣ್ಣ ಒಡೆಯರು ಆಳುತ್ತಿದ್ದಾಗ, ಅವರು ಕಳಸನಾಥದೇವರ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಒಂದು ದಾನಮಾಡಿದರು. ಈ ದಾನವನ್ನು ಅಭಿಷೇಕ, ಪೂಜೆ ಮುಂತಾದ ವ್ರತಗಳನ್ನು ಮಾಡಲು ಬ್ರಾಹ್ಮಣರಿಗೆ ಕೊಡಲಾಯಿತು.[2] ಕ್ರಿ.ಶ. ೧೪೪೯ ರಲ್ಲಿ ಬೈರರಸಒಡೆಯ ಮೂರು "ಪ್ರಭು"ಗಳ ಸಮ್ಮುಖದಲ್ಲಿ ಒಂದು ದಾನಮಾಡಿದನು.[3] ಕ್ರಿ.ಶ. ೧೪೫೩ ರಲ್ಲಿ ಸಾವಿರಗ್ರಾಮದ ಮೂವರು ಗೌಡಪ್ರಭುಗಳ ಹಾಜರಿಯಲ್ಲಿ ಸೋಮಣ್ಣನೆಂಬುವನು ಕಳಸನಾಥದೇವರಿಗೆ, ರುದ್ರಪೂಜೆ ಮಾಡಲು ಮತ್ತು ಒಬ್ಬ ಬ್ರಾಹ್ಮಣನಿಗೆ ಆಹಾರ ಒದಗಿಸಲು ೨೦ "ಗದ್ಯಾಣ" ಗಳನ್ನು ಕೊಟ್ಟನು.[4] ಕ್ರಿ.ಶ. ೧೪೫೩ ರಲ್ಲಿ ಮೂರು ಪ್ರಭುಗಳ ಹಾಜರಿಯಲ್ಲಿ ಕೃಷ್ಣ ಹೆಬ್ಬಾರ ಅದೇ ದೇವರಿಗೆ ಒಂದು ದಾನಮಾಡಿದನು.[5] ಅದೇ ವರ್ಷ ಮತ್ತೊಬ್ಬ ಹೆಬ್ಬಾರ ಕೇಶವದೇವನು ಒಂದು ದಾನಮಾಡಿದನು.[6] ಕ್ರಿ.ಶ. ೧೪೫೪ ರ ಒಂದು ಶಾಸನ ಪೂಜೆ ಗೋಸ್ಕರ ಮಾಡಿದ ದಾನಗಳನ್ನು ದಾಖಲೆಮಾಡಿದೆ. ಈ ನಿದರ್ಶನದಲ್ಲಿ ಗ್ರಾಮದ ಗ್ರಾಮಹೆಬ್ಬಾರುವ ಬ್ರಾಹ್ಮಣಮುಖಂಡರ ಸಮ್ಮುಖದಲ್ಲಿ ಹಣವನ್ನು ಕೊಡಲಾಯಿತು.[7] ಕ್ರಿ.ಶ. ೧೫೧೬ ರಲ್ಲಿ ಕೃಷ್ಣರಾಯ ವೀರ ಇಮ್ಮಡಿ ಭೈರರಸಒಡೆಯರು ಕಳಸರಾಜ್ಯವನ್ನು ಆಳುತ್ತಿದ್ದಾಗ ಶೂರಪ್ಪಸೇನಬೋವ ಕಳಸ ಸಾವಿರಗ್ರಾಮದ ಮೂವರು ಪ್ರಭುಗಳ ಹಾಜರಿಯಲ್ಲಿ ಕಳಸನಾಥದೇವರಿಗೆ ಭೂಮಿಯನ್ನು ದಾನಮಾಡಿದನು.[8] ಪುನಃ ಅದೇ ವರ್ಷ ಕಳಸನಾಥದೇವರ ದೇವಸ್ಥಾನವನ್ನು ಆ ಚಾವಡಿ "ಬುದ್ಧಿವಂತ" ರಿಂದ ದುರಸ್ತು ಮಾಡಲಾಯಿತು. ಮೂವರು ಪ್ರಭುಗಳ ಹಾಜರಿಯಲ್ಲಿ ಅವರು ಕಳಸನಾಥದೇವರ ಒಂದು ತಿಂಗಳ ಅಭಿಷೇಕಕ್ಕೆ ೩೦ "ಗದ್ಯಾಣ"ಗಳನ್ನು ಕೊಟ್ಟರು.[9] ಕ್ರಿ.ಶ. ೧೫೨೪ರಲ್ಲಿ ಮೇಗುಂದದ ಶಂಕಪ್ಪ–ಸೇನಬೋವ ಮೂವರು ಪ್ರಭುಗಳ ಹಾಜರಿಯಲ್ಲಿ ದೇವರಿಗೆ ೧೦ "ಹೊನ್ನು"ಗಳನ್ನು ದಾನಮಾಡಿದನು, ಅಲ್ಲದೆ ಸೂರಪ್ಪ–ಸೇನಬೋವ ಮತ್ತು ಹೆಬ್ಬಾರ ಸಂಸಾರಗಳ ಹಾಜರಿಯಲ್ಲಿ ಉಮ್ಮಕ್ಕ ಎಂಬುವಳು ಆ ಹಣವನ್ನು ತನ್ನ ಮೊಮ್ಮಗ ದೇವರಸನ ವಿವಾಹಕ್ಕೆ ತೆಗೆದುಕೊಂಡು, ಅದಕ್ಕೆ ಬದಲಾಗಿ ಸ್ವಲ್ಪ ಭೂಮಿ

1. *EC*, VI, Mg. No. 67 ; *MAR*, 1934, No. 19.
2. *EC*, VI, Mg. No. 57.
3. *EC*, VI, Mg No. 46.
4. *EC*, VI, Mg. No. 50.
5. *EC*, VI, Mg. No. 54.
6. *EC*, VI, Mg. No. 56.
7. *MAR*, 1934, No. 18.
8. *EC*, VI, Mg. No. 39.
9. *EC*, VI, Mg. No. 41.

ಯನ್ನು ಕೊಟ್ಟಳು.[1] ಕ್ರಿ.ಶ. ೧೫೪೭ ರ ಒಂದು ಶಾಸನ ದಾನಮಾಡಿದವನ ಹೆಸರನ್ನು ತಿಳಿಸದೆ, ಆ ದಾನವನ್ನು ಮೂವರು ಪ್ರಭುಗಳ ಅನುಮತಿಗೆ ಮುಂದಿಡಲಾಯಿತೆಂದು ತಿಳಿಸುತ್ತದೆ.[2] ಕ್ರಿ. ಶ. ೧೫೫೨ ರಲ್ಲಿ ಕಳಸದ ಪಾರುಪತ್ಯವನ್ನು ಮಾಡುತ್ತಿದ್ದ ಭಯಿರಸಣ್ಣಾ ಜಿ, ಮೂರು ಪ್ರಭುಗಳ ಹಾಜರಿಯಲ್ಲಿ ಆ ದೇವರ ಸೋಮವಾರ ವ್ರತಗಳಿಗಾಗಿ ಹಲವು ದಾನವನ್ನು ಮಾಡಿದನು.[3] ಕೊನೆಯದಾಗಿ ಕ್ರಿ.ಶ. ೧೫೫೫ ರಲ್ಲಿ ಮೂರು ಪ್ರಭುಗಳ ಹಾಜರಿಯಲ್ಲಿ ದೇವಣ್ಣ ಹೆಗ್ಗಡೆ ಒಂದು ದಾನಮಾಡಿದನು.[4]

ಮೇಲೆ ತಿಳಿಸಿದ ಶಾಸನಗಳು ಕ್ರಿ.ಶ. ೧೩೭೦ ರಿಂದ ಕ್ರಿ.ಶ. ೧೫೫೫ ರ ವರೆಗಿನ ವರ್ಷಗಳಿಗೆ ಸಂಬಂಧಪಟ್ಟವೆ. ಅವು ಕಳಸ ಅಗ್ರಹಾರದ ಮೂರು ಗೌಡಪ್ರಭುಗಳ ಅನುಮತಿಯನ್ನು ತೆಗೆದುಕೊಂಡ ಚಟುವಟಿಕೆಗಳಿಗೆ ಸಂಬಂಧಪಟ್ಟವೆ. ಅಲ್ಲದೆ ಆ ಸ್ಥಳದಲ್ಲಿ "ಬುದ್ಧಿವಂತರು" ಅಥವಾ ಬ್ರಾಹ್ಮಣಮುಖಂಡರು ಮತ್ತು ಬ್ರಾಹ್ಮಣರ ವಲಸೆಯಾಗಿದ್ದ "ಬ್ರಹ್ಮಪುರಿ" ಇದ್ದಿತು. ವಿಜಯನಗರ ಕಾಲದಲ್ಲಿ ಸ್ವಾಯತ್ತತೆಯನ್ನು ಹೊಂದಿದ್ದ ಅಗ್ರಹಾರಗಳಿಗೆ ಕಳಸ ಒಂದು ನಿದರ್ಶನವಾಗಿದೆ.

ವಿಜಯನಗರ ಕಾಲದಲ್ಲಿ ಬ್ರಾಹ್ಮಣರ ಒಂದು ಲಕ್ಷಣ ಅವರ ಸಾಮೂಹಿಕ ಜೀವನವಾಗಿತ್ತು. ಮಜುಂದಾರ್ ಹೇಳಿರುವ ಹಾಗೆ ಸಾಮೂಹಿಕ ಜೀವನ ನಡೆಸುವ ಸಂಪ್ರದಾಯ ಪುರಾತನಕಾಲದಿಂದ ಬಂದಿತ್ತು.[5] ಈ ಸಂಪ್ರದಾಯವನ್ನು ವಿಜಯನಗರ ಸಾಮ್ರಾಟರು ತಮ್ಮ ಸಾಮ್ರಾಜ್ಯದ ಅಗ್ರಹಾರಗಳಲ್ಲಿ ಮುಂದುವರಿಸಿದರು. ಅಗ್ರಹಾರ ಸ್ವಾಯತ್ತತೆಯ ಹಕ್ಕುಗಳನ್ನು ಹೊಂದಿದ್ದ ಸಂಸ್ಥೆಯಾಗಿದ್ದಿತು. ಅಗ್ರಹಾರಗಳು ಮಹಾಜನರ ಸಾಮೂಹಿಕ ಜೀವನಕ್ಕೆ ಸಾಕ್ಷ್ಯವಾಗಿವೆ.

## ಅಧ್ಯಾಯ ೪

# ಮಹಾನಾಡು ಮತ್ತು ನಾಡು

**ವಿಜಯನಗರ ಕಾಲಕ್ಕೆ ಮೊದಲು "ಮಹಾನಾಡು":** ವಿಜಯನಗರ ಕಾಲದಲ್ಲಿ "ನಾಡು" ಒಂದು ಪ್ರಾದೇಶಿಕ ಸಂಸ್ಥೆಯಾಗಿತ್ತು. ಅದರಲ್ಲಿ ಹಲವು ಗ್ರಾಮಗಳು ಸೇರಿದ್ದುವು. ಹೀಗೆ ನಾಡು ಗ್ರಾಮಕ್ಕಿಂತಲೂ ದೊಡ್ಡದಾದ ರಾಜಕೀಯ ವಿಭಾಗವಾಗಿದ್ದಿತು. ಜಿಲ್ಲೆಯ ಅಥವಾ ವಿಭಾಗದ ನೇರ ಹತೋಟಿ ಹೊಂದಿರದ "ಮಹಾನಾಡು" ಎಂಬ ವ್ಯವಸ್ಥೆಯನ್ನು ನಾವು ಕಾಣುತ್ತೇವೆ. "ಮಹಾನಾಡು" ಒಂದು ದೊಡ್ಡ ಸಭೆ

1. *EC*, VI, Mg. No. 62.
2. *MAR*, 1934, No. 15.
3. *EC*, VI, Mg. No. 40.
4. *EC*, VI, Mg. No. 60.
5. R. C. Majumdar, *Corporate Life in Ancient India*, (Poona, 1922), p. 339.

ಯಾಗಿದ್ದುದರಿಂದ ಅದನ್ನು ಸ್ಥಳೀಯ ಸರ್ಕಾರದ ವಿವರಣೆಯಲ್ಲಿ ಸೇರಿಸುವುದು ಅವಶ್ಯಕ.

ವಿಜಯನಗರದ ಕಾಲಕ್ಕೆ ಮೊದಲು ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ಅನೇಕ ದೊಡ್ಡ ಸಭೆಗಳ ವ್ಯವಹಾರಗಳನ್ನು ಶಾಸನಗಳು ತಿಳಿಸುತ್ತವೆ. ಮಹಾನಾಡು ದಕ್ಷಿಣ ಭಾರತದ ಪ್ರಾಚೀನ ಜನರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಜೀವನದಲ್ಲಿ ಮಹತ್ವದ ಪಾತ್ರವಹಿಸಿದ್ದಿತು. ಅವು ಜನರನ್ನು ಪ್ರತಿನಿಧಿಸಿ ಜನಾನುರಾಗಿಯಾಗಿದ್ದವು.

ಮಧ್ಯಯುಗದ ಕರ್ನಾಟಕದಲ್ಲಿ "ಮಹಾನಾಡು" ಅತ್ಯಂತ ದೊಡ್ಡ ಸ್ಥಳೀಯ ಸಭೆಯಾಗಿದ್ದಿತು.[1] ಅದು ಮೂರು ಬಗೆಯ ಸದಸ್ಯರನ್ನೊಳಗೊಂಡಿದ್ದಿತು. ಜಿಲ್ಲೆಗಳ ಮತ್ತು ಮುಖ್ಯ ನಗರಗಳ ಶ್ರೇಣಿಗಳು, ಸಭೆ ನಡೆಯುತ್ತಿದ್ದ ಸ್ಥಳದ ಪ್ರತಿನಿಧಿಗಳು ಮತ್ತು ಆ ಪ್ರದೇಶದ ಸರ್ಕಾರಿ ಅಧಿಕಾರಿಗಳನ್ನೊಳಗೊಂಡಿತ್ತು. ಕ್ರಿ.ಶ. ೧೧೩೪ ರಲ್ಲಿ ನಡೆದ ಈ ರೀತಿಯ ಒಂದು ಸಭೆಯಲ್ಲಿ ಶ್ರೇಣಿಗಳು, ಕೊಲ್ಲಾಪುರದ (ಈಚಿನ ಕೊಲ್ಹಾಪುರ) ಸಾಮಂತ, ಆತನ ಒಬ್ಬ ಅಧಿಕಾರಿ ಮತ್ತು ಕೂಂಡಿ, ತೊರಂಬಗೆ, ಮೈಸಿಗೆ, ಬಳೆಯ ಪಟ್ಟಣ ಮತ್ತು ಕವಡೆಗೊಲ್ಲಿ ನಗರಗಳ ಪ್ರತಿನಿಧಿಗಳು ಹಾಜರಿದ್ದರು.[2] ಕ್ರಿ.ಶ. ೧೧೪೪ ರಲ್ಲಿ ಇದೇ ರೀತಿಯ ಮತ್ತೊಂದು ಸಭೆ ಸೇಡ್‌ಬಾಳ್‌ನಲ್ಲಿ ನಡೆಯಿತು.[3] ಕ್ರಿ.ಶ. ೧೧೮೬ ರಲ್ಲಿ ನಡೆದ ಒಂದು "ಮಹಾನಾಡು" ಸಭೆಯ ನಿದರ್ಶನವಿದೆ.[4] "ಮಹಾನಾಡು" ರೀತಿಯ ಇನ್ನೊಂದು ಸಭೆ "ಹದಿನೆಂಟು ಜಿಲ್ಲೆಗಳ ನಿವಾಸಿ"ಗಳದ್ದಾಗಿತ್ತು.

ಮಧ್ಯಯುಗದ ಕೇರಳದಲ್ಲೂ "ಹದಿನೆಂಟು ಜಿಲ್ಲೆಗಳ ನಿವಾಸಿ"ಗಳ ಸಭೆ ಇದ್ದಿತು.[5] ತಮಿಳು ನಾಡಿನಲ್ಲಿ ಚೋಳರ ಆಳ್ವಿಕೆಯ ಕೊನೆಯಲ್ಲಿ ಹದಿನೆಂಟು ಜಿಲ್ಲೆಗಳ ಸದಸ್ಯರ ಸಭೆಗಳ ಸಂಘಗಳಿದ್ದುವು. ಒಂದು ಶಾಸನದ ಪ್ರಕಾರ ಭುವನೈಕ–ವಿತ್ರನ್–ಮಡಿಗೈ ವರ್ತಕರ ಸಭೆಯ ಸದಸ್ಯರು ಮತ್ತು ಹದಿನೆಂಟು ಜಿಲ್ಲೆಗಳ ಸಭೆ, ರಾಜಾಧಿರಾಜ ಚತುರ್ವೇದ ಮಂಗಳದ ಜಯನ್ಗೊಂಡ–ಚೋಳೀಶ್ವರ–ಮುಡೈಯ್ಯಾರ್ ದೇವಸ್ಥಾನದ ವಿಕ್ಕಿರಮ ಪಾಂಡಿಯನ್ ಮಂಟಪದಲ್ಲಿ ಸರ್ವರೂ ಸಭೆಸೇರಿ, ಚರ್ಚೆಯನ್ನು ನಡೆಸಿ ದೇವಸ್ಥಾನಕ್ಕೆ ದಾನಗಳನ್ನು ಮಾಡಿದರು. ಇದರಿಂದ ನಾವು ಎರಡು ವಿಷಯಗಳನ್ನು ತಿಳಿಯಬಹುದು. ಮೊದಲನೆಯದಾಗಿ ಸಭೆಯ ಕೆಲಸಕ್ಕೆ ಆವಶ್ಯಕ ಸಂಖ್ಯೆಯ ಸದಸ್ಯರ ಹಾಜರಿ ಇರಬೇಕಾಗಿತ್ತು. ಎರಡನೆಯದಾಗಿ, ಸಭೆ ಸಮ್ಮತಿಯಿಂದ ಚರ್ಚೆ ನಡೆಸಿ ಸದಸ್ಯರಲ್ಲಿ ಒಮ್ಮತದ ಅಭಿಪ್ರಾಯವನ್ನು ತರುತ್ತಿದ್ದಿತು.

1. G. S. Dikshit: *Local Self Government in Mediaeval Karnataka*. pp. 28-35
2. *Ibid*, p. 30; *EI*. XIX, pp. 33-35.
3. *EI*. XIX, pp 37-39.
4. *Karnatak Inscriptions* (Ed., R. S. Panchamukhi), I, pp. 40 off.
5. ಈ ಸಭೆಯ ವಿವರಣೆಗೆ *Indian Historical Quarterly*, IV ನಲ್ಲಿರುವ ಎ. ಗೋವಿಂದ ವಾರಿಯರ್ ಅವರ ಲೇಖನವನ್ನು ನೋಡಿ.

ಇದು ಆ ಸಂಸ್ಥೆಗಳ ಪ್ರಜಾಸತ್ತಾತ್ಮಕ ಲಕ್ಷಣವನ್ನು ತಿಳಿಸುತ್ತದೆ. ಇದೇ ರೀತಿಯ ಸಭೆಗಳು ಸೇರಿದುದಕ್ಕೆ ಮತ್ತು ಅವುಗಳ ವ್ಯವಹಾರಗಳಿಗೆ ಸಂಬಂಧಪಟ್ಟ ಇತರ ಶಾಸನಗಳಿವೆ.[1] ಈ ಶಾಸನಗಳಿಂದ ಈ ಸಭೆಗಳ ಅವಗಾಹನೆಗೆ ವ್ಯವಸಾಯ, ಆಡಳಿತ, ಕಲೆ, ವ್ಯಾಪಾರ ಮತ್ತು ಕೈಗಾರಿಕೆ ವಿಷಯಗಳು ಒಳಪಟ್ಟದ್ದು ವೆಂದು ತಿಳಿಯಬಹುದು. ಇವು ಪ್ರತಿ ಸರ್ಕಾರದ ಗಮನ ಸೆಳೆಯುವ ಮುಖ್ಯ ವಿಷಯಗಳಾಗಿವೆ. ಈ ದೊಡ್ಡ ಸಭೆಗಳಲ್ಲಿ ಸಾಮೂಹಿಕ ಹಿತ ಒಗ್ಗಟ್ಟನುಂಟುಮಾಡುತ್ತಿದ್ದಿತು. ಇದೇ ರೀತಿಯ ಸಾಮೂಹಿಕ ಶಕ್ತಿಯನ್ನು ಮುಂದುವರಿಸಿಕೊಂಡು ಬಂದ "ಮಹಾನಾಡು" ಮತ್ತು ಅದೇ ರೀತಿಯ ಸಭೆಗಳನ್ನು ವಿಜಯನಗರ ಕಾಲದಲ್ಲಿ ಕಾಣಬಹುದು.

**ವಿಜಯನಗರ ಕಾಲದಲ್ಲಿ "ಮಹಾನಾಡು" ಮತ್ತು ಇತರ ದೊಡ್ಡ ಸಭೆಗಳು :** ವಿಜಯನಗರ ಕಾಲದಲ್ಲಿ "ಮಹಾನಾಡು" ಇದ್ದುದನ್ನು ಶಾಸನಗಳು ಸ್ಥಿರಪಡಿಸುತ್ತವೆ. ಕ್ರಿ.ಶ. ೧೫೬೫ ರ ಹೊಳಲ್ಕೆರೆ ತಾಲ್ಲೂಕು ದುಮ್ಮಿಗ್ರಾಮದ ಒಂದು ಶಾಸನದ ಪ್ರಕಾರ ದುಮ್ಮಿಯ ನಿರಾಶ್ರಯ ಮಠದ ಕೆಂಚವೀರಣ್ಣೊಡೆಯ, ದುಮ್ಮಿಯ ಗೌಡರು, ಪಟ್ಟಣಸ್ವಾಮಿ, ಪ್ರಜೆಗಳು ಮತ್ತು ಮಹಾನಾಡು ಅವನಿಗೆ ಬಿಟ್ಟುಕೊಟ್ಟಂತಹ "ಮೂಲವೀಸ" ದೊಳಗೆ ಅರ್ಧಪಾಲನ್ನು ವೀರಭದ್ರದೇವರ ಸೇವೆಗೆ ದಾನಮಾಡಿದನು.[2] ಇದೇ ರೀತಿ ಕ್ರಿ.ಶ. ೧೫೩೫ ರ ಹೊಸಪೇಟೆಯ ಒಂದು ಶಾಸನವು, ಪ್ರಧಾನಿ ತಿರುಮಲರಾಯನ ನಿಯೋಗಿ ಅಬ್ಬರಾಯ ತಿಮ್ಮಪ್ಪ ಹಲವು ಗ್ರಾಮಗಳ "ಮೂಲ ವೀಸ" ವನ್ನು, ತಿರುಮಲದೇವಿಯರ ಪಟ್ಟಣದ ಸೆಟ್ಟಿ, ಪಟ್ಟಣ ಸ್ವಾಮಿಗಳು, ವರದರಾಜಮ್ಮನ ಪಟ್ಟಣದ ಸೆಟ್ಟಿ, ಪಟ್ಟಣ ಸ್ವಾಮಿಗಳು ಮತ್ತು ಕೃಷ್ಣಾಪುರದ ಸೆಟ್ಟಿಪಟ್ಟಣ ಸ್ವಾಮಿಗಳ ಮತ್ತು ದೇಶಾವರದ ಸಾಲುಮೂಲೆ ಮಹಾನಾಡಿನ ಒಪ್ಪಿಗೆಯಿಂದ, ತಿರುಮಲದೇವಿಯರ ಪಟ್ಟಣದ, ತಿರುವೇಂಗಲನಾಥದೇವರ ಸೇವೆಗೆ ದಾನಮಾಡಿದನು.[3] ಈ ಶಾಸನದಿಂದ ಹಲವು ವಿಷಯಗಳನ್ನು ತಿಳಿಯಬಹುದು. ಮೊದಲನೆಯದಾಗಿ, ಇದು ತಿರುಮಲದೇವಿಯರ ಪಟ್ಟಣ, ವರದರಾಜಮ್ಮನ ಪಟ್ಟಣ ಮತ್ತು ಕೃಷ್ಣಾಪುರವೆಂಬ ವಿಜಯನಗರದ ಉಪನಗರಗಳನ್ನು ತಿಳಿಸುತ್ತವೆ. ಎರಡನೆಯದಾಗಿ, ಮಹಾನಾಡು ಮೊದಲಾದ ಸ್ಥಳೀಯ ಸಂಸ್ಥೆಗಳು ಕೇಂದ್ರ ಸರ್ಕಾರದ ಮೇಲೆ ಪ್ರಭಾವ ಬೀರುತ್ತಿದ್ದಿತು. ಇದರಿಂದ ಕೇಂದ್ರ ಸರ್ಕಾರದ ಅಧಿಕಾರಿಗಳು, ಸ್ಥಳೀಯ ಸಂಸ್ಥೆಯ ಸಮ್ಮತಿಯಿಲ್ಲದೆ ತೆರಿಗೆಗಳನ್ನು ಮಾಫು ಅಥವಾ ದಾನ ಮಾಡುತ್ತಿರಲಿಲ್ಲ. ಮೂರನೆಯದಾಗಿ, ವಿಜಯನಗರ ಸರ್ಕಾರ ವರ್ತಕ ಶ್ರೇಣಿಗಳ ಅಸ್ತಿತ್ವವನ್ನು ಉದಾರ ಮನೋಭಾವದಿಂದ ಒಪ್ಪಿಕೊಂಡಿದ್ದಿತು. ಕೊನೆಯದಾಗಿ, ವಿಜಯನಗರದ ಹಿಂದಿನ ಕಾಲದ ಹಾಗೆಯೆ, ಮಹಾನಾಡ ಮುಖ್ಯ

---

1. *SII*, VI, Nos. 41, 47, 439; ಅದೇ, VII, No. 129; ಅದೇ, VIII, Nos. 198, 442
2. *EC*, XI, Hk. 15.
3. *SII*, IX (ii), No. 573.

ಪಟ್ಟಣಗಳ ಶ್ರೇಣಿಗಳು, ಸ್ಥಳದಲ್ಲಿನ ಜನರ ಪ್ರತಿನಿಧಿಗಳು ಮತ್ತು ಆ ಪ್ರದೇಶದ ಸರ್ಕಾರದ ಅಧಿಕಾರಿಗಳನ್ನೊಳಗೊಂಡಿತ್ತು.

ಶಾಸನಗಳು "ಮಹಾನಾಡ ಪ್ರಭು" ಎಂಬ ಅಧಿಕಾರಿಯನ್ನು ತಿಳಿಸುತ್ತವೆ. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು. ಕ್ರಿ.ಶ. ೧೫೦೫ ರ ಒಂದು ಶಾಸನ ಮಹಾಮಂಡಲೇಶ್ವರ ರಾಮರಾಜ ಜಗನ್ನಾಥ, ರಾಜದೇವ ಮಹಾ-ಅರಸು ಮತ್ತು "ಮಹಾನಾಡ ಪ್ರಭು" ಕೆಂಪವೀರಪ್ಪಗೌಡ, ಮಾಚಿನಾಯಕನಿಗೆ ಬಿಟ್ಟನಕುರಿಕೆಯನ್ನು ದಾನಮಾಡಿದುದನ್ನು ದಾಖಲೆ ಮಾಡಿದೆ.[1] ಕ್ರಿ.ಶ. ೧೫೫೩ ರ ಒಂದು ಶಾಸನವು "ಮಹಾನಾಡ ಪ್ರಭು" ಬಿಜಾವರ ಚಿಕ್ಕಪ್ಪಗೌಡನ ಮಗ ಒಂದು ಕೋಟೆಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[2] ಕ್ರಿ.ಶ. ೧೫೫೮ ರಲ್ಲಿ "ಮಹಾನಾಡ ಪ್ರಭು" ಬಿದ್ಯಾವರ ಮುಮ್ಮಡಿ ಚಿಕ್ಕಪ್ಪಗೌಡರಯ್ಯ ಒಂದು ಗ್ರಾಮವನ್ನು ಉಂಬಳಿಯನ್ನು ಕೊಟ್ಟನೆಂದು ತಿಳಿಸುತ್ತದೆ.[3]

ಕ್ರಿ.ಶ. ೧೬೦೬ ರಲ್ಲಿ, ವೆಂಕಟಪ್ಪನಾಯಕನು ಆಳುತ್ತಿದ್ದ ರಾಜ್ಯದಲ್ಲೆಲ್ಲ, ಮಹಾನಾಡ ಸೆಟ್ಟಿ ಸಮಸ್ತರು, ಎಲ್ಲಾ ರಸ್ತೆಗಳಲ್ಲಿ, ಎಲ್ಲಾ ಪ್ರಾಣಿಗಳಿಗೂ, ಇಕ್ಕೇರಿ, ಸದಾಶಿವ, ಸಾಗರ, ಸಿರಿವಂತೆ, ಕೆಸನೂರು, ತವನಿಧಿ, ಗುತ್ತಿ, ಜೆಡೇಯ, ಕುಪತೂರು, ಸೊರಬ, ತೊಗರಸಿ, ಕಬೂರು, ಉಡುಗಣಿ, ಜಂಬೂರು, ಮಹಾದೇವಪುರ, ಕುಂಬಸಿ, ಹರನಹಳ್ಳಿ, ಆನಂದಪುರ, ಮೊಸರೂರು, ಪಂಬುಚ, ದಾನಿವಾಸ, ಆರಗ, ದುರ್ಗ, ಆಗುಂಬೆ, ಕೋವಿ, ಬಾಗುಂಜಿ, ಬೆಳರೆ, ಕಳಸ, ಮೇಗುಂದ, ಕಿಗ್ಗ, ನೆಮ್ಮಾರು, ಮುತ್ತೂರು, ಮುಡೆ, ಕಾರು, ಬಿದಿರೂರು, ಹುಲಿಕಲ್ಲು, ಹನ್ನರ, ಕರೌರು, ಸೌಳನಾಡು, ಸಾವಂತನ ಕಟ್ಟೆ, ಭಾರಂಗಿ ಮತ್ತು ಆವಿನಹಳ್ಳಿ ಠಾಣೆಗಳಲ್ಲಿ "ವಿಸ"ವನ್ನು (ತೆರಿಗೆ) ಧರ್ಮವಾಗಿ ಕೊಡಲು ಒಪ್ಪಿದರು. ಮೇಲೆ ಹೆಸರಿಸಿದ ಮತ್ತು ಇತರ ಠಾಣೆಗಳಲ್ಲಿ ಸರಕುಗಳ ದಾಸ್ತಾನಿನಲ್ಲಿ ಮಹಾನಾಡು ಸೆಟ್ಟರು, ಮಠದ ಶಿವಸೇವೆಗೆ ಒಂದು "ವಿಸ"ವನ್ನು ಕೊಟ್ಟರು.[4] ಕಡೆಯ ಪಕ್ಷ ಹದಿನೇಳನೆ ಶತಮಾನದ ಪ್ರಾರಂಭದ ತನಕ ಇದ್ದ ಮಹಾನಾಡಿನ ಅಸ್ತಿತ್ವಕ್ಕೆ ಇದು ಸಾಕ್ಷಿಯಾಗಿದೆ.

"ಮಹಾನಾಡು" ಸಭೆಯನ್ನು ಹೋಲುತ್ತಿದ್ದ ಇತರ ದೊಡ್ಡ ಸಭೆಗಳನ್ನು ಶಾಸನಗಳು ಉಲ್ಲೇಖಿಸಿವೆ—

(೧) ಕೊಳ್ಳೇಗಾಲ ತಾಲ್ಲೂಕಿನ ವೋಡೆಳ್ಳಿಯ ಒಂದು ಶಾಸನ ಕಂಪಣ್ಣ ಒಡೆಯನ ಕಾಲದಲ್ಲಿ ಒಬ್ಬ ನಾಯಕನು ಬಂಡೆಹಳ್ಳಿ ಮತ್ತು ಮೋಡೆಹಳ್ಳಿ ಗ್ರಾಮಗಳ

---

1. *EC*, XII, Tm. 107.
2. *EC*, XII, Mi. 21.
3. *Ibid.*, Tm. 66.
4. *EC*, VIII, Sa. 123.

ಸುಂಕದ ಒಂದು ಭಾಗವನ್ನು ಮತ್ತು ಸ್ವಲ್ಪ ಭೂಮಿಯನ್ನು ನಾಡು, ನಗರ ಮತ್ತು ನಾನಾದೇಶಿಗಳ ಒಪ್ಪಿಗೆಯಿಂದ, ಮೋಡೆಹಳ್ಳಿಯ ಮಲ್ಲಿನಾಥದೇವರ ಸೇವೆಗೆ ದಾನ ಮಾಡಿದನೆಂದು ತಿಳಿಸುತ್ತದೆ.[1] ಇದು ಒಂದು ದೊಡ್ಡ ಸಭೆಗೆ ಅನ್ವಯಿಸುತ್ತದೆ.

(೨) ಅಂದಿಗೆರೆ ಗ್ರಾಮದ ಒಂದುಶಾಸನದ ಪ್ರಕಾರ ಕ್ರಿ.ಶ. ೧೪೦೪ ರಲ್ಲಿ ಒಂದು ದೊಡ್ಡ ಸಭೆ ಭೂದಾನ ಒಂದನ್ನು ಮಾಡಿತು. ಈ ನಿದರ್ಶನದಲ್ಲಿ, ಆರಗ ಹದಿನೆಂಟು ಕಂಪಣಗಳ ಮತ್ತು ೩ ಪಟ್ಟಣಗಳ ಮುಖಂಡರಾದ ಪ್ರಭುಗಳು, ರಾವುನಾಡು ನಾಲ್ಕು ಮಂದುಗಳ ಮತ್ತು ೬೦ ಗ್ರಾಮಗಳ ಮುಖಂಡರು, ಕೊಬದೆಯ " ದಾನಮೂಲಿಗಳು " ಒಪ್ಪಿ ಕಲ್ಲಪ್ಪ ಮತ್ತು ಮಾಯಣ್ಣ ಎಂಬುವರಿಗೆ ರಾವುನಾಡಿನ ಕೊಗದೆ ಗ್ರಾಮದಲ್ಲಿ ಭೂಮಿಯನ್ನು ದಾನಮಾಡಿದರು.[2]

(೩) ಇನ್ನೊಂದು ಶಾಸನದ ಪ್ರಕಾರ ಕೊಪ್ಪದ ಅಪ್ಪಾಜಿಸೇನಬೋವ, ಕೊಡ ನಾಡಿನ ತುಂಗಭದ್ರ ನದಿಯ ದಡದ ಮೇಲೆ ನಾರಿ ಎಂಬಲ್ಲಿ, ಗೋಪಾಲಕೃಷ್ಣ ದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಕೊಂಡು, ದೇವರ ನೈವೇದ್ಯಕ್ಕೆ ಕೊಟ್ಟನು. ಇದಕ್ಕೆ ಕೊಪ್ಪಕೊಡೆನಾಡು ನಾಲ್ಕುಸಾವಿರದ, ಸಮಸ್ತನಾಡು ಅಧಿಕಾರಿಗಳು, ಕೊಪ್ಪದ ಎರಡು ಅಂಗಡಿಯ ಎಲ್ಲ ಸಾಗುವಳಿಗಾರರು ಮತ್ತು ಬೊಮ್ಮನಪುರ ಮತ್ತು ನಾಗಲಾಪುರ, ನರಸಿಂಹಪುರ ಮತ್ತು ಸೋಮನಾಥಪುರದ ಬ್ರಾಹ್ಮಣರು ಸಾಕ್ಷಿಗಳೆಂದು ತಿಳಿಸುತ್ತವೆ.[3]

ಈ ದೊಡ್ಡ ಸಭೆಗಳು ಅಗ್ರಹಾರಗಳನ್ನು ಸ್ಥಾಪಿಸಿದುವು. ಕ್ರಿ.ಶ. ೧೪೦೫ ರಲ್ಲಿ ೧೮ ಕಂಪಣಗಳ ನಾಡಿನವರು, ಮೂರು ಪಟ್ಟಣದವರು ಮತ್ತು ಗ್ರಾಮಗಳ ಒಡೆಯರು ರಾಜಪ್ರತಿನಿಧಿಯ ಹೆಸರಿನಲ್ಲಿ ಮಾಧವ ವಿರೂಪಾಂಬಿಕಪುರವೆಂಬ ಅಗ್ರಹಾರವನ್ನು ಸ್ಥಾಪಿಸಿದರು.[4] ಇದೇ ರೀತಿ ಕ್ರಿ.ಶ. ೧೪೦೭ ರಲ್ಲಿ ವೀರಣ್ಣ ಒಡೆಯರು ಆರಗವನ್ನು ಆಳುತ್ತಿದ್ದಾಗ, ತಿಪ್ಪಣ್ಣ–ಐಯ್ಯ ಆರಗ ಹದಿನೆಂಟು ಕಂಪಣಗಳ ನಾಡುಜನರ ಮತ್ತು ಮೂರು ಪಟ್ಟಣಗಳ ಸಾಗುವಳಿಗಾರರ ಒಪ್ಪಿಗೆಯಿಂದ ಮೈಸೆಗ್ರಾಮದಲ್ಲಿ ೬೦ ಹೊನ್ನಿಗೆ ಭೂಮಿಯನ್ನು ಬೊಮ್ಮಣ್ಣಐಯ್ಯನೆಂಬುವನಿಗೆ ಅಗ್ರಹಾರಮಾಡಲು ಮಾರಿದರು.[5]

ಶ್ರೇಣಿಗಳು ಪ್ರಾಮುಖ್ಯವಾಗಿದ್ದ ವಿವಿಧ ಸಭೆಗಳನ್ನು ನಾವು ಕಾಣುತ್ತೇವೆ. ಅವು " ಮಹಾನಾಡು "ಗಳನ್ನು ಹೋಲುತ್ತಿದ್ದರೂ ಹಾಗೆ ಕರೆಯಲ್ಪಟ್ಟಿಲ್ಲ. ಈ ರೀತಿಯ ಒಂದು ಸಭೆಗೆ ದೇವಸ್ಥಾನಕ್ಕೆ ಮಾಡಿದ ಒಂದು ದಾನದ ಉಸ್ತುವಾರಿಯನ್ನು ವಹಿಸ ಲಾಗಿತ್ತು. ಕ್ರಿ.ಶ. ೧೪೪೬ ರಲ್ಲಿ, ಎರಡನೆ ದೇವರಾಯನ ಕಾಲದಲ್ಲಿ ತುಳುರಾಜ್ಯವನ್ನಾಳು ತ್ತಿದ್ದ ಆಚರಸಒಡೆಯ, ಪುರುಷೋತ್ತಮಭಟ್ಟನಿಗೆ, ದುರ್ಗಾದೇವಸ್ಥಾನದಲ್ಲಿ ದೇವೀ

---

1. *SII*, IX (ii), 411.
2. *EC*, VIII, Tl. 196.
3. *EC*, VI; Kp. 57.
4. *EC*, VIII, Tl. 105.
5. *Ibid.*, 190.

ಮಹಾತ್ಮೆಯ ಸ್ತೋತ್ರವನ್ನು ಜಪಿಸಲು, ಹನ್ನೆರಡು ಹೊನ್ನುಗಳಷ್ಟು ಚಿನ್ನವನ್ನು ದಾನಮಾಡಿದನು. ಈ ದಾನದ ಉಸ್ತುವಾರಿಯನ್ನು "ನಾಡು", "ನಖರ" ಮತ್ತು ಗ್ರಾಮಸಭೆಗೆಳಿಗೆ ವಹಿಸಲಾಯಿತು. ಈ ದಾನಕ್ಕೆ ನಾಡುಗಳ ಪ್ರತಿನಿಧಿ ಕಾಂಚನದಾನ ಮತ್ತು ಬಳೆಯಲಸ, "ನಖರ"ಗಳ ಪರವಾಗಿ ಸೆಟ್ಟಿಕಾರ ಮನಕನಸೆಟ್ಟಿ ಮತ್ತು ಸಂಗೋಟೋಚಗ್ರಾಮದ ಪರವಾಗಿ ಪದ್ಮನಾಭನ ಮಗ, ದಾಮೋದರಭಟ್ಟ ಸಾಕ್ಷಿಗಳಾಗಿದ್ದರು.[1]

ಗ್ರಾಮಗಳು ದೊಡ್ಡ ಸಭೆಗಳಿಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿಸುತ್ತಿದ್ದುವು. ಕ್ರಿ.ಶ. ೧೪೩೮ ರ ಒಂದು ಶಾಸನ ಒಂದು ದೊಡ್ಡ ಸಭೆ, ಒಂದು ವೀರಗಲ್ಲನ್ನು ಸ್ಥಾಪಿಸಿದುದರ ದಾಖಲೆಯಿಂದ ಈ ವಿಷಯವನ್ನು ತಿಳಿಯಬಹುದು. ದೇವರಾಯನ ಕಾಲದಲ್ಲಿ, ಗತಿಸಿಹೋಗಿದ್ದ ತಿರುಕುನಾಯಕನ ಸಹೋದರ ಕೋಟೆಯಣ್ಣ, ಹಾಡುವಳ್ಳಿ ಮತ್ತು ಕೈಕಿನಿ ನಾಡುಗಳ ಏಳು ಪ್ರಮುಖ ಪ್ರತಿನಿಧಿಗಳು, ಇಪ್ಪತ್ತುನಾಲ್ಕು ಬಳಿಗಳ (ವಿಭಾಗ) ಸಮಸ್ತನಾಡು (ಸಭೆ) ಮತ್ತು ಮಂಕಿ ಮತ್ತು ಸಿರಿಯಾಳಿ ನಾಡುಸಭೆಗಳು ಒಂದು ವೀರಗಲ್ಲನ್ನು ಸ್ಥಾಪಿಸಿದುವು.[2]

"ಮಹಾನಾಡು"ಗಳು ಸಂತೆಗಳನ್ನು ಸ್ಥಾಪಿಸುತ್ತಿದ್ದುವು. ಕ್ರಿ.ಶ. ೧೩೬೨ ರ ಒಂದು ಶಾಸನ, ಕೈವಾರ ನಾಡಿನ ಸಮಸ್ತ ಗೌಡ ಪ್ರಜೆಗಳ ಮತ್ತು ಪೆಕ್ಕ್ಯಂದ್ರ ನಾನಾ ದೇಶಿಗಳ ಮತ್ತು ಹದಿನೆಂಟು ಜಾತಿಗಳ ಸಂಯುಕ್ತ ಚಟುವಟಿಕೆಗಳನ್ನು ತಿಳಿಸುತ್ತದೆ.[3]

ಕ್ರಿ.ಶ. ೧೩೬೭ ರಲ್ಲಿ ಬುಕ್ಕರಾಯನ ಮಗ ವಿರೂಪರಾಯ ಆರಗ. ಹದಿನೆಂಟು ಕಂಪಣಗಳ ರಾಜ ಪ್ರತಿನಿಧಿಯಾಗಿದ್ದಾಗ, ೫೦ ನಾಡಿನ ಜನರು, ವಿರೂಪರಾಯನು ಸುಭದ್ರತೆಯಿಂದ ರಾಜ್ಯಹೊಂದಿರಲು, ಆ ಸ್ಥಳದ ಶಂಕರ ದೇವರ ಸೇವೆಗೆ ಬಂಡಿಗನಳಿ ಗ್ರಾಮದಲ್ಲಿ ಭೂಮಿಯನ್ನು ದಾನಮಾಡಿದರು.[4] ಈ ಶಾಸನ ಮಹಾನಾಡು ಸಭೆಗೆ ಅನ್ವಯಿಸಿದುದಲ್ಲದೆ ಪ್ರಜೆಗಳು ರಾಜನಿಗೆ ಪ್ರೀತಿ ತೋರಿಸಲು ಭೂದಾನ ಮಾಡಿದ್ದನ್ನು ತಿಳಿಸುತ್ತದೆ. ಈ ಶಾಸನಗಳನ್ನು ನಂಬುವುದಾದರೆ, ಪ್ರಜೆಗಳು ತಮ್ಮ ಹಲವು ರಾಜರನ್ನುಮತ್ತು ರಾಜಪ್ರತಿನಿಧಿಗಳನ್ನು ಗೌರವದಿಂದ ಕಾಣುತ್ತಿದ್ದರೆಂದು ತಿಳಿಯುತ್ತದೆ.

"ಮಹಾನಾಡು" ಅಥವಾ ಜಿಲ್ಲಾ ಸಭೆ ಅಪರೂಪವಾಗಿ ಸೇರುತ್ತಿತ್ತು. ವರ್ತಕರು ಅದರ ಸಭೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಅದರ ಕರ್ತವ್ಯಗಳು ವಿಶೇಷವಾಗಿರಲಿಲ್ಲ. ಅದು ಪ್ರದೇಶದ ಆಡಳಿತ ಜವಾಬ್ದಾರಿ ಹೊಂದಿರಲಿಲ್ಲವೆಂದು ಕಾಣುತ್ತದೆ. ಅದಕ್ಕೆ ಸ್ವಂತ ಸಿಬ್ಬಂದಿ ಇರಲಿಲ್ಲ ಮತ್ತು ಅದರ ಆವಶ್ಯಕತೆಯೂ ಇರಲಿಲ್ಲ. ಮಹಾನಾಡಿನ ಪ್ರಾದೇಶಿಕ ವಿಸ್ತೀರ್ಣ, ಸದಸ್ಯತ್ವ ಮತ್ತು ಕರ್ತವ್ಯಗಳು ನಿರ್ದಿಷ್ಟವಾಗಿರಲಿಲ್ಲ.

---

1. Panchamukhi : *Karnatak Inscriptions*, I. No. 58 (1939-40).
2. *Ibid.*, No. 56.
3. *EC* X. Ct. 95.
4 *EC*, VIII, Nr. 34.

## ನಾಡು

“ನಾಡು” ಎಂಬ ಮತ್ತೊಂದು ವಿಧದ ಪ್ರಾದೇಶಿಕ ಸಭೆ ನಾಡು ಎಂಬ ಹೆಸರಿನ ಪ್ರಾದೇಶಿಕ ವಿಭಾಗದಲ್ಲಿ ಕೆಲಸ ಮಾಡುತ್ತಿತ್ತು. ಅದರ ಪ್ರಾದೇಶಿಕ ಹತೋಟಿಯನ್ನು ಈಗಿನ ತಾಲ್ಲೂಕುಗಳು ಅಥವಾ ಹೋಬಳಿಗಳಿಗೆ ಹೋಲಿಸಬಹುದು. ನಾಡು ಒಂದು ಆಡಳಿತ ವಿಭಾಗವಾಗಿದ್ದು ನಾಡು ಸಭೆ, ಹಲವು ಗ್ರಾಮಗಳ ಒಂದು ಸಭೆಯಾಗಿದ್ದು ಪದೇ ಪದೇ ಸೇರುತ್ತಿದ್ದಿತು. ನಾಡಿನ ಜನರು ಈ ಸಭೆಯಲ್ಲಿ ಸೇರಿದ್ದರೆಂದು ತಿಳಿಸುವುದಕ್ಕೆ ಅನೇಕ ಪದಗಳನ್ನು ಬಳಸಿರುವುದನ್ನು ಮುಂದೆ ತಿಳಿಸಲಾಗಿದೆ. ಈ ಸಭೆಯ ರಚನೆಗೆ ಗ್ರಾಮಗಳ ಹಿತಾಸಕ್ತಿಯೆ ಕಾರಣವಾಗಿದ್ದಿತು. ಮುಂದೆ ತಿಳಿಸಿರುವ ಹಾಗೆ ಇದು ನೀರಾವರಿ, ತೆರಿಗೆ, ನ್ಯಾಯವಿತರಣೆ ಮತ್ತು ಆಡಳಿತ ಮೊದಲಾದ ಕರ್ತವ್ಯಗಳ ಜವಾಬ್ದಾರಿ ಹೊಂದಿದ್ದಿತು.

ಪುರಾತನ ಮತ್ತು ಮಧ್ಯ ಯುಗದ ದಕ್ಷಿಣ ಭಾರತದಲ್ಲಿ ನಾಡು ವ್ಯವಸ್ಥೆ ಇದ್ದಿತು. ಅದು ಸ್ಥಳೀಯ ವಿಷಯಗಳಲ್ಲಿ ಕಾರ್ಯ ಕೈಗೊಳ್ಳುವ ಮತ್ತು ಸ್ಥಳೀಯ ವ್ಯವಸ್ಥೆಗೆ ಸಂಬಂಧಪಟ್ಟ ಅಧಿಕಾರಗಳನ್ನು ಹೊಂದಿದ್ದಿತು. ಅದು ಕಾನೂನುಗಳನ್ನು ಮಾಡುವ ನಿರ್ದಿಷ್ಟ ಕರ್ತವ್ಯವನ್ನು ಹೊಂದಿದ್ದಿತು.

“ನಾಡು” ಸಭೆಗೆ ಅತ್ಯಂತ ಮುಂಚಿನ ದಾಖಲೆ ಕ್ರಿ.ಶ. ೫ ನೆ ಶತಮಾನದ ಹಲ್ಮಿಡಿ ಶಾಸನದಲ್ಲಿ ದೊರಕುತ್ತದೆ.[1] ಸುಮಾರು ಕ್ರಿ.ಶ. ೯೫೦ ರ ಮೈಸೂರು ಜಿಲ್ಲೆಯ ಅಟ್ಕೂರಿನ ಒಂದು ಶಾಸನ ದಾನವಾಗಿ ಕೊಟ್ಟಂತಹ ಭೂಮಿಯ ಸಾಗುವಳಿಯನ್ನು “ನಾಡು” ಮತ್ತು “ಗ್ರಾಮ” ನಿಯಂತ್ರಿಸುವುದೆಂದು ತಿಳಿಸುತ್ತದೆ.[2] ಕರ್ನಾಟಕದಲ್ಲಿ ಕ್ರಿ.ಶ. ೧೦ ನೆ ಶತಮಾನದ ಮಧ್ಯದಿಂದ “ನಾಡು” ಸ್ವಾಯತ್ತತೆಯನ್ನು ಹೊಂದಿದ್ದ ಆಡಳಿತ ವಿಭಾಗವಾಗಿತ್ತೆಂದು ಶಾಸನಗಳಿಂದ ತಿಳಿಯುತ್ತದೆ.[3] ನಾಡು ವಿಜಯನಗರ ಕಾಲದಲ್ಲಿಯೂ ಮುಂದುವರಿಯಿತು, ಮತ್ತು ಡಾ. ಮಹಾಲಿಂಗಂ ಹೇಳಿರುವ ಹಾಗೆ ಗ್ರಾಮ ಸಭೆಯಂತೆಯೇ ಅಧಿಕಾರ ಹೊಂದಿದ್ದಿತು. ಆದರೆ ಹತೋಟಿ ಇನ್ನೂ ಹೆಚ್ಚಿನ ಪ್ರದೇಶಕ್ಕೆ ಆವರಿಸಿದ್ದಿತು.[4] ಅವರ ಪ್ರಕಾರ ಸ್ಥಳೀಯ ಪ್ರದೇಶಗಳಲ್ಲಿ “ನಾಡು” ಮತ್ತು “ಸಭ” ಅರ್ಧ ಸ್ವಾತಂತ್ರ್ಯ ಹೊಂದಿದ ಗಣರಾಜ್ಯಗಳಾಗಿದ್ದುವು ಮತ್ತು ತಮ್ಮ ಪ್ರದೇಶಗಳಲ್ಲಿ ಆಡಳಿತದ ಕೆಲವು ಭಾಗಗಳನ್ನು ನಡೆಸುವ ಜವಾಬ್ದಾರಿಯನ್ನು ಹೊಂದಿದ್ದಿತು.[5] ಆದರೆ ತಿರುಚಿನಾಪಳ್ಳಿ, ತಂಜಾವೂರು ಮತ್ತು ರಾಮನಾಡ್ ಜಿಲ್ಲೆಗಳು, ಪುದುಕೊಟ್ಟೈ ಸಂಸ್ಥಾನ ಮುಂತಾದ ತಮಿಳುನಾಡಿನ ಹಲವು ಭಾಗಗಳಲ್ಲಿ ಕ್ರಿ.ಶ. ೧೪

1. *MAR*, 1936, No. 16.
2. *EC*, III, Md. 41.
3. Dikshit: *op.cit.*, pp. 35–57.
4. Mahalingam: *Admn.*, pp. 215–216.
5. *Ibid.*, p. 216.

ರಿಂದ ೧೬ ನೆ ಶತಮಾನದವರೆಗೆ ಸ್ಥಳೀಯ ಸಂಸ್ಥೆಗಳು ತಮ್ಮ ಪ್ರಭಾವವನ್ನು ಕಳೆದು ಕೊಂಡು ಅವ್ಯವಸ್ಥೆಗೊಳಗಾಗಿದ್ದವೆಂದು ಕಾಣುತ್ತದೆ.[1]

**ನಾಡಿನ ಅಧಿಕಾರಿಗಳು :** ಗ್ರಾಮಗಳಲ್ಲಿ ಗೌಡರು ಮತ್ತು ಪ್ರಭುಗಳು ಅಧಿಕಾರಿಗಳಾಗಿದ್ದುದನ್ನು ಹಿಂದೆಯೆ ತಿಳಿಸಲಾಗಿದೆ. ಗ್ರಾಮಸಮುದಾಯಗಳು ಅಥವಾ ನಾಡುಗಳು ಅಥವಾ ಕಂಪಣಗಳಲ್ಲಿ ನಾಡಗೌಡರು ಅಥವಾ ನಾಡ ಪ್ರಭುಗಳೆಂಬ ಅಧಿಕಾರಿಗಳು ಇದ್ದರು.

ಕ್ರಿ.ಶ. ೧೪೯೯ ರಲ್ಲಿ ಹಲವು ಗ್ರಾಮಗಳ "ನಾಡ ಗೌಡಿಕೆ"ಯನ್ನು ರಾಮಗೌಡನು ಹೊಂದಿದ್ದನು.[2] ಕೃಷ್ಣದೇವರಾಯನ ಆಳ್ವಿಕೆಯ ಒಂದು ಶಾಸನ "ನಾಡಗೌಡ"ರಿಗೆ ಸಂಬಂಧಿಸಿದುದಾಗಿದೆ.[3] ಮತ್ತೊಂದು ಶಾಸನ ವಿಜಯನಗರದ ನಾಡಗೌಡರೆಲ್ಲರ ಸಭೆ ಭೂದಾನ ಮಾಡಲು ಸೇರಿತ್ತೆಂದು ತಿಳಿಸುತ್ತದೆ.[4] ಕ್ರಿ.ಶ. ೧೫೫೧ ರಲ್ಲಿ ತಾಳವಾಡಿ ಬಮ್ಮಣ್ಣ, ಗಂಗವಾಡಿ ಮಾದಣ್ಣ ಮತ್ತು ಅನೇಕ ಇತರರು ಕುಲರ್ವಾಲಿ ನಾಡು ಪ್ರಭುಗಳಾಗಿದ್ದರು.[5] ಕ್ರಿ. ಶ. ೧೫೭೭ ರಲ್ಲಿ ನಸವಂದುನಾಡಿನ ಸಮಸ್ತ ನಾಡ ಪ್ರಭುಗಳು ದಾನಕ್ಕೋಸ್ಕರ ಸೇರಿದ್ದರು.[6] ಕ್ರಿ.ಶ. ೧೫೮೪ ರ ಒಂದು ಶಾಸನ ಕೋಳಲದ ನಾಡು ಪ್ರಭುಗಳನ್ನು ಹೆಸರಿಸುತ್ತದೆ.[7] ಕ್ರಿ.ಶ. ೧೮೦೪ ರ ಒಂದು ಶಾಸನ ಆರಗವೇಂಠೆ ಹದಿನೆಂಟು ಕಂಪಣಗಳ ನಾಡುಗಳ ಪ್ರಮುಖರಾಗಿದ್ದ "ಪ್ರಭು"ಗಳಿಗೆ ಸಂಬಂಧಿಸಿದೆ.[8] ಕ್ರಿ. ಶ. ೧೬೨೬ ರಲ್ಲಿ ಕೆಂಪಯ್ಯಗೌಡ ಯಲಹಂಕದ ನಾಡಪ್ರಭುವಾಗಿದ್ದನು.[9] ಕ್ರಿ.ಶ. ೧೬೫೭ ರಲ್ಲಿ ಸದಿಪನೆಂಬುವನು ತಲಕಾಡು ನಾಡಿನ "ಪ್ರಭು" ವಾಗಿದ್ದನು.[10] ಕ್ರಿ.ಶ. ೧೬೮೩ ರಲ್ಲಿ ಸಿತಾಕಲ್ ಗಂಗಪ್ಪನಾಯಕ ಕೋಳಲ ಸೀಮೆಯ ನಾಡಗೌಡಿಕೆಯನ್ನು ಹೊಂದಿದ್ದನು.[11]

ನಾಡಿನ "ಪ್ರಭು" ಅನೇಕ ವೇಳೆ ಒಂದು ಗ್ರಾಮದ ಮುಖಂಡನಾಗಿದ್ದನೆಂದು ಕಾಣುತ್ತದೆ. ಉದಾಹರಣೆಗೆ, ನಾಯರ ಖಂಡ ಮಳುನಾಡಿನ ಪಿಠಮಣೆ ಗ್ರಾಮಕ್ಕೆ ಸಂಕಣ್ಣನೆಂಬುವನು ಮುಖಂಡನಾಗಿದ್ದು, ಆ ನಾಡಿನ "ಪ್ರಭು"ವೂ ಆಗಿದ್ದನು.[12]

---

1. Venkatarama Ayyar, K. P.: Anarchy in a part of the Tamilnad ;...... *PIHC*, 1944 pp. 300-305.
2. *EC*, XII, Mi. 20.
3. *EC*, X, Sd. 79.
4. *MAR*, 1925, p. 19.
5. *EC*, IX, Cp. 16.
6. *EC*, IX, Cp. 16.
7. *EC*, X, Kl. 80.
8. *EC*, VIII, Tl. 196.
9. *EC*, XII, Kg. 23.
10. *MAR*, 1947-56, No. 33.
11. *EC*, XII, Tm. 59.
12. *EC*, VIII, Sb. 265.

ನಾಡಿನ ಮುಖ್ಯಸ್ಥನನ್ನು ಸೂಚಿಸಲು "ಯಜಮಾನ"ಎಂಬ ಪದವನ್ನು ಬಳಸಲಾಗುತ್ತಿದ್ದಿತೆಂದು ಕಾಣುತ್ತದೆ. ಕ್ರಿ.ಶ. ೧೫೨೭ ರ ಚನ್ನಪಟ್ಟಣ ತಾಲ್ಲೂಕಿನ ಹೊಸಹಳ್ಳಿ ಶಾಸನ, "ವಿಜಯಪುರದ ಅಶೇಷ ನಾಡು ಗೌಡುಗಳು" ಬೈರಪ್ಪ ನಾಯಕನಿಗೆ ಯಜಮಾನತನಕ್ಕೆ ಕೊಟ್ಟ ಮಾನ್ಯದ ಗದ್ದೆಯನ್ನು ದಾಖಲೆಮಾಡಿದೆ.[1] ಕೋಲಾರ ಜಿಲ್ಲೆಯ ಯಲ್ದೂರು ಹೋಬಳಿಯ ಹರಳುಕುಂಟೆ ಗ್ರಾಮದ ಒಂದು ಶಾಸನ ಒಂದು ನಾಡಿನ ಸ್ವಾಮಿತನದ ಹುದ್ದೆಯನ್ನು, ಒಣಭೂಮಿಯ ದಾನ ಮತ್ತು ಕಂದಾಯದ ವಸೂಲಿಯೊಡನೆ ನಾಡಿನವರು ವೆಂಗಟಸೆಟ್ಟಿಗೆ ಕೊಟ್ಟರೆಂದು ತಿಳಿಸುತ್ತದೆ.[2]

**ನಾಡಗೌಡನ ನೇಮಕ :** ವಿಜಯನಗರದ ಹಿಂದಿನ ಕಾಲದಲ್ಲಿ ನಾಡಗೌಡನನ್ನು ರಾಜನು ನೇಮಕ ಮಾಡುತ್ತಿದ್ದ ಪದ್ಧತಿ, ನಂತರವೂ ಮುಂದುವರಿಯಿತೆಂದು ಕಾಣುತ್ತದೆ. ರಾಜ ಮತ್ತು ರಾಜನ ಅಧಿಕಾರಿಗಳಿಗೆ ನಾಡಗೌಡನ ನೇಮಕ ಸಾಮಾನ್ಯವಾಗಿ ಸೇರಿದ್ದಿತು. ನಾಡಗೌಡನ ಹುದ್ದೆ ವಂಶಪಾರಂಪರ್ಯವಾಗಿದ್ದಿತು.[3]

ಕ್ರಿ.ಶ. ೧೪೮೯ ರ ಮದ್ದಗಿರಿಯ ಒಂದು ಶಾಸನ ಸಿಂಗೇಗೌಡನ ಮಗ ರಾಮಗೌಡ ಮದ್ದಗಿರಿಹಳ್ಳಿಯನ್ನು ಗೌಡರ "ಕೊಡಗೆ ಮಾನ್ಯ"ವಾಗಿ ಕೊಟ್ಟದ್ದನ್ನು ಮತ್ತು ವೋದಿನ ಕಾಲುವೆ ಕೆಳಗೆ ಇನ್ನೂ ಎರಡು ಸಾವಿರ ಅಡಕೆ ಮರಗಳನ್ನು ನೆಡುವಷ್ಟು ಭೂಮಿಯನ್ನೂ ಮತ್ತು ಪ್ರತಿ ಗ್ರಾಮದ ನಾಡಗೌಡಿಕೆಯನ್ನು ಕೊಡಲಾಯಿತೆಂದು ತಿಳಿಸುತ್ತದೆ.[4] ಈ ದಾನವನ್ನು ಶೌಭಲರಾಯ ಒಡೆಯರು ಬರೆಸಿದರು. ಈ ಶಾಸನ ಶೌಭಲರಾಯ ಒಡೆಯರು ಹೊಂದಿದ್ದ ಹುದ್ದೆಯನ್ನು ತಿಳಿಸಿಲ್ಲ.

ಕ್ರಿ. ಶ. ೧೫೪೩ ರಲ್ಲಿ ಬಯಿರಪ್ಪನಾಯಕನ ನಿಯೋಗಿಗಳಾಗಿದ್ದ ಕಂಪಣ್ಣ ನಾಯಕ ಮತ್ತು ನಂದ್ಯಪ್ಪನಾಯಕ, ಸಿತಾಕಲ್ ಗಂಗಪ್ಪನಾಯಕನಿಗೆ ಒಂದು ಗ್ರಾಮದ ನಾಡಗೌಡಿಕೆಗೆ ಮಾಡಿದ ದಾನವನ್ನು ಶಾಸನ ತಿಳಿಸುತ್ತದೆ. ಇದರ ಪ್ರಕಾರ, ಆತನಿಗೆ ಕೊಳಲ ನಾಡ ಸೀಮೆಯ ಒಮ್ಮೂಚಿ ಹಳ್ಳಿಯನ್ನು ಶಾಶ್ವತವಾದ ದತ್ತಿಯಾಗಿ ಕೊಡಲಾಯಿತು.[5] ಈ ಶಾಸನದಿಂದ ರಾಜನ ಅಧಿಕಾರಿಗಳು ನಾಡಗೌಡನನ್ನು ನೇಮಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ವೆಂಕಟಪತಿ ದೇವ ಮಹಾರಾಯನ ಆಳ್ವಿಕೆಯಲ್ಲಿ ಮಹಾನಾಯಕಾಚಾರ್ಯ ಹರತಿ ಇಮ್ಮಡಿ ರಂಗಪ್ಪನಾಯಕನ ಮಗ ಹುಂಗಹತಿ ನಾಯಕನ ಸಂಸಾರದ ಬಂಧುಗಳು ಮತ್ತು ಇತರರು ನಾಡಗೌಡನಿಗೆ ಒಂದು ಶಿಲಾಶಾಸನವನ್ನು ದಯಪಾಲಿಸಿದರು.[6] ಈ ಶಾಸನ ಕ್ರಿ. ಶ. ೧೬೧೭ ರಲ್ಲಿ ಗೌಡಿಕೆಗೆ ಹಕ್ಕನ್ನು ತಪ್ಪಾಗಿ ಹಾಕಿದುದನ್ನು

1. *MAR*, 1925, No. 5.
2, *Ibid.*, No, 100.
3. *EC*, VII, Sk. 219.
4. *EC*, XII, Mi. 20.
5. *EC*, XII, Tm. 59.
6. *EC*, XII, Si. 84.

ತೀರ್ಮಾನಿಸಿದ ಕುತೂಹಲಕರವಾದ ಒಂದು ಮೊಕದ್ದಮೆಯ ವಿವರವನ್ನು ಕೊಡುತ್ತದೆ. ಈ ಶಾಸನದಿಂದ ಕೆಲವು ವಿಷಯಗಳನ್ನು ತಿಳಿಯಬಹುದು. ಮೊದಲನೆಯದಾಗಿ, ರಾಜನು ನಾಡಗೌಡಿಕೆಯನ್ನು ಕೊಡಬಹುದಾಗಿತ್ತು. ಈ ಶಾಸನ ವೀರ ಬಲ್ಲಾಳ ರಾಯ ಮೊದಲು ನಾಡ ಗೌಡಿಕೆಯನ್ನು ಕೊಟ್ಟನೆಂದೂ ಮತ್ತು ಅನಂತರ ವಿಜಯ ನಗರ ರಾಜರು ಮುಂದುವರಿಸಿದರೆಂದೂ ತಿಳಿಸುತ್ತದೆ. ಎರಡನೆಯದಾಗಿ, ನಾಡಗೌಡಿಕೆ ಹುದ್ದೆ ವಂಶಪಾರಂಪರ್ಯವಾಗಿತ್ತೆಂದು ತಿಳಿಸುತ್ತದೆ. ಈ ವ್ಯಾಜ್ಯ ಉದ್ಭವಿಸುವ ವರೆವಿಗೆ ಆ ಹುದ್ದೆ ವಂಶಪಾರಂಪರ್ಯವಾಗಿತ್ತು. ಮೂರನೆಯದಾಗಿ, ಗೌಡಿಕೆಯನ್ನು ಇತರ ಸಾಮಾನುಗಳಂತೆ ಕ್ರಯ ಮಾಡುವ ರೂಢಿಯಿತ್ತು. ಈ ಸಂದರ್ಭದಲ್ಲಿ ಕ್ರಿ.ಶ. ೧೫೮೧ರಲ್ಲಿ ಸಿದ್ಧಾಪುರದ ಸಿದ್ದಣ್ಣಗೌಡ, ತನಗೆ ಸೇರಿದ್ದ ರೊಟ್ಟಿಹಳ್ಳಿ, ಗೌಡಿಕೆಯನ್ನು ೨೦೦ ವರಹಗಳಿಗೆ ಮಹಾನಾಯಕಾಚಾರ್ಯ ಕವೆಗೆತಿ ಸೆಗಲೆ ಹನುಮೆನಾಯಕನ ಮೊಮ್ಮಗ ಮದಕೆರಿನಾಯಕನಿಗೆ ಮಾರಿದ ಶಾಸನವನ್ನು ತಿಳಿಸಬಹುದು.[1] ನಾಲ್ಕನೆಯ ದಾಗಿ, ವಿಜಯನಗರ ಕಾಲದಲ್ಲಿ ನಾಡಗೌಡಿಕೆ ಮುಂದುವರಿಯಿತು ಮತ್ತು ಕೊನೆಯ ದಾಗಿ ಕ್ರಿ.ಶ. ೧೬೧೨ರಲ್ಲಿ ವೆಂಕಟಪತಿದೇವ ಮಹಾರಾಯನ ಆಳ್ವಿಕೆಯಲ್ಲಿ ಈ ವ್ಯಾಜ್ಯ ಉಂಟಾದಾಗ, ಮಹಾನಾಯಕಾಚಾರ್ಯನ ಮಗನ ಬಂಧುಗಳು ಮತ್ತು ಇತರರು ಇದನ್ನು ತೀರ್ಮಾನಿಸಿದರು.

**ನಾಡಗೌಡನ ಸಂಭಾವನೆ :** ತಮಿಳು ಜಿಲ್ಲೆಗಳಲ್ಲಿ ನಿರ್ದಿಷ್ಟ ಸೇವೆಗೆ "ಉಂಬಳಿ" ಭೂಮಿಯ ಅನುಭೋಗದಿಂದ ಸಂಭಾವನೆ ಸಲ್ಲಿಸುತ್ತಿದ್ದರು. ("ಉಂಬಳಿ" ಎಂದರೆ ಸಾರ್ವಜನಿಕ ಸೇವೆಗಾಗಿ ವ್ಯಕ್ತಿಗಳಿಗೆ ದಾನಮಾಡುತ್ತಿದ್ದ ಕಂದಾಯ ಮಾಫಿ ಮಾಡಿದ ಭೂಮಿ). ಕನ್ನಡ ಜಿಲ್ಲೆಗಳಲ್ಲಿ ಯಾವುದಾದರು ಸೇವೆಗೆ ಅಥವಾ ಉದ್ದೇಶಕ್ಕೆ ಭೂಮಿ ಯನ್ನು ದಾನಮಾಡುತ್ತಿದ್ದುದನ್ನು "ಕೊಡಗೆ" ಅಥವಾ "ಕೊಡಂಗೈ" ಎಂದು ಕರೆಯುತ್ತಿದ್ದರು. ನಾಡ ಗೌಡಿಕೆಗೆ ಅನೇಕ ಸಂದರ್ಭಗಳಲ್ಲಿ "ದಂಡಿಗೆ ಉಂಬಳಿ" ನೀಡ ಲಾಗುತ್ತಿತ್ತು. ಕ್ರಿ.ಶ. ೧೫೮೩ ರಲ್ಲಿ ಕೊಳಲ ಸೀಮೆಯ ನಾಡ ಗೌಡಿಕೆಗೆ ಸಿತಾಕಲ್ ಗಂಗಪ್ಪನಾಯಕನಿಗೆ ಆ ಸೀಮೆಯ ಎಲ್ಲ ಗ್ರಾಮಗಳ ತರಿ ಮತ್ತು ಒಣ ಭೂಮಿಗಳ ತೆರಿಗೆ ರಿಯಾಯಿತಿ ಮತ್ತು ಎಲ್ಲ ಹಕ್ಕುಗಳೊಡನೆ ಒಮ್ಮಚಹಳ್ಳಿಯನ್ನು ದಂಡಿಗೆ ಉಂಬಳಿಯಾಗಿ, ಶಾಶ್ವತ ದತ್ತಿಯಾಗಿ ಕೊಡಲಾಯಿತು.[2]

ನಾವು "ಕೊಡಗೆ ಮಾನ್ಯ", "ಪುರಿಮಾನ್ಯ", "ಕಟ್ಟು ಕೊಡಗೆ", "ದಯಿನ್ಯ ಕೊಡಗೆ" "ಸತಿಗೆ ಕೊಡಗೆ" ಮತ್ತು "ನೆತ್ತರು ಕೊಡಗೆ" ಮುಂತಾದ ನಾನಾ ರೀತಿಯ "ಮಾನ್ಯ" ದಾನಗಳನ್ನು ಕಾಣಬಹುದು. ಕ್ರಿ.ಶ. ೧೪೮೯ ರ ಶಾಸನವೊಂದು ರಾಮಗೌಡನಿಗೆ ಮದ್ದಗಿರಿ ಹಳ್ಳಿಯಲ್ಲಿ ೩೦೦೦ ಅಡಕೆಮರಗಳಿಗೆ ನಿವೇಶನವನ್ನು

1. *EC*, XI, Cd. 48.
2. *EC*, XII, Tm. 39.

“ ಕೊಡಗೆ ಮಾನ್ಯ”ವಾಗಿ ಕೊಡಲಾಯಿತು[1] ಎಂದು ತಿಳಿಸುತ್ತದೆ. ಈ ಉದಾಹರಣೆಗಳಿಂದ ನಾಡ ಗೌಡಿಕೆಗೆ ಸಮಸ್ತ ಹಕ್ಕುಗಳೊಡನೆ ಶಾಶ್ವತ ಕೊಡುಗೆಯಾಗ “ ದಂಡಿಗೆ ಉಂಬಳಿ ” ಗ್ರಾಮವನ್ನು ಕೊಡಲಾಗುತ್ತಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಅನೇಕ ವೇಳೆ ಯಾವುದಾದರು ಒಂದು ವಿಧದ ಮಾನ್ಯ ದಾನವನ್ನು ಕೊಡಲಾಗುತ್ತಿತ್ತು.

ಕೋಲಾರ ಜಿಲ್ಲೆಯ ಯಲ್ದೂರು ಹೋಬಳಿಯ ಹರಲಕುಂಟೆ ಶಾಸನದಿಂದ ನಾಡಗೌಡನ ಸಂಭಾವನೆಗಳ ವಿವರಗಳನ್ನು ತಿಳಿಯಬಹುದು. ಈ ಶಾಸನದ ಪ್ರಕಾರ, ನಾಡಿನ ಜನರು ಅರ್ಧ ಖಂಡುಗ ಬತ್ತವನ್ನು ಉಳುವ ಭೂಮಿ, “ ಆಯ ” (ಒಂದು ತೆರಿಗೆ) ವನ್ನು ವಸೂಲು ಮಾಡುವ ಹಕ್ಕು, “ ಮನೆ ಪಟ್ಟು” (ಮನೆ ತೆರಿಗೆ) ಮತ್ತು ವ್ಯಾಪಾರ ಸಾಮಗ್ರಿಗಳ ಮೇಲಿನ ಸುಂಕವನ್ನು ಕೊಡುತ್ತಿದ್ದರೆಂದು ತಿಳಿಯುತ್ತದೆ.[2] ಕ್ರಿ.ಶ. ೧೩೦೭ರ ಹೊನ್ನೆಕೆರೆ ಶಾಸನದ ಪ್ರಕಾರ ನಾಡ ಹೆಗ್ಗಡೆಗೆ, ೪೦ ಗ್ರಾಮಗಳ ಪ್ರತಿಯೊಂದರಿಂದಲೂ ಒಂದು “ ಪಣ ”, ಮೂವತ್ತು ಗ್ರಾಮಗಳ ಪ್ರತಿಯೊಂದರಿಂದ ಅರ್ಧಪಣ ಮತ್ತು ಸಂತೆಯ ಸುಂಕ ಮುಂತಾದುವುಗಳನ್ನು ಕೊಡಲಾಗುತ್ತಿದ್ದಿತೆಂದು ತಿಳಿಯುತ್ತದೆ.[3] ಈ ದಾಖಲೆಗಳು ನಾಡಿನ ಜನರು ಸಾಮೂಹಿಕವಾಗಿ ಮುಖ್ಯಸ್ಥನನ್ನು ನೇಮಿಸುವುದು ಮತ್ತು ಆ ಹುದ್ದೆಯ ಪ್ರಾಮುಖ್ಯ ಮತ್ತು ಅವನ ಸಂಭಾವನೆಗಳನ್ನು ತಿಳಿಸುತ್ತವೆ. ಈ ಮೇಲಿನ ಉದಾಹರಣೆಗಳಿಂದ ನಾಡಗೌಡನ ಸಂಭಾವನೆಯು—(೧) ಮಾನ್ಯಭೂಮಿ, (೨) “ ಆಯ ” ಅಥವಾ ಶುಲ್ಕ, (೩) ವ್ಯಾಪಾರ ಸರಕುಗಳ ಮೇಲಿನ ಸುಂಕ ಮತ್ತು (೪) ಮನೆ ತೆರಿಗೆಗಳಿಂದ ಬರುತ್ತಿದ್ದಿತೆಂದು ತಿಳಿಯಬಹುದು.

ನಾಡಗೌಡನ ಕರ್ತವ್ಯಗಳು: ನಾಡಗೌಡನ ಕರ್ತವ್ಯಗಳು ವಿಜಯನಗರ ಕಾಲದ ಮೊದಲು ಇದ್ದಂತೆಯೆ ಮುಂದುವರಿಯಿತೆಂದು ಕಾಣುತ್ತದೆ.[4] ಕ್ರಿ.ಶ. ೧೬೧೭ರ ಒಂದು ಶಾಸನ ಕೈವಾರ ನಾಡಿನ ನಿವಾಸಿಗಳು ಪ್ರತಿ ಮಂಗಳವಾರ ಆ ನಾಡನ್ನು ಕಾಪಾಡುವ ದೇವತೆ ಚಾಮುಂಡೇಶ್ವರಿಗೆ ಒಂದು ಕುರಿಯನ್ನು ಕೊಡಲು ನಿರ್ಧರಿಸಿದರೆಂದೂ ಮತ್ತು ಆ ನಾಡಿನ ಗಾವುಂಡ ಇದರ ಜವಾಬ್ದಾರಿ ಹೊಂದಿರಬೇಕೆಂದೂ ತಿಳಿಸುತ್ತದೆ.[5] ಅವನ ಕರ್ತವ್ಯಗಳು ತೆರಿಗೆಗಳ ವಸೂಲು, ನ್ಯಾಯವಿತರಣೆ ಮತ್ತು ಅವನ ಹತೋಟಿಯಲ್ಲಿದ್ದ ದೇವಸ್ಥಾನಗಳ ಉಸ್ತುವಾರಿ ಮುಂತಾದುವುಗಳಾಗಿದ್ದುವು. ಅವನು ನಾಡು ಸಭೆಯ ಅಧ್ಯಕ್ಷನಾಗಿದ್ದನು. ನಾಡು ಅಧಿಕಾರಿಗಳು ಮಾಡಿದ ಒಳ್ಳೆಯ ಕೆಲಸಗಳಿಗೆ ಒಂದು ನಿದರ್ಶನವಿದೆ. ಕ್ರಿ.ಶ. ೧೩೪೨ರ ಒಂದು ಶಾಸನ ಸಮಸ್ತ ಪ್ರಜೆ ಗಾವುಂಡರು, ಮಹಾ ಸಾಮಂತಾಧಿಪತಿ ಚಿಕ್ಕ ಬೈರಯನಾಯಕನ ಮಗ ಹೊನ್ನವಯ

---

1. *EC*, XII, Mi. 20.
2. *MAR*, 1925, p. 82.
3. *EC*, XI, Hk. 137.
4. Dikshit: *op.cit.*, pp. 40-44.
5. *EC*, X, Kl. 26.

ನಾಯಕ ನಾಡ ಸೇನಬೋವ ಅಲ್ಲಾಳನಿಗೆ "ಸರ್ವಮಾನ್ಯ" ಕೊಡಗೆಯಾಗಿ ಜಕ್ಕೂರಿನಲ್ಲಿ ಭೂಮಿಯನ್ನು ದಾನಮಾಡಿದನೆಂದು ತಿಳಿಸುತ್ತದೆ.[1]

ಶಾಸನಗಳು "ನಾಟ್ಟುನಾಯಕ"ನೆಂಬ ನಾಡು ಅಧಿಕಾರಿಯನ್ನು ತಿಳಿಸುತ್ತದೆ. ಕ್ರಿ.ಶ. ೧೩೪೬ ರ ಒಂದು ಶಾಸನ ಹರಿಹರ ಒಡೆಯರು ಮತ್ತು ಬುಕ್ಕಣ್ಣ ಒಡೆಯರು ತೆಕ್ಕಲ್ ನಾಡಿನ ತೆಕ್ಕಲ್ಲ್ ನಾಟ್ಟುನಾಯಕ ವೈಯಣನ್ ಕೋಮುಪ್ಪನ್ ಅವನಿಗೆ, ಅದೇ ನಾಡಿಗೆ ಸೇರಿದ ಮಾದರೈಸನ್ ಪಳ್ಳಿಯನ್ನು ತೆರಿಗೆ ಮಾಫಿಮಾಡಿ ದಾನಮಾಡಿದನೆಂದು ತಿಳಿಸುತ್ತದೆ. ಆ ಗ್ರಾಮದಲ್ಲಿ ಮೊದಲೆ ದಾನಮಾಡಿದ್ದ ಭೂಮಿಯನ್ನು ಬಿಟ್ಟು ಉಳಿದ ತರಿ ಅಥವಾ ಒಣಭೂಮಿಯಲ್ಲಿ ಯಾವ ಬೆಳೆಯನ್ನಾದರೂ ಬೆಳೆಯಬಹುದೆಂದೂ ಮತ್ತು ಎಲ್ಲ ಗ್ರಾಮಗಳನ್ನು ಶಾಶ್ವತವಾಗಿ ಪಡೆಯಬಹುದೆಂದೂ ತಿಳಿಸುತ್ತದೆ.[2] ಕ್ರಿ.ಶ. ೧೩೬೦ ರಲ್ಲಿ ನಾಡಿನ ನಿವಾಸಿಗಳು ನಾಟ್ಟುನಾಯಕ ಮತ್ತು ಇತರ ಮೂವರ ಸಹಿತ ಸಭೆ ಸೇರಿದರು.[3] ಕ್ರಿ.ಶ. ೧೩೭೯ ರಲ್ಲಿ ಮಹಾ ಸಾಮಂತಾಧಿಪತಿ ಸೊನ್ನಯ್ಯನಾಯಕನ ಮಗ ಅಂಕಯ್ಯನಾಯಕ ನೊಂಡುಗುಳಿ ನಾಡಿನ ನಾಯಕನಾಗಿದ್ದನು.[4] ಕ್ರಿ.ಶ. ೧೩೮೦ ರಲ್ಲಿ ಸೇನಬೋವ ಮೊದಿಸಿಯರ್ ಕಂಬಯರ್ ಎರುಮರೈ ನಾಡಿನ ನಾಯಕನಾಗಿದ್ದನು.[5] ಕ್ರಿ.ಶ. ೧೩೮೫ ರಲ್ಲಿ ತುರವರ್ ನಂಬಿರವಿ ಶೆಟ್ಟಿಯಾರ್ ಪುಲಿಯೂರ್ ನಾಡಿನ ನಾಟ್ಟು ನಾಯಕನಾಗಿದ್ದನು.[6] ಈ ಶಾಸನಗಳಿಂದ ನಾಟ್ಟುನಾಯಕ ನಾಡಿನ ಹತೋಟಿಹೊಂದಿದ್ದ ಅಧಿಕಾರಿಯಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ನಾಟ್ಟುನಾಯಕನೆ ನಾಡಗೌಡನಾಗಿದ್ದಿರಬಹುದು. ನಾವು "ಯಜಮಾನ" ಎಂಬ ಹುದ್ದೆಯನ್ನು ಕಾಣುತ್ತೇವೆ. ಕ್ರಿ. ಶ. ೧೫೦೭–೮ರಲ್ಲಿ ಬೈರಪ್ಪನಾಯಕ ನಾಡಿನ "ಯಜಮಾನ" ಹುದ್ದೆಯನ್ನು ಹೊಂದಿದ್ದನು.[7] ನಾಡು, ಮುಖ್ಯಸ್ಥನನ್ನು ಹೊಂದಿದ್ದ ನಿದರ್ಶನಗಳು ಇವೆ. ಕ್ರಿ.ಶ. ೧೫೭೭ ರ ಕುಡುಗೆರೆ ಶಾಸನ "ನಾಡ ಸಮಸ್ತ ಗೌಡ ಪ್ರಭುಗಳು" ಎಂದು ದಾಖಲೆಮಾಡಿದೆ. ಈ ಶಾಸನ ಹರಹಳಿನಾಡಿನ ಎರಡು ಕನ್ನೂರು ಅಗ್ರಹಾರಗಳ, ಎಡಿಹಳ್ಳಿ ಮತ್ತು ಗವಲೂರು ಮತ್ತು ೭೦ ಗ್ರಾಮಗಳ ಸಮಸ್ತ ಬ್ರಾಹ್ಮಣರು ಮತ್ತು ನಾಡಿನ ಸಮಸ್ತ ಗೌಡ ಪ್ರಭುಗಳು ಗೌತಮು ಗ್ರಾಮಕ್ಕೆ ಸೇರಿದ ಬತ್ತದ ಜಮೀನನ್ನು ಅದೇ ಪ್ರದೇಶದ ನರಸಿಂಹದೇವರಿಗೆ ದಾನ ಮಾಡಿದರೆಂದು ತಿಳಿಸುತ್ತದೆ. ಅದೇ ಶಾಸನ, ಕೊಂಡಮಣಿ ರಾಮಯ ನಾಯಕನ ಮಗ ತಲನಾಯಕ ಮತ್ತು ಹರಹಲಿ ನಾಡಿನ ಬ್ರಾಹ್ಮಣರು ನಾಡು ಪ್ರಭುಗಳಿಗೆ ಅರ್ಜಿಹಾಕಿ ಅದನ್ನು

1. *EC*, IX, Bn. 21.
2. *EC*, X, Mr. 39.
3. *Ibid.*,
4. *EC*, IX, Ht. 50.
5. *Ibid.*, An. 28.
6. *Ibid.*, Ht. 93.
7. *MAR*, 1925, p. 19.

ಧಾರಾಪೂರಕವಾಗಿ ಕೊಟ್ಟರೆಂದು ತಿಳಿಸುತ್ತದೆ. ಕ್ರಿ. ಶ. ೧೫೧೦ರ ಕೊಳ್ಳೇಗಾಲ ತಾಲ್ಲೂಕಿನ ಕುಂತೂರಿನ ಒಂದು ಶಾಸನ ಇಮ್ಮಡಿ ಚಿಕ್ಕದೇವರಾಯ ಒಡೆಯರು ಆಳುತ್ತಿದ್ದ ಹದಿನಾಡಿನ ಗ್ರಾಮಗಳ ಗಡಿಗಳನ್ನು ಮತ್ತು ಅನೇಕ ತೆರಿಗೆಗಳನ್ನು ತಿಳಿಸುತ್ತದೆ.[1] "ನಾಡಪ್ರಭು", "ಯಜಮಾನ" ಮತ್ತು "ನಾಟ್ಟುನಾಯಕ", ಇವರು "ನಾಡಗಾವುಂಡನೇ" ಆಗಿದ್ದಿರಬಹುದು.

ನಾಡಸೇನಬೋವರು ಬಹಳ ಪ್ರಭಾವಹೊಂದಿದ್ದ ಅಧಿಕಾರಿಗಳಾಗಿದ್ದರೆಂದು ಕಾಣುತ್ತದೆ. ಗ್ರಾಮದಲ್ಲಿ ಸೇನಬೋವನಿದ್ದ ಹಾಗೆ, ನಾಡಿನಲ್ಲಿ ನಾಡಸೇನಬೋವನಿದ್ದನು. ಈತನು ನಾಡಿನ ಕಂದಾಯದ ದಾಖಲೆಗಳನ್ನು ಇಡಬೇಕಾಗಿದ್ದಿತು. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೪೬ರ ಒಂದು ದಾಖಲೆ, ನಾಡುಸೇನಬೋವ ನೀಲಪ್ಪನ್ ಆವನ ಸಹಿಯನ್ನು ಹೊಂದಿದೆ.[2] (೨) ಎರಡನೆ ಹರಿಹರರಾಯನ ಕಾಲದ ೧೩೯೨ರ ಒಂದು ಶಾಸನ ಮಾದರಹಳ್ಳಿ ಮತ್ತು ಇತರ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಕಂದಾಯದ ವಿವರಗಳನ್ನು ಕೊಟ್ಟು, ನಾಡಸೇನಬೋವ ಸಾಯಪ್ಪನ ಲೆಖ್ಖಾಚಾರದ ಪ್ರಕಾರದ ೨೧೫ ವರಹಗಳನ್ನು ಮತ್ತು ಎರಡು ಹಣಗಳನ್ನು ರಾಮಚಂದ್ರ ಒಡೆಯರಿಗೆ ಕೊಟ್ಟದ್ದನ್ನು ತಿಳಿಸುತ್ತದೆ.[3] (೩) ಕ್ರಿ. ಶ. ೧೪೦೪ರಲ್ಲಿ ಸಿಂಗರಸನೆಂಬುವನು ಮುದವಂಕನಾಡಿನ ಸೇನಬೋವನಾಗಿದ್ದನು.[4] (೪) ಕ್ರಿ.ಶ. ೧೪೦೫ರಲ್ಲಿ ನರಹರಿದೇವ ಆರಗವೇಂತೆಯ ನಾಡ ಸೇನಬೋವನಾಗಿದ್ದನು.[5]

ನಾಡುಸಭೆ: ನಾಡಿನ ಸಭೆಯು "ನಾಡು" ಎಂದು ಕರೆಯಲ್ಪಡುತ್ತಿದ್ದಿತು. ನಾಡುಸಭೆ (೧) ನಾಡಿನ ಗ್ರಾಮಗಳ ಮುಖ್ಯಸ್ಥರು ಮತ್ತು ನಾಡಿನ ಅಧಿಕಾರಿಗಳು, (೨) ನಾಡಿನ ನಿವಾಸಿಗಳ ಪ್ರತಿನಿಧಿಗಳು ಮತ್ತು (೩) ಶ್ರೇಣಿಗಳ ಮತ್ತು ನಾಡಿನ ಅಗ್ರಹಾರಗಳ ಪ್ರತಿನಿಧಿಗಳನ್ನು ಒಳಗೊಂಡಿದ್ದಿತು. ನಾಡಿನ ಎಲ್ಲ ನಿವಾಸಿಗಳು ಸದಸ್ಯರಾಗಿರುವುದಕ್ಕೆ ಸಾಧ್ಯವಾಗುತ್ತಿರಲಿಲ್ಲವೆಂದು ಊಹಿಸಬಹುದು. ಅವರಲ್ಲಿ ಹೆಚ್ಚು ಪ್ರಭಾವಶಾಲಿಗಳು "ನಾಡು" ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದರೆಂದು ಕಾಣುತ್ತದೆ.[6] ನಾಡಿನ ತೀರ್ಮಾನಗಳು ಮತ್ತು ಠರಾವುಗಳನ್ನು ತಿಳಿಸುವಾಗ ನಾಡಿನ ಸ್ವಲ್ಪ ಸದಸ್ಯರು ತಮ್ಮ ಸಹಿ ಹಾಕಿದ್ದಾರೆ. ಇದು ನಾಡಿನ ನಿವಾಸಿಗಳ ಪ್ರತಿನಿಧಿಗಳನ್ನೊಳಗೊಂಡ

---

1. *SII*, IX (ii) No. 701.
2. *EC*, X, Sd. 67.
3. *EC*, XI, Hr. 36 and 39.
4. *EC*, VIII, Tl. 134.
5. *EC*, VIII, Tl. 22.
6. Mahalingam : *SIP*, pp. 359-360.

ಒಂದು ರೀತಿಯ ನಾಡುಸಭೆ, ಈ ರೀತಿಯ ಸಭೆಗಳಿಗೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೪೬ ರಲ್ಲಿ ಅಂಬದಕ್ಕಿನಾಡಿನ ನಿವಾಸಿಗಳು ಪಪ್ಪಿಸಿಯರ್ ಮತ್ತು ಇತರ ಆರು ಜನರನ್ನೊಳಗೊಂಡು ಒಂದು ದಾನವನ್ನು ಮಾಡಿದರು. ಇದಕ್ಕೆ ನಾಡಿನ ಕರಣಿಕ ಶಟ್ಟೀಶ್ವರದೇವರ್ ನೀಲಪ್ಪನ್ ಮತ್ತು ಇತರ ಹಲವರು ಸಹಿಮಾಡಿದ್ದಾರೆ. ಅವರ ಸಹಿಗಳು ನಾಡಿನ ಪರವಾದ ಸಹಿಯಾಗಿತ್ತು.[1] (೨) ಕ್ರಿ.ಶ. ೧೩೪೭ ರಲ್ಲಿ ಅದೇ ನಾಡುಸಭೆಯು ಒಂದು ಭೂದಾನ ಮಾಡಿತು. ಇದರಲ್ಲಿ ಶಿಟ್ಟೀಶ್ವರದೇವರ ಮತ್ತು ನಾಡು ಕರುಣಿಕ ಶ್ರೀ ಅಲ್ಲಾಳನಾಥ ನೀಲಪ್ಪನ್‌ರವರ ಸಹಿ ಇತ್ತು. ಅವರು ನಾಡಿನ ಪರವಾಗಿ ಸಹಿ ಮಾಡಿದ್ದರು.[2] (೩) ಕ್ರಿ.ಶ. ೧೩೬೧ರಲ್ಲಿ ವಲ್ಲಪ್ಪದಣ್ಣಾಯಕ್ಕರ್ ಮತ್ತು ವೆಪ್ಪೂರ್‌ನಾಡಿನ ನಿವಾಸಿಗಳು, ಶೊಕ್ಕಯಪ್ಪನ್ ಮತ್ತು ಇತರರು ಒಂದು ದಾನ ಮಾಡಿದರು.[3] (೪) ಕ್ರಿ. ಶ. ೧೩೬೩ ರಲ್ಲಿ ಮೂರು ಪಟ್ಟಣಗಳ ಮತ್ತು ಹದಿನೆಂಟು ಕಂಪಣಗಳ ಮುಖಂಡರುಗಳನ್ನೊಳಗೊಂಡಿತ್ತು.[4] (೫) ಕ್ರಿ. ಶ. ೧೪೦೦ ರ ಒಂದು ಶಾಸನ ಮುಂದು ನಾಡು ಮೂವತ್ತರ ಸಮಸ್ತಜನರು ಒಂದು ಶಾಸನವನ್ನು ಕೊಟ್ಟರೆಂದು ತಿಳಿಸುತ್ತದೆ.[5] ಮುಂದುನಾಡಿನ ಸಭೆಯಲ್ಲಿ ೩೦ ಗ್ರಾಮುಗಳ ಪ್ರಾತಿನಿಧ್ಯವಿದ್ದಿತೆಂದು ಕಾಣುತ್ತದೆ. (೬) ಕ್ರಿ.ಶ. ೧೪೦೫ ರ ಒಂದು ಶಾಸನವು "ಹದಿನೆಂಟು ಕಂಪಣದವರು ಮೂರು ಪಟ್ಟಣದ ಹಲವರು ಆ ಗ್ರಾಮುಗಳ ಮೂಲಿಗರು ಸಹಿತ" ಒಂದು ಭೂಮಿಯನ್ನು ಕ್ರಯಮಾಡಿದರೆಂದು ತಿಳಿಸುತ್ತದೆ.[6] "ಮೂಲಿಗರು" ಎಂಬ ಪದ ಹಲವು ಪ್ರಮುಖರಿಗೆ ಅಥವಾ ನಾಯಕರಿಗೆ ಅನ್ವಯಿಸುತ್ತದೆ.

ಸಭೆಯಲ್ಲಿ ಆ ಪ್ರದೇಶದ ಪ್ರಭಾವಶಾಲಿಗಳು ಹಾಜರಿರುತ್ತಿದ್ದರೆಂದು ತಿಳಿಸುವುದಕ್ಕೆ "ಜನ್ನಿ" ಎಂಬ ಪದವನ್ನು ಉಪಯೋಗಿಸಲಾಗಿದೆ. ಉದಾಹರಣೆಗೆ, ಕ್ರಿ.ಶ. ೧೪೩೨ರಲ್ಲಿ ನಾಡಿನ ಏಳು ಜನ್ನಿಗಳು ಒಂದು ಭೂದಾನವನ್ನು ಮಾಡಿದರು.[7] ಕ್ರಿ.ಶ. ೧೪೩೮ ರ ಒಂದು ಶಾಸನ "ನಾಡೇಳು ಮಂದಿ" ಎಂದರೆ ನಾಡಿನ ಸಭೆಯ ಏಳು ಸದಸ್ಯರು ಎಂದು ತಿಳಿಸುತ್ತದೆ.[8]

"ನಾಡು" ಸಭೆಯಲ್ಲಿ ಗ್ರಾಮುಗಳ ಮುಖ್ಯಸ್ಥರು ಮತ್ತು ನಾಡಿನ ಮುಖಂಡನ್ನು ಒಳಗೊಂಡ ನಿದರ್ಶನಗಳಿವೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು:

---

1. *EC*, X, Sd. 67.
2. *Ibid.*, 71.
3. *EC*, IX, Bn. 101.
4. *EC*, VIII, Tl. 197.
5. *Ibid*., 115.
6. *Ibid.*, 105.
7. Panchamukhi, R. S.: *Karnatak Inscriptions* 51 of 1939-40.
8. *Ibid*, 56 of 1939-40

(೧) ಕ್ರಿ.ಶ. ೧೩೭೭ ರಲ್ಲಿ ನಸವಂದು ನಾಡಿನ ಸಮಸ್ತ ನಾಡ ಪ್ರಭುಗಳು ಸಭೆ ಸೇರಿದರು.[1] (೨) ಕ್ರಿ.ಶ. ೧೪೦೪ ರಲ್ಲಿ ಆರಗ ಹದಿನೆಂಟು ಕಂಪಣಗಳ ಪ್ರಮುಖರಾದ "ಪ್ರಭು"ಗಳು, ಮೂರು ಪಟ್ಟಣಗಳ ಮುಖ್ಯಸ್ಥರು ರಾಮನಾಡು ಮತ್ತು ಅರವತ್ತು ಗ್ರಾಮಗಳ ಮುಖಂಡರು ಮತ್ತು ಕೊಬದೆಯ ದಾನ ಮೂಲರು ಸಭೆ ಸೇರಿದ್ದರು.[2] (೩) ಕ್ರಿ.ಶ. ೧೪೧೫ ರಲ್ಲಿ, ಸಮಸ್ತ ನಾಡುಗಳ ಮತ್ತು ಆರಗ ಹದಿನೆಂಟು ಕಂಪಣಗಳ ಹೆಗ್ಗಡೆಗಳು ಸೇರಿದ್ದರು.[3] (೪) ಕ್ರಿ.ಶ. ೧೫೨೭-೨೮ ರಲ್ಲಿ ವಿಜಯನಗರದ ಸಮಸ್ತ ನಾಡಗೌಡರು ಸೇರಿದರು.[4] ಈ ನಿದರ್ಶನಗಳಿಂದ ನಾಡು ಸಭೆಯು ನಾಡಿನ ಗ್ರಾಮಗಳ ಮುಖಂಡರನ್ನು ಮತ್ತು ನಾಡಿನ ಮುಖಂಡರುಗಳನ್ನೊಳಗೊಂಡಿತ್ತೆಂದು ತಿಳಿಯಬಹುದು.

ನಾಡು ಸಭೆಯು ಅನೇಕ ವೇಳೆ ನಾಡಿನ ವರ್ತಕಶ್ರೇಣಿಗಳು ಮತ್ತು ನಾಡಿನ ಅಗ್ರಹಾರಗಳನ್ನೊಳಗೊಂಡಿತ್ತು. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೭೨ ರಲ್ಲಿ ಕೈವಾರ ನಾಡಿನ ಗೌಡ ಪ್ರಜೆಗಳು, ಪೆಕ್ಕುಂದ್ರದ ನಾನಾ ದೇಶಿಗಳು ಮತ್ತು ಹದಿನೆಂಟು ಜಾತಿಗಳವರು ಸಭೆ ಸೇರಿದರು.[5] (೨) ಸಾತಳಿಗೆ ನಾಡಿನ ಒಂದು ಸಭೆಯು ಒಂಬತ್ತು ಅಗ್ರಹಾರಗಳ ನಿವಾಸಿಗಳು ಮತ್ತು ಸಾತಳಿಗೆಯ ಒಂದು ಸಾವಿರದ ಐದು ಜಮಿನ್ದಾರರನ್ನೊಳಗೊಂಡಿತ್ತು.[6] (೩) ಕ್ರಿ.ಶ. ೧೩೭೭ ರಲ್ಲಿ ಹರಹಳಿನಾಡಿನ ಎರಡು ಕನ್ನೂರ್ ಅಗ್ರಹಾರಗಳ, ಎಡಿಹಳ್ಳಿ ಮತ್ತು ಗವಲೂರು ಮತ್ತು ೭೦ ಗ್ರಾಮಗಳ ಸಮಸ್ತ ಬ್ರಾಹ್ಮಣರು ಮತ್ತು ನಾಡಿನ ಸಮಸ್ತ ಗೌಡರು ಮತ್ತು ಮುಖಂಡರು ಸಭೆ ಸೇರಿದ್ದರು.[7] (೪) ನಿಡುಗಲ್ಲಿನ ಮಹಾನಾಯಕಾಚಾರ್ಯ ತಿಮ್ಮಣ್ಣನಾಯಕ, ನಿಡುಗಲ್ಲುಸೀಮೆಯ ಗೌಡರು ಮತ್ತು ಸೇನಬೋವರು ವರ್ತಕರೊಡನೆ ಒಂದು ಭೂಮಿಯನ್ನು ದಾನಮಾಡಿದರು.[8] ಈ ನಿದರ್ಶನವು ನಾಡು ಸಭೆಯಲ್ಲಿ ಸಾಮಾನ್ಯ ಸದಸ್ಯರಲ್ಲದೆ ಇತರರು ಹಾಜರಿದ್ದುದಕ್ಕೆ ಸಾಕ್ಷಿಯಾಗಿದೆ.

ನಾಡು ಸಭೆಯು ಸಾಮಾನ್ಯವಾಗಿ ಚಾವಡಿಯಲ್ಲಿ ಸೇರುತ್ತಿದ್ದಿತು. ಈ ರೀತಿಯ ಒಂದು ಸಭೆ ಕ್ರಿ. ಶ. ೧೧೬೩ ರಲ್ಲಿ ಆರಗ ಚಾವಡಿಯಲ್ಲಿ ನಡೆಯಿತು.[9] ಈ ರೀತಿಯ

---

1. *EC*, VIII, Tl. 28.
2. *Ibid.*, 196.
3. *Ibid.*, 217.
4. *MAR*, 1925, p. 19.
5. *EC*, X, Ct. 95.
6. *MAR*, 1916 para 99.
7. *EC*, VII, Sk. 35.
8. *SII*, IX (ii), No. 665.
9. *EC*, VIII, Tl. 197.

ಸಭೆಗೆ ಶಾಸನವೊಂದರಲ್ಲಿ ದಾಖಲೆ ಇದೆ.[1] ಸಭೆಯು ಅನೇಕ ವೇಳೆ ಮಂಟಪದಲ್ಲಿ ಸೇರು ತ್ತಿದ್ದಿತು.[2] ಸರ್ಕಾರದ ಅಧಿಕಾರಿ ನಾಡುಸಭೆಯನ್ನು ಕರೆಯಬಹುದಾಗಿತ್ತು. ಕ್ರಿ.ಶ. ೧೩೬೧–೬೨ ರಲ್ಲಿ ಕಂಪಣ ಒಡೆಯರ ಆಜ್ಞೆಯಮೇಲೆ, ಅಧಿಕಾರಿ ತುಕ್ಕೈ ಇರುಂದನಂಬಿ ಕೊಂಗರಾಯರ್ ಅಧ್ಯಕ್ಷತೆಯಲ್ಲಿ ನಾಡುಸಭೆಯು ಸೇರಿತು.[3] ಸಾವಣ್ಣ ಒಡೆಯರು ಸಾತಳಿಗೆ ನಾಡಿನ ನೆಲುವಾಗಿಲುವಿನ ಅರಸಣ್ಣ ಹೆಗ್ಗಡೆ ಮತ್ತು ವೀರಹೆಗ್ಗಡೆ ಯವರಿಗೆ ಹೇಳಿಕಳುಹಿಸಿ, ಸಾತಳಿಗೆಯ ಒಂಬತ್ತು ಅಗ್ರಹಾರಗಳ ನಿವಾಸಿಗಳ ಮತ್ತು ಒಂದು ಸಾವಿರದ ಐದು ಭೂಮಾಲೀಕರ ಸಭೆಯನ್ನು ಕರೆದನು.[4] ಮಹಾಮಂಡ ಲೇಶ್ವರ ರಾಮರಾಜತಿರುಮಲರಾಜಯ್ಯದೇವ ಮಹಾ ಅರಸು ನಿಡುಗಲ್ಲು ಸೀಮೆಯ ಸಭೆಯನ್ನು ಕರೆದನು.[5] ಹೀಗೆ ನಾಡುಸಭೆಗಳನ್ನು ಸರ್ಕಾರದ ಅಧಿಕಾರಿಗಳು ಕರೆಯ ಬಹುದಾಗಿತ್ತು.

ನಾಡುಸಭೆಯು ಸ್ವಪ್ರೇರಣೆಯಿಂದ ಸೇರಿದ ನಿದರ್ಶನಗಳಿವೆ-(೧) ಕ್ರಿ.ಶ. ೧೩೬೨ ರಲ್ಲಿ ಕೈವಾರನಾಡಿನ ಗೌಡಪ್ರಜೆಗಳು ಮತ್ತು ಪೆಕ್ಕುಂದ್ರದಲ್ಲಿನ ನಾನಾದೇಶಿಗಳು ಮತ್ತು ಹದಿನೆಂಟು ಜಾತಿಗಳವರು ಕೈವಾರದಲ್ಲಿ ಒಂದು ಸಂತೆಯನ್ನು ಸ್ಥಾಪಿಸಲು ಸೇರಿದರು.[6] (೨) ಕ್ರಿ.ಶ. ೧೪೩೦ ರಲ್ಲಿ ಕೋಳಲದ ನಾಡಪ್ರಭುಗಳು ಮತ್ತು ಇತರರು ಭೂಮಿಯನ್ನು ಧರ್ಮಾರ್ಥವಾಗಿ ಕೊಟ್ಟರು.[7] ಈ ಸಂದರ್ಭಗಳಲ್ಲಿ ಸಾಕ್ಷಿಗಳು ಅವಶ್ಯಕವಾಗಿದ್ದ ರೆಂದು ಕಾಣುತ್ತದೆ. ಈ ದಾಖಲೆಗಳಿಗೆ ಧರ್ಮಪಾತನ ಮತ್ತು ಸಾಕ್ಷಿಗಳ ರುಜು ಹಾಕಲಾಗು ತ್ತಿದ್ದಿತು. (೩) ಕ್ರಿ.ಶ. ೧೪೧೫ ರಲ್ಲಿ ಆರಗ ಹದಿನೆಂಟು ಕಂಪಣಗಳ ಮೂರು ಪಟ್ಟಣಗಳು ಮತ್ತು ನಾಡುಗಳ ಸಮಸ್ತ ಹೆಗ್ಗಡೆಗಳು ಭೂಮಿಯನ್ನು ವಿಕ್ರಯಿಸುವುದಕ್ಕೆ ಸೇರಿ ದರು.[8] (೪) ಕ್ರಿ.ಶ. ೧೪೨೭ ರಲ್ಲಿ ಸಾಂತಳಿಗೆಯ ಕೆಲವು ಹೆಗ್ಗಡೆಗಳು ಮತ್ತು ನಾಡಿನ ಸಮಸ್ತ ಜನರು ಒಂದು ಕ್ರಯಪತ್ರವನ್ನು ಕೊಟ್ಟರು.[9]

**ನಾಡುಸಭೆಯ ಕರ್ತವ್ಯಗಳು : ತೆರಿಗೆಗಳ ರದ್ದತಿ :** ಕೇಂದ್ರಸರ್ಕಾರದ ಮೇಲೆ ಮತ್ತು ಸಂಸ್ಥೆಗಳ ಮೇಲೆ ಪೌರಸಂಸ್ಥೆಗಳ ಪ್ರಭಾವವಿದ್ದಿತು. ಕೇಂದ್ರದ ಅಧಿಕಾರಿಗಳು ಸ್ಥಳೀಯ ಸಂಸ್ಥೆಗಳ ಮತ್ತು ಪೌರಸಂಸ್ಥೆಗಳ ಅನುಮತಿಯಿಂದ ತೆರಿಗೆಗಳನ್ನು ಮನ್ನಾಮಾಡು

---

1. *MAR*, 1916 para 99.
2. 196 of 1912.
3. *Ibid.*,
4. *MAR*, 1916, page 60.
5. *SII*, IX (ii), No. 665.
6. *EC*, X, Ct. 95.
7. *EC*, X, Kl. 105.
8. *EC*, VIII, Tl. 217.
9. *EC*, VI, Kp. 27.

ತ್ತಿದ್ದರು ಮತ್ತು ತೆರಿಗೆಗಳನ್ನು ದಾನಮಾಡುತ್ತಿದ್ದರು. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ. ಶ. ೧೩೬೫ ರಲ್ಲಿ ಒಬ್ಬ ನಾಯಕನು ಬಂಡೆಹಳ್ಳಿ ಮತ್ತು ವೋಡೆಹಳ್ಳಿಗಳ ಭೂಮಿಯನ್ನು ಮತ್ತು ಸುಂಕದ ಒಂದು ಭಾಗವನ್ನು ನಾಡಿನ ಸಮ್ಮತಿಯಿಂದ ವೋಡೆಹಳ್ಳಿ ಮಲ್ಲಿನಾಥದೇವರ ಸೇವೆಗೆ ದಾನಮಾಡಿದನು.[1]

(೨) ಬುಕ್ಕನ ಮಗ ವೀರಭೂಪಾಲನ ಎರಡು ಶಾಸನಗಳು, ಆದನೂರಿನ "ನಾಟ್ಟಾರ್" ಮತ್ತು "ಊರವರ್", ರಾಜನ ಅಧಿಕಾರಿಗಳ ಅಪ್ಪಣೆಯ ಮೇರೆ ಹಲವು ಪಾಳ್ಯಗಳಿಗೆ ಸೇರಿದ ಎಲ್ಲಾ ತೆರಿಗೆಗಳನ್ನೂ ಮನ್ನಾ ಮಾಡಿದರು. ಈ ಪಾಳ್ಯಗಳು ದೇವಸ್ಥಾನಕ್ಕೆ ಸೇರಿದ್ದುವು.[2] ಈ ನಿದರ್ಶನದಲ್ಲಿ ನಾಡು ಸಭೆಯು ಕೇಂದ್ರ ಸರ್ಕಾರ ಮತ್ತು ವಿವಿಧ ಸ್ಥಳಗಳಿಗೆ ಸಂಪರ್ಕವೇರ್ಪಡಿಸುವ ಪಾತ್ರವನ್ನು ವಹಿಸುತ್ತಿದ್ದಿತೆಂಬುದನ್ನು ತಿಳಿಯಬಹುದು. ಹೀಗೆ ತಮಿಳು ನಾಡಿನಲ್ಲಿ ನಾಡಿನ ಅಥವಾ ಒಂದು ರಾಜಕೀಯ ವಿಭಾಗವನ್ನು ಪ್ರತಿನಿಧಿಸುತ್ತಿದ್ದ "ನಾಟ್ಟವರ್" ಚಟುವಟಿಕೆಗಳು ತಿಳಿಯಬರುತ್ತವೆ. "ನಾಟ್ಟವರ್" ನಾಡು ಸಭೆಯ ಸದಸ್ಯರಾಗಿದ್ದರು.

(೩) ಕ್ರಿ.ಶ. ೧೪೧೦ ರಲ್ಲಿ ಒಂದನೆ ದೇವರಾಯನ ಕಾಲದಲ್ಲಿ ಪಳಂಗೂರ್‌ಪರ್ರು ಮತ್ತು ಮುಪಿಪನೂರ್ ಪರ್ರು "ನಾಟ್ಟವರು" ಮೆಯ್ಯೂರಿನ ದೇವದಾನ ಭೂಮಿಯ ಹಲವು ತೆರಿಗೆಗಳನ್ನು ದೇವಸ್ಥಾನದಲ್ಲಿ ಪೂಜೆ ಉತ್ಸವಗಳು ಮತ್ತು ದುರಸ್ತಿಗಾಗಿ ಮನ್ನಾ ಮಾಡಿದರು.[3]

(೪) ಕೊಪ್ಪ ತಾಲ್ಲೂಕಿನ ಹರಿಹರಪುರದ ಮಾದವೇಶ್ವರ ದೇವಸ್ಥಾನದಲ್ಲಿನ ಒಂದು ಶಾಸನವು, ಕ್ರಿ.ಶ. ೧೪೭೮ ರಲ್ಲಿ ಸಾಂತಳಿಗೆಯ ೯ ಅಗ್ರಹಾರಗಳ ನಿವಾಸಿಗಳ ಮತ್ತು ೧೦೦೩ ಭೂಮಾಲೀಕರ ಸಭೆಯನ್ನು ಪ್ರತಾಪ ಹರಿಹರಪುರ ಅಗ್ರಹಾರ ಕೊಡಬೇಕಾಗಿದ್ದ ಕಂದಾಯವನ್ನು ಬಾಡಿಗೆದಾರರಲ್ಲಿ ಹಂಚಲು ಅಲ್ಲದೆ ಸರ್ಕಾರದ ಸೇವಕರಿಗೆ ಮತ್ತು ಆ ಗ್ರಾಮದ ಅಗ್ರಹಾರದವರಿಗೆ ಭಿನ್ನಾಭಿಪ್ರಾಯ ಬರದಿರಲು ಒಂದು ಸಭೆ ಸೇರಿತು. ಈ ಸಭೆಯನ್ನು ಕರೆದ ಸಾವಣ್ಣ, ಅರಸಣ್ಣ ಹೆಗ್ಗಡೆ ಮತ್ತು ವೀರ ಹೆಗ್ಗಡೆಯರು ಬಾಡಿಗೆದಾರರಿಗೆ ಹಂಚಲು ತಿಳಿಸಿದನು. ಈ ಕೆಲಸವನ್ನು ಅವರು ಪೂರೈಸಿದರು. ಯಾವ ನಷ್ಟವಾದರೂ ಬಾಡಿಗೆದಾರರನ್ನು ರಾಜ ಅಥವಾ ನಾಡು ಹಿಂಸಿಸಕೂಡದೆಂದೂ ಒಂದು "ಪಟ್ಟಿ"ಯನ್ನು ತಯಾರಿಸಲಾಯಿತು.[4] ಈ ನಿದರ್ಶನದಲ್ಲಿ ನಾಡಿನ ಹಾಜರಿಯಲ್ಲಿ ಕಂದಾಯ ಸಲ್ಲಿಸಬೇಕಾದ ಒಕ್ಕಲುಗಳ ವಿವರಗಳನ್ನು ಅಗ್ರಹಾರದ ಮಹಾಜನಗಳಿಗೆ ಕೊಡಲಾಯಿತು.

---

1. *SII*, X (ii), No. 411.
2. 125 and 126, 1933-34.
3. 404 of 1938.
4. *MAR*, 1916, para 99.

(೫) ಕ್ರಿ.ಶ. ೧೪೨೧ ರಲ್ಲಿ ಶೂರೈಕ್ಕುಡಿ ವಿಜಯಾಲಯದೇವ ಆ ಸ್ಥಳದ ದೇವಸ್ಥಾನಕ್ಕೆ ನೂರು "ಪಣಮ್"ಗಳನ್ನು ದತ್ತಿಕೊಟ್ಟನು. ಈ ಮೊತ್ತವನ್ನು ಅಕಲೈಯ್ಯೂರ್ ನಾಡು "ನಾಟ್ಟವರ್" ನಾಯಕನಿಗೆ ಬರಬೇಕಾದ ಕಂದಾಯದಲ್ಲಿ ಕಳೆದುಕೊಳ್ಳಬೇಕಾಗಿತ್ತು.[1] ಹೀಗೆ "ನಾಟ್ಟವರ್" ಅವರಿಗೆ ಸಂದಾಯವಾಗಬೇಕಾಗಿದ್ದ ಸ್ಥಳೀಯ ತೆರಿಗೆಗಳನ್ನು ಮನ್ನಮಾಡುವ ಅಧಿಕಾರವಿದ್ದಿತು.

(೬) ಕ್ರಿ.ಶ. ೧೪೪೯ ರ ತಿರುವೈಗವೂರಿನ ಒಂದು ಶಾಸನವು, ಎರಡನೆ ದೇವ ರಾಯನ ಕಾಲದಲ್ಲಿ ಪರಾಂತಕ ನಾಡುವಿನ "ನಾಟ್ಟವರ್" ಮತ್ತು "ವಲಂಗೈ" ಮತ್ತು "ಇಡಂಗೈ" ೯೮ ಪಂಥಗಳ ನಡುವೆ, ರಾಜನಿಗೆ ಸಲ್ಲಬೇಕಾದ "ರಾಜಾಗಾರ" ಹಣದ ವಿಚಾರವಾಗಿ ಒಪ್ಪಿಗೆಯಾಯಿತು ಎಂದು ತಿಳಿಸುತ್ತದೆ.[2]

(೭) ಕ್ರಿ.ಶ. ೧೪೪೩ ರ ಶ್ರೀಮುಷ್ಣಂ ಸ್ಥಳದ ಒಂದು ಶಾಸನವು, ಇರುಂಗೋಳ ಪ್ಪಾಡಿ ನಾಡು "ನಾಟ್ಟರ್" ಮತ್ತು "ತಂತ್ರಿಮಾರ್," ತಿರುಮುಡವಿಳಾಗಂನಲ್ಲಿ ವಾಸಿಸುತ್ತಿದ್ದ ಒಕ್ಕಲುಗಳು, ಶಿವ ಮತ್ತು ವಿಷ್ಣು ದೇವಸ್ಥಾನಗಳಲ್ಲಿ "ಪೆರಿಯ ನಾಟ್ಟಾನ್ ಸಂಧಿ" ಎಂಬ ಸೇವೆ ಸಲ್ಲಿಸಲು ಹಲವು ತೆರಿಗೆಗಳನ್ನು ದಾನಮಾಡಿದರು.[3]

(೮) ಕ್ರಿ.ಶ. ೧೪೪೩ ರ ತಿರುವರತ್ತುರೈ ಸ್ಥಳದ ಒಂದು ಶಾಸನವು ಹದಿನೆಂಟು "ಪರ್‍ರು"ಗಳ, "ನಾಟ್ಟಾರ್" ಮತ್ತು "ತಂತ್ರಿಮಾರ್" ಮುಡವಿಳಾಗಂನಲ್ಲಿ ವಾಸಿಸುತ್ತಿದ್ದ ನಿವಾಸಿಗಳು ವಸೂಲು ಮಾಡುತ್ತಿದ್ದ ತೆರಿಗೆಗಳನ್ನು, ದೇವಸ್ಥಾನದಲ್ಲಿ ಒಂದು ಸೇವೆ ಸಲ್ಲಿಸಲು ದಾನಮಾಡಿದರು.[4]

(೯) ದಕ್ಷಿಣ ಆರ್ಕಾಟ್ ಜಿಲ್ಲೆಯ ಪೆಣ್ಣಡಂ ಸ್ಥಳದ ಒಂದು ಶಾಸನವೂ ಮಲ್ಲಿಕಾರ್ಜುನನ ಕಾಲದಲ್ಲಿ ಒಡತುಂಡನಾಡು "ನಾಡು" ಸಭೆಯು ಕೆಲವು ಜಮೀನುಗಳ ಮೇಲಿನ ಕಂದಾಯವನ್ನು ದೇವಸ್ಥಾನಕ್ಕೆ ಸೇವೆಗಳಿಗೆ ಮತ್ತು ಪೂಜೆಗೆ ದಾನ ಮಾಡಿತು.[5]

(೧೦) ಕ್ರಿ.ಶ. ೧೫೩೩ ರಲ್ಲಿ, ನಲ್ಲೂರು ನಾಡಿಗೆ ಸೇರಿದ ಮುಳಲೂರು ಸ್ಥಳದ ಕುಂಡಲಗುಡಿಕೆ ಗ್ರಾಮದಲ್ಲಿ ವಿವಾಹ ತೆರಿಗೆಯನ್ನು ರದ್ದುಮಾಡಿದ ಒಂದು ಧರ್ಮ ಶಾಸನವನ್ನು ಸ್ಥಾಪಿಸಲಾಯಿತು. ಈ ತೆರಿಗೆಯನ್ನು ನಾಡ ಗೌಡರ ಸಮ್ಮುಖದಲ್ಲಿ ರದ್ದು ಮಾಡಲಾಯಿತು.[6]

---

1. *IPS*. 699.
2. 59 of 1914.
3. 230 of 1916.
4. 215 of 1928-29.
5. 257 of 1928-29.
6. *EC*, X, Sd. 79.

(೧೧) ಕ್ರಿ.ಶ. ೧೫೪೭ ರ ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರದ ಒಂದು ಶಾಸನವು, "ಹುಲಿಗೆರೆಯ ನಾಡಗೌಡ ಪ್ರಜೆಗಳು ಸೆಟ್ಟಿಪಟ್ಟಣ ಸ್ವಾಮಿಗಳು ಮುಂತಾದವರು ಲಿಂಗಸೆಟ್ಟಿಯನ್ನು ರಾಜನ ಬಳಿಗೆ ವಿವಾಹ ತೆರಿಗೆಯನ್ನು ರದ್ದು ಮಾಡಲು ಕಳುಹಿಸಿ, ರಾಜನ ಒಪ್ಪಿಗೆ ಪಡೆದರು.[1]

**ಗಡಿಗಳ ನಿರ್ಧಾರ:** "ನಾಡು" ಜನರ ಹಾಜರಿಯಲ್ಲಿ, ಗ್ರಾಮಗಳು ಮತ್ತು ಹೊಲಗಳ ಗಡಿಗಳ ನಿರ್ಧಾರ ಮತ್ತು ವ್ಯವಸಾಯಕ್ಕೆ ನೀರಿನ ಹತೋಟಿ ತೀರ್ಮಾನವಾದ ನಿದರ್ಶನಗಳಿವೆ.

(೧) ಕ್ರಿ.ಶ. ೧೧೬೩ ರಲ್ಲಿ, ವಿರೂಪಣ್ಣ ಒಡೆಯರ ಕಾಲದಲ್ಲಿ ನಾಗಣ್ಣ ಮಂತ್ರಿ ಮತ್ತು ಇತರ "ಅರಸು"ಗಳು, ಹೆದ್ದೂರು ಸೀಮೆ ಮತ್ತು ದೇವಸ್ಥಾನದ ಆಚಾರ್ಯರ ನಡುವೆ ಒಂದುಕಡೆ ಮತ್ತು ಇನ್ನೊಂದು ಕಡೆ ಜೈನಸೂರಿಗಳ ನಡುವೆ ಒಂದು ಜಟಿಲವಾದ ಪ್ರಶ್ನೆಯನ್ನು ತೀರ್ಮಾನಿಸಿದರು. ಅಂತಹ ಸಂದರ್ಭಗಳಲ್ಲಿ ನಾಡು ಜನರ ಹಾಜರಿ ಆವಶ್ಯಕವಾಗಿತ್ತು.[2] (೨) ಕ್ರಿ.ಶ. ೧೪೦೦ ರ ಒಂದು ಶಾಸನವು, ಗಡಿಕಲ್ಲುಗಳ ಪ್ರಶ್ನೆಗೆ ಸಂಬಂಧವಾಗಿ ಮಂದುನಾಡು ಮೂವತ್ತರ ಜನರು "ಮಹಂತ"ನಿಗೆ ಕೊಟ್ಟ ಶಾಸನವಾಗಿದೆ. "ಮಹಂತ್" ಮತು "ನಾಡು" ವಿಚಾರಮಾಡಿ ಕಲ್ಲುಗಳನ್ನು ಅನ್ಯಾಯವಾಗಿ ಹಾಕಲಾಗಿದೆಯೆಂದೂ ಅದಕ್ಕೆ ಅವಕಾಶವಿಲ್ಲವೆಂದೂ ತೀರ್ಮಾನಿಸಿತು.[3]

**ನ್ಯಾಯವಿತರಣೆ:** ಸರ್ಕಾರದ ಅಧಿಕಾರಿಗಳು ಸ್ಥಳೀಯ ಸಂಸ್ಥೆಗಳ ಸಹಕಾರದಿಂದ ವಿವಾದಗಳನ್ನು ತೀರ್ಮಾನಿಸಿದ ನಿದರ್ಶನಗಳಿವೆ. ಕ್ರಿ.ಶ. ೧೧೬೩ ರಲ್ಲಿ ಬುಕ್ಕ ಒಡೆಯರ ಆಳ್ವಿಕೆಯಲ್ಲಿ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಒಂದು ವಿವಾದವನ್ನು ಸೌಹಾರ್ದದಿಂದ ತೀರ್ಮಾನಿಸಿದುದನ್ನು ಹಿಂದೆ ತಿಳಿಸಲಾಗಿದೆ. ಹೆದ್ದೂರು ನಾಡಿನ ಜನ ಮತ್ತು ದೇವಸ್ಥಾನದ ಆಚಾರ್ಯರು "ಸೂರಿ"ಗಳೊಡನೆ, ಹೆದ್ದೂರು ನಾಡಿನಲ್ಲಿ ತಡತಲ ಸ್ಥಳದ ಪಾರ್ಶ್ವದೇವ ದೇವಸ್ಥಾನಕ್ಕೆ ಸೇರಿದ ಭೂಮಿಯ ವಿವಾದಗಳನ್ನು ತೀರ್ಮಾನಿಸಿದರು. ನಾಗಣ್ಣ ಮಂತ್ರಿ ಮತ್ತು "ಪ್ರಧಾನ" ದೇವರಾಜ ಮುಂತಾದ ಮುಖ್ಯ ಅಧಿಕಾರಿಗಳು ಇತರ "ಅರಸು" ಅಥವಾ "ಧಣಿ"ಗಳೊಡನೆ, ಜೈನ ಮಲ್ಲಪ್ಪನನ್ನೂ ಸೇರಿ, ಹದಿನೆಂಟು ಕಂಪಣಗಳ ಮತ್ತು ೩ ಪಟ್ಟಣಗಳ ದೊಡ್ಡವರನ್ನು ಕರೆದು ಆರಗ ಚಾವಡಿಯಲ್ಲಿ ವಿಚಾರಣೆ ಮಾಡಿ ನಾಡನ್ನು ಒಪ್ಪಿಸಿ ಪಾರ್ಶ್ವದೇವರ ದೇವಸ್ಥಾನದ ಗಡಿಗಳನ್ನು ಸಂಪ್ರದಾಯದ ಪ್ರಕಾರ ತೀರ್ಮಾನಿಸಿದರು.[4]

ಧಾರವಾಡ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರದ ಎರಡು ಶಾಸನಗಳು ನ್ಯಾಯವಿತರಣೆಗೆ ಸಂಬಂಧಪಟ್ಟಿವೆ. ಕ್ರಿ.ಶ. ೧೪೧೨ ರ ಮೊದಲನೆ ದೇವರಾಯನ

1. *SII*, XX, 238.
2. *EC*, VIII, Tl. 197.
3. *Ibid*, Tl. 115.
4. *Ibid.*, Tl. 197.

ಕಾಲದ ಒಂದು ಶಾಸನವು ಹುಲಿಗೆರೆಯಲ್ಲಿ (ಈಗಿನ ಲಕ್ಷ್ಮೇಶ್ವರ್) ಶಂಖಬಸ್ತಿಯ ಹೇಮ ದೇವಾಚಾರ್ಯ ಮತ್ತು ಅದೇ ಸ್ಥಳದ ಸೋಮದೇವ ದೇವಸ್ಥಾನದ ಆಚಾರ್ಯ ಶಿವ ರಾಮಯ್ಯ, ಇವರಿಬ್ಬರ ನಡುವೆ ಇದ್ದ ಭೂಮಿಯ ವ್ಯಾಜ್ಯಕ್ಕೆ ಸಂಬಂಧಿಸಿದುದು. ಈ ವಿವಾದವನ್ನು ಮಹಾಪ್ರಧಾನ, ನಾಗಣ್ಣ ದಂಡನಾಯಕನ ಆಜ್ಞೆಯ ಮೇರೆಗೆ ಪುರೋಹಿತ ಸಂಗಮದೇವ ಮತ್ತು ಆ ಸ್ಥಳದ ವಿದ್ವಾಂಸರು ಅಧ್ಯಯನ ಮಾಡಿ ತೀರ್ಮಾನಿಸಿದರು. ಕಲಿತ ನ್ಯಾಯಾಧೀಶರು ಮೊದಲು ಎರಡು ಪಕ್ಷಗಳಿಂದ ಅವರ ತೀರ್ಮಾನವನ್ನು ಪಾಲಿಸುವುದಾಗಿ ವಾಗ್ದಾನ ಪಡೆದರು. ನಂತರ ಆವಶ್ಯಕವಾದ ದಾಖಲೆಗಳನ್ನು ಅಭ್ಯಸಿಸಿ ನಾಗಗೌಡ ಮತ್ತು ಇತರ ಗೌಡ ಪ್ರಜೆಗಳಿಂದ ಆ ಭೂಮಿ ಯನ್ನು ಹರಿಹರ ಮಹಾರಾಜರ ಕಾಲದಿಂದ ಯಾರು ಅನುಭವಿಸುತ್ತಿದ್ದರೆಂದು ತಿಳಿದು ಕೊಂಡು ಆ ವಿವಾದವನ್ನು ಹೇಮದೇವಾಚಾರ್ಯನ ಪರವಾಗಿ ತೀರ್ಮಾನಿಸಿದರು.

ಈ ವಿವಾದದಲ್ಲಿ ದಾಖಲೆಗಳ ಸಾಕ್ಷ್ಯ ಆವಶ್ಯಕವಾಗಿತ್ತು. ಅವರು ಅಧ್ಯಯನ ಮಾಡಿದ ದಾಖಲೆಗಳಲ್ಲಿ ಶಾಸನಗಳೂ ಸೇರಿದ್ದವು. ಗೌಡಪ್ರಜೆಗಳ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದು ವಿವಾದಗಳ ತೀರ್ಮಾನದಲ್ಲಿ ವಿದ್ವಾಂಸರು ಪ್ರಜಾಸತ್ತಾತ್ಮಕ ವಿಧಾನವನ್ನು ಅನುಸರಿಸುತ್ತಿದ್ದರೆಂದು ತಿಳಿಯುತ್ತದೆ; ಅಲ್ಲದೆ ಅವರು "ಪೂರ್ವ ಮರ್ಯಾದೆ"ಯನ್ನು ಗಣನೆಗೆ ತಂದುಕೊಂಡು ಎರಡು ಪಕ್ಷಗಳಿಂದಲೂ ತೀರ್ಮಾನ ಕೊಟ್ಟನಂತರ, ಯಾವ ವಿವಾದವನ್ನೂ ತೆಗೆಯುವುದಿಲ್ಲವೆಂಬ ವಾಗ್ದಾನವನ್ನು ಪಡೆದರು.[1]

ಕ್ರಿ.ಶ. ೧೫೩೮ ರ ಒಂದು ಶಾಸನವು ಶಂಖಬಸ್ತಿಯ ಜೈನರು ಮತ್ತು ಸೋಮೇಶ್ವರ ದೇವರ ದೇವಸ್ಥಾನದ ಬ್ರಾಹ್ಮಣರ ನಡುವೆ ಜೈನರು ಧ್ವಜ, ಪತಾಕೆ ಮುಂತಾದ ಗೌರವಗಳನ್ನು ತಮ್ಮ ದೇವರಿಗೆ ದುರುಪಯೋಗಪಡಿಸಿದ ವಿವಾದವನ್ನು ತೀರ್ಮಾನಿಸ ಲಾಯಿತೆಂದು ತಿಳಿಸುತ್ತದೆ. ಈ ಮೊಕದ್ದಮೆಯಲ್ಲಿ ಜೈನರು ಎದುರುಪಕ್ಷಕ್ಕೆ ಒಂದು "ಜಯಪತ್ರ"ವನ್ನು ಕೊಟ್ಟು, ತಮ್ಮ ನಡತೆಗೆ ಪಶ್ಚಾತ್ತಾಪ ವ್ಯಕ್ತಪಡಿಸಿದರು.[2]

**ದೇವಸ್ಥಾನದ ವಿಷಯಗಳು :** "ನಾಡು" ಪ್ರತಿನಿಧಿಗಳು ಅನೇಕವೇಳೆ ದೇವಸ್ಥಾನದ ಒಳಾಡಳಿತಕ್ಕೆ ಸಂಬಂಧಪಟ್ಟ ಆರ್ಥಿಕವಿವರಗಳನ್ನು ತಿರ್ಮಾನಿಸುತ್ತಿದ್ದರು.

(೧) ಕ್ರಿ.ಶ. ೧೩೭೧–೭೨ ರಲ್ಲಿ ಚಿರಗಲ್‌ಪೇಟ್ ಜಿಲ್ಲೆಯ ತಿರುವರ್‌ಯೂರ್ ದೇವಸ್ಥಾನದ ಅಧಿಕಾರಿಗಳ ಸಭೆಯು ಕಂಪಣ್ಣ ಒಡೆಯರ ಆಜ್ಞೆಯಮೇರೆಗೆ ರಾಜನ ಅಧಿಕಾರಿ ತುಣೈಇರುಂದನಂಬಿ ಕೊಂಗರಾಯರ್ ಅಧ್ಯಕ್ಷತೆಯಲ್ಲಿ ಸೇರಿತು. ಈ ದೇವಸ್ಥಾನದ ಧರ್ಮದರ್ಶಿಗಳು ಮತ್ತು "ನಾಟ್ಟಾರ್" (ಜಿಲ್ಲೆಯ ಪ್ರತಿನಿಧಿಗಳು) ಹಾಜರಿದ್ದರು. ಈ ಸಭೆಯ ದೇವಸ್ಥಾನದಲ್ಲಿ ಸೇವೆಯ ಕ್ರಮವನ್ನು ಚರ್ಚಿಸಿ ನಿರ್ಧಾರಕ್ಕೆ ಬರಲಾಯಿತು.[3]

---

1. *SPI*, XX, No. 232.
2. *Ibid.*, No. 391.
3. 196 of 1912.

(೨) ಇನ್ನೊಂದು ಶಾಸನವು ಆರಗಲೂರ್ ಕಾಮೇಶ್ವರ ದೇವಸ್ಥಾನದ ಸ್ಥಾನಿಕರಲ್ಲಿ ಉಂಟಾದ ವಿವಾದದಲ್ಲಿ ತಿರುಮಲನಾಯಕನ ತೀರ್ಪನ್ನು ತಿಳಿಸುತ್ತದೆ. ನಾಡಿನ ಪ್ರತಿನಿಧಿಗಳಾದ "ನಾಟ್ಟಾರ್" ಆ ಪ್ರಶ್ನೆಯನ್ನು ಬಗೆಹರಿಸಲು ಮುಂದೆ ಬಂದರು. ಎರಡು ಪಕ್ಷಗಳನ್ನೂ ಕರೆದು ತಾವು ಕೊಟ್ಟ ತೀರ್ಪನ್ನು ಪಾಲಿಸುವಂತೆ ತಿಳಿಸಿದರು. ತಿರುಮಲನಾಯಕ ಮತ್ತು "ನಾಟ್ಟಾರ್" ಆ ಪಕ್ಷಗಳು ತಮ್ಮ ನಿಲುವನ್ನು ಮಹಾಜನರ ಮುಂದಿಡುವಂತೆ ಅಪ್ಪಣೆಮಾಡಿದರು. ಕುಳತ್ತೂರ್, ಅಲಬಲಂ, ಷಡಯ್ಯೆನ್‌ಪಟ್ಟು ಮತ್ತು ಮತ್ತಿಯ ಕುರಿಚಿ ಅಗ್ರಹಾರಗಳ ಮಹಾಜನರು ಸೇರಿ ಎರಡು ಪಕ್ಷಗಳ ವಾದವನ್ನು ಕೇಳಿ ತೀರ್ಮಾನಿಸಿದರು.[1]

**ದೇವಸ್ಥಾನಗಳಿಗೆ ಭೂದಾನ :** "ನಾಡುಸಭೆ"ಯು ದೇವಸ್ಥಾನಗಳಿಗೆ ಭೂಮಿಯನ್ನು ದಾನಮಾಡುತ್ತಿದ್ದುವು. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು :

(೧) ಕ್ರಿ.ಶ. ೧೩೪೩ ರಲ್ಲಿ ಪೆರಿಯಪೆಮ್ಮಯ ನಾಯಕರ್, ತೆಕ್ಕಾಲಿನ ಅರುಳಾಲನಾಂದರ್ ದೇವರಿಗೆ, ಭಾವಿಗಳು ಮತ್ತು ಮರಗಳನ್ನೊಳಗೊಂಡ ಸ್ವಲ್ಪ ಭೂಮಿಯನ್ನು "ಸರ್ವಮಾನ್ಯ" ವಾಗಿ, ಅನ್ನ, ಗಂಧ, ದೀಪಗಳು, ಹಾರಗಳು, ದೇವಸ್ಥಾನದ ರಿಪೇರಿ ಮತ್ತು ಇತರ ಆವಶ್ಯಕತೆಗಳಿಗೆ ದೇವಸ್ಥಾನದ ಅಧಿಕಾರಿಗಳಿಗೆ ಕೊಟ್ಟರು. ನಾಡಿನ ನಿವಾಸಿಗಳು ಆ ಭೂಮಿಯನ್ನು ಸರ್ವಮಾನ್ಯವಾಗಿ ಮುಂದುವರಿಸುವುದಾಗಿ ವಾಗ್ದಾನ ಮಾಡಿದರು. ಈ ಶಾಸನದಲ್ಲಿ ನಾಡಿನ ನಾಲ್ಕು ನಿವಾಸಿಗಳ ಸಹಿಗಳಿವೆ.[2] (೨) ಕ್ರಿ.ಶ. ೧೩೪೬ ರಲ್ಲಿ ಅಂಬದಕ್ಕಿನಾಡಿನ ನಿವಾಸಿಗಳು, ಪಪ್ಪಿಸಿಯರ್ ಮತ್ತು ಇತರ ೬ ಜನರೊಂದಿಗೆ ಮತ್ತು ಮಹಾಸಾಮಂತಾಧಿಪತಿ ಮಂಜಯನಾಯಕನ ಮಗ ಅಂಕಯ್ಯ ನಾಯಕರ್ ಕದಲಿ ದೇವರಿಗೆ ಅನೂರ್ ಸ್ಥಳದ ಎಲ್ಲ ತರಿ ಮತ್ತು ಒಣಭೂಮಿಯನ್ನು ಸರ್ವಮಾನ್ಯವಾಗಿ, ಷೇಂಗೈನಲ್ಲಿದ್ದ ಇರಾಜೇಂದ್ರಚೋಳತಕ್ಕೀಶ್ವರಂ ಉಡೈಯ ನಾಯನಾರ್ ದೇವಸ್ಥಾನದಲ್ಲಿ ಪೂಜೆ ಮತ್ತು ನೈವೇದ್ಯಕ್ಕೆ ದಾನಮಾಡಿದರು. ಈ ಶಾಸನದಲ್ಲಿ ನಾಡಿನ ಗಣಿಕ ಶೆಟ್ಟೀಶ್ವರ ದೇವರ್ ಸೀಲಪ್ಪನ್ ಮತ್ತು ಇತರ ಹಲವರ ಸಹಿಗಳು ನಾಡಿನ ಸಹಿಯಾಗಿವೆ.[3] (೩) ಕ್ರಿ.ಶ. ೧೩೫೫ರಲ್ಲಿ ತಿರುಕ್ಕೋಯಿಲೂರ್ ಪರ್ರು "ನಾಟ್ಟವರ್" ದೇವಪೆರುಮಾಳ್ ದೇವಸ್ಥಾನಕ್ಕೆ ಭೂಮಿಯನ್ನು ದಾನಮಾಡಿದರು.[4] (೪) ಕ್ರಿ.ಶ. ೧೩೬೪ ರ ಚಾಮರಾಜನಗರ ತಾಲ್ಲೂಕು ಹರದನಹಳ್ಳಿಯ ಒಂದು ದಾಖಲೆಯು ಎಣ್ಣೆನಾಡಿನ ಉಯ್ಯಮಪಳ್ಳಿಯ ಹಲವು ಗೌಡರು, ಕೇಶವಪುರ ಅಥವಾ ನಗರದ ಸಮಸ್ತ ಬ್ರಾಹ್ಮಣರು ಮತ್ತು ಅನೇಕ ಗ್ರಾಮಗಳ ಗೌಡರು, ಮಾತೃಹಳ್ಳಿಯ

1. 413 of 1913.
2. *EC*, X, Ma. 20.
3. *Ibid*., Sd. 67.
4. 193 of 1934-35.

ಪ್ರತಿ ಸಂಸಾರದಿಂದ ಸಣ್ಣ ಪುಟ್ಟ ತೆರಿಗೆಗಳು, ಕೆರೆಗಳು ಮತ್ತು ಭೂಮಿಯನ್ನು ದಾನಮಾಡಿದರು. ಅಧಿಕಾರಿ ಸಿರಿಯಣ್ಣನ ಸಮ್ಮುಖದಲ್ಲಿ ತಾವಾಗಿಯೆ ಒಪ್ಪಿ ಹರದನ ಹಳ್ಳಿಯ ಅನಿಲೇಶ್ವರದೇವರಿಗೆ ಕೊಟ್ಟರೆಂದು ತಿಳಿಸುತ್ತದೆ.[1] (೫) ಕ್ರಿ. ಶ. ೧೩೬೯ ರಲ್ಲಿ ಮಗದೈಮಂಡಲಂ ತಿರುವಯಪಾಡಿಯ "ನಾಟ್ಟವರ್," ತಿರುಪ್ಪಾಲಸಂದಲ್ ಶಿವದೇವಸ್ಥಾನದ ಏಳನೆ ದಿನದ ಉತ್ಸವವನ್ನು ಪ್ರಾರಂಭಿಸಿದರು.[2] (೬) ಕ್ರಿ. ಶ. ೧೩೬೯ ರ ಒಂದು ಶಾಸನವು ವಿರೂಪಣ್ಣೊಡೆಯರ ಮುಖ್ಯಮಂತ್ರಿ ಮಾದರಸ ಒಡೆಯರು ಸಾತಳಿಗೆ ನಾಡಿನ ಬಾಳೆಬಳ್ಳಿಯ ವೀರೇಶ್ವರ ದೇವಸ್ಥಾನದಲ್ಲಿ ನೈವೇದ್ಯಕ್ಕೆ ಭೂದಾನಮಾಡಿದರು. ಆತನು ಈ ಭೂಮಿಯನ್ನು ಶಾಸನದ ಪ್ರಕಾರ "ನಾಡಸಂತಣಿಸಿ" ಪಡೆದನು.[3] (೭) ಕ್ರಿ.ಶ. ೧೩೭೨ ರಲ್ಲಿ ಪೊನ್‌ಪಟ್ಟ "ನಾಟ್ಟಾರ್" ಒಪ್ಪಿಗೆಯಿಂದ ದೈವಚಿಲೈಪೆರುಮಾಳ್ ದೇವಸ್ಥಾನಕ್ಕೆ ಕಂಪಣ ಒಂದು ಆಭರಣವನ್ನು ದಾನಮಾಡಿದನು.[4] (೮) ಕಾಂಗಯ್ಯೆನ್ ಮಂಟಪದಲ್ಲಿ ಸೇರಿದ "ನಾಟ್ಟಾರ್" ಕೋರಿಕೆಯ ಮೇಲೆ ಕಂಪಣ ತಿರುಪ್ಪುಲಣಿ ದೇವಸ್ಥಾನಕ್ಕೆ ದಾನವನ್ನು ಕೊಟ್ಟನು.[5] (೯) ಕ್ರಿ.ಶ. ೧೩೭೭ ರಲ್ಲಿ ಹರಹಳಿನಾಡಿನ ಎರಡು ಕನ್ನೂರು ಅಗ್ರಹಾರಗಳ, ಎಡಿಹಳ್ಳಿ, ಗವಲೂರು ಮತ್ತು ೭೦ ಗ್ರಾಮಗಳ ಸಮಸ್ತ ಬ್ರಾಹ್ಮಣರು ಮತ್ತು ನಾಡಿನ ಸಮಸ್ತ ಗೌಡ ಪ್ರಭುಗಳು ಗೌತಮ ಗ್ರಾಮಕ್ಕೆ ಸೇರಿದ ಬತ್ತ ಬೆಳೆಯುವ ಭೂಮಿಯನ್ನು ಅದೇ ಗ್ರಾಮದ ನರಸಿಂಹ ದೇವರಿಗೆ ದಾನಮಾಡಿದರು.[6] (೧೦) ಕ್ರಿ. ಶ. ೧೩೮೫ ರಲ್ಲಿ ರಾಜರಾಜರ್ ಎಂಬುವನು ಮತ್ತು ನಾಡು ನಿವಾಸಿಗಳು ನಾಡಿನ ನಾಯಕನೊಡನೆ, ಪುಳ್ಳಿಯೂರಿನ ವರದರಾಜ ದೇವರಿಗೆ ಭೂಮಿಯನ್ನು ಮತ್ತು ಕೆಲವು ತೆರಿಗೆಗಳನ್ನು ದಾನಮಾಡಿದರು.[7] (೧೧) ಕ್ರಿ. ಶ. ೧೪೦೮ ರ ಒಂದು ಶಾಸನವು ಬನಗವಾಡಿಯಲ್ಲಿ ಮಸಣಹಳ್ಳಿ ಗ್ರಾಮವನ್ನು ಸಮಸ್ತ ಹಕ್ಕುಗಳೊಡನೆ ಗಾಜನೂರಿನ ಮಲ್ಲಿಕಾರ್ಜುನ ದೇವರ ದೇವಸ್ಥಾನದಲ್ಲಿ ದೇವರ ಸೇವೆಗೆ, ಅಲಂಕಾರಕ್ಕೆ, ಉತ್ಸವಗಳಿಗೆ ಮತ್ತು ದೀಪಾರಾಧನೆಗೆ ದಾನಮಾಡಿದರು. ಈ ದಾನವನ್ನು "ಉದುವಂಕನಾಡ ಸಮಸ್ತ ಪ್ರಜೆ ಗಾವುಂಡುಗಳು" ಮಾಡಿದರು.[8]

(೧೨) ಕ್ರಿ. ಶ. ೧೫೫೬ ರಲ್ಲಿ ಮಹಾನಾಯಕಾಚಾರ್ಯ ನಿಡುಗಲ್ ತಿಮ್ಮಣ್ಣ ನಾಯಕ, ನಿಡುಗಲ್ಲ "ಸಮಸ್ತ ಪ್ರಜೆಗಳು, ಗೌಡಪ್ರಜೆಗಳು, ಸೆಟ್ಟಿ ಪಟ್ಟಣಸ್ವಾಮಿಗಳು

1. *EC*, IV, Ch. 113.
2. 163 of 1904.
3. *MAR*, 1932, No. 44.
4. 617 of 1902.
5. 114 of 1903.
6. *EC*, VII, Sk. 35.
7. *EC*, IX, Ht. 93.
8. *MAR*. 1931, No, 57.

ಸಹಿತವಾಗಿ", ದೇವರ ನೈವೇದ್ಯಕ್ಕೆ, ಪೂಜೆಗೆ ಮತ್ತು ಉತ್ಸವಗಳಿಗೆ ಒಂದು ಗ್ರಾಮವನ್ನು ದಾನಮಾಡಿದರು.[1]

ಇದೇ ವರ್ಷದ ಇನ್ನೊಂದು ಶಾಸನವು ಇದನ್ನು ಸಮರ್ಥಿಸುತ್ತದೆ. ಮಹಾ ನಾಯಕಾಚಾರ್ಯ ನಿಡುಗಲ್ ತಿಮ್ಮಣ್ಣನಾಯಕ, ನಿಡುಗಲ್ ಸೀಮೆಯ ಪ್ರಜೆಗಳು ಸೆಟ್ಟಿ ಪಟ್ಟಣ ಸ್ವಾಮಿಗಳೊಡನೆ ನಿಡುಗಲ್ ರಾಜ್ಯದಲ್ಲಿ ತುಮಕುಂಟೆ ಗ್ರಾಮವನ್ನು ಕೊಂಡು ಸಮಸ್ತ ಹಕ್ಕುಗಳೊಡನೆ ದೇವರ ಸೇವೆಗೆ ಮತ್ತು ಉತ್ಸವಗಳಿಗೆ ದಾನ ಮಾಡಿದರು.[2]

**ದೇವಸ್ಥಾನಗಳಿಗೆ ದತ್ತಿಗಳು :** ನಾಡು ಜನರು ಮತೀಯ ಮತ್ತು ರಾಷ್ಟ್ರಪ್ರೇಮ ವೃಷ್ಟಿಯಿಂದ ಅನೇಕವೇಳೆ ತೆರಿಗೆ, ನಗದು ಮತ್ತು ದಾಸ್ತಾನುಗಳ ರೂಪದಲ್ಲಿ ದತ್ತಿಗಳನ್ನು ನೀಡುತ್ತಿದ್ದರು :

(೧) ಕ್ರಿ. ಶ. ೧೩೬೬ ರಲ್ಲಿ ಹಂಗೆನೂರು ಗೌಡ ಕಾಳಪ್ಪ, ಆ ಗ್ರಾಮದ ಮಹಾಜನಗಳು ಮತ್ತು ಆ ನಾಡಿನ ಗೌಡುಗಳು ಒಟ್ಟಾಗಿ ಸೇರಿ ಅಂಕನಾಥ ದೇವಸ್ಥಾನದ ನೃತ್ಯಗಾತಿಗಳಿಗೆ ಭೂಮಿಯನ್ನು ಮತ್ತು ತೆರಿಗೆಗಳನ್ನು ಕೊಟ್ಟರು.[3] (೨) ಕ್ರಿ. ಶ. ೧೩೬೮ ರಲ್ಲಿ ತಗಡೂರಿನ ಅರಸುಗಳು ನಾಡಿನ ಗೌಡಪ್ರಜೆಗಳೊಡನೆ (ಮುಖ್ಯವಾಗಿ ಕೋವರು ಮತ್ತು ಕೊಮ್ಮೆಗಳೊಡನೆ), ದೇವಸ್ಥಾನದ ದತ್ತಿಯಿಂದ ತಮ್ಮಡಿ (ಪೂಜಾರಿ), ಮೂಲಸ್ಥಾನ ದೇವರ ದೀಪಾರಾಧನೆಗೆ, ಸೇವಕನ ಮತ್ತು ಹೂವು ಸರಬರಾಜು ಮಾಡುವವನ ಜೀವನಕ್ಕೆ ಕೊಡುತ್ತಿದ್ದ ೧೨೦ "ಪಗೋಡ"ಗಳ ಬದಲು ಅವರೇ ಅರಮನೆಗೆ ಪ್ರತಿವರ್ಷವೂ ಆ ಉದ್ದೇಶಕ್ಕೆ ೧೨೦ "ಪಗೋಡ"ಗಳನ್ನು ಕೊಡುವುದಾಗಿ ತಿಳಿಸಿದರು.[4] (೩) ಕಳ್ಳಕುರುಚಿ "ನಾಟ್ಟವರ್", ಉಲಗನಲ್ಲೂರು ದೇವಸ್ಥಾನದಲ್ಲಿ ಶಾಶ್ವತವಾದ ಒಂದು ದೀಪಕ್ಕೆ ಮತ್ತು ಉತ್ಸವಗಳಲ್ಲಿ ದೀಪಕ್ಕೋಸ್ಕರ ಪ್ರತಿವರ್ಷವೂ ೧೨ "ಕಲಂ" ಎಣ್ಣೆಯನ್ನು ದಾನಮಾಡುವುದಾಗಿ ಒಪ್ಪಿದರು.[5] (೪) ಕ್ರಿ. ಶ. ೧೪೫೯ ರಲ್ಲಿ ತೆಂಕೋನಾಡು "ನಾಟ್ಟವರ್" ತಿರುಕ್ಕೋಕರಣಂ ಶಿವ ದೇವಸ್ಥಾನಕ್ಕೆ ಒಂದು ದತ್ತಿಯನ್ನು ಕೊಟ್ಟರು.[6] (೫) ಕ್ರಿ. ಶ. ೧೪೪೯ ರ ಒಂದು ಶಾಸನದ ಪ್ರಕಾರ ಕೊಯಮತ್ತೂರು ಜಿಲ್ಲೆಯ ಕಾಂಗೆಯನಾಡು "ನಾಟ್ಟವರ್" ಮಲ್ಲಿಕಾರ್ಜುನರಾಯನ ನಿಯೋಗಿಯಾಗಿ ಕಂಪಯ್ಯನಾಯಕನು ಇದ್ದಾಗ ವಿನಾಯಕ ದೇವಸ್ಥಾನಕ್ಕೆ ೬ ಬಂಗಾರದ ನಾಣ್ಯಗಳನ್ನು ದಾನಮಾಡಿದನು.[7]

1. *EC*, XII, Pg. 40.
2. *Ibid.*, Si. 31.
3. *MAR*, 1917, p. 47.
4. *EC* Nj. 117.
5. 177 of 1941.
6. *IPS*, No. 691.
7. 216 of 1920.

"ನಾಟ್ಟವರ್" ದೇವಸ್ಥಾನದಲ್ಲಿ ವಿವಿಧ ಸೇವೆಗಳಿಗೆ ದತ್ತಿಗಳನ್ನು ಸ್ವೀಕರಿಸು ತ್ತಿದ್ದರು. ಇದ್ದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು :

(೧) ಕ್ರಿ.ಶ. ೧೪೨೧ ರ ಒಂದು ಶಾಸನದ ಪ್ರಕಾರ ಶೂರೈಕುಡಿ ವಿಜಯಾಲಯ ದೇವ ಸ್ಥಳೀಯ ದೇವಸ್ಥಾನಕ್ಕೆ ಪಣಗಳನ್ನು ದತ್ತಿಯಾಗಿ ಕೊಟ್ಟನು. ಈ ಹಣವನ್ನು ಪ್ರತಿವರ್ಷವು ಅತಲೈಯೂರ್ ನಾಡು "ನಾಟ್ಟವರ್" ನಾಯಕನಿಗೆ ಸಲ್ಲಬೇಕಾಗಿದ್ದ ವರಮಾನದಲ್ಲಿ ಪ್ರತಿವರ್ಷವು ಹಿಡಿದುಕೊಳ್ಳುತ್ತಿದ್ದರು.[1] (೨) ಕ್ರಿ. ಶ. ೧೪೪೬ ರಲ್ಲಿ ತುಳು ರಾಜ್ಯವನ್ನು ಆಳುತ್ತಿದ್ದ ಮಹಾಪ್ರಧಾನ ಆಚರಸ ಒಡೆಯ, ತನ್ನ ರಾಜಧಾನಿ ಬಾರಕೂರಿನಲ್ಲಿ, ದೇವೀಮಹಾತ್ಮ್ಯಸ್ತೋತ್ರವನ್ನು ಪಠಿಸಲು ಪುರುಷೋತ್ತಮ ಭಟ್ಟನಿಗೆ ೧೨ ಹೊನ್ನುಗಳನ್ನು ದಾನಮಾಡಿದನು. ಈ ದಾನದ ಮೇಲ್ವಿಚಾರಣೆಯನ್ನು "ನಾಡು", "ನಖರ" ಮತ್ತು "ಗ್ರಾಮ" ಸಭೆಗಳಿಗೆ ಹೊಂದಿದ್ದಿತು.[2] (೩) ಕ್ರಿ. ಶ. ೧೪೬೨ ರಲ್ಲಿ ಕರ್ಕುರುಚಿ "ನಾಟ್ಟವರ್" ಪುದುಕೊಟ್ಟೆಸಮೀಪದ ತಿರುಕಟ್ಟಳೈ ಶಿವ ದೇವಸ್ಥಾನದ ನಾನಾ ಸೇವೆಗಳಿಗೆ ಪೆರುಂಗಳೂರಿನ ಶ್ರೀರಂಗಪಲ್ಲವರಾಯನಿಂದ ಒಂದು ದತ್ತಿಯನ್ನು ಸ್ವೀಕರಿಸಿದರು.[3] (೪) ಕೃಷ್ಣದೇವರಾಯನ ಕಾಲದಲ್ಲಿ ಕ್ರಿ.ಶ. ೧೫೨೦ ಮತ್ತು ೧೫೨೩ ರ ಎರಡು ಶಾಸನಗಳು ವಲ್ಲನಾಡು "ನಾಟ್ಟವರ್" ವಿಜಯನಗರ ಸರ್ಕಾರಕ್ಕೆ ಸಲ್ಲಿಸಬೇಕಾದ ಹಣವನ್ನು ಪಾವತಿ ಮಾಡಲು ತಿರುವರಂಗುಳಂ ದೇವಸ್ಥಾನಕ್ಕೆ ಭೂಮಿಯನ್ನು ಮಾರಿದರು.[4] ಕಷ್ಣದೇವರಾಯನ ಆಳ್ವಿಕೆಯಲ್ಲಿ ನಾಡು ಸಭೆ ಮುಂದುವರಿದುದಕ್ಕೆ ಈ ಶಾಸನಗಳು ಸಾಕ್ಷ್ಯವಾಗಿವೆ.

ಕೊಪ್ಪದ ಅಪ್ಪಾಜಿ ಸೇನಬೋವನು ಕೊಡನಾಡಿನ ತುಂಗಭದ್ರಾ ನದಿಯ ದಂಡೆಯ ಮೇಲಿನ ನಾರಿ ಎಂಬ ಸ್ಥಳದಲ್ಲಿ ಗೋಪಾಲಕೃಷ್ಣದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಕೊಂಡು ದೇವರ ಸೇವೆಗೆ ದಾನಮಾಡಿದನು. ಈ ಶಾಸನವು ಇನ್ನೂ ಅನೇಕ ವಿಷಯವನ್ನು ತಿಳಿಸುತ್ತದೆ. ಈ ಪುಣ್ಯದ ಕೆಲಸವನ್ನು ನೆರವೇರಿಸಲು ಕೆಲವು ಸಾಕ್ಷಿಗಳನ್ನು ಹೆಸರಿಸುತ್ತದೆ. ಕೊಪ್ಪ ಕೊಡನಾಡು ನಾಲ್ಕು ಸಾವಿರದ ಎಲ್ಲ ನಾಡು ಅಧಿಕಾರಿಗಳು, ಕೊಪ್ಪದ ಎರಡು ಅಂಗಡಿಗಳ ರೈತರು, ಬೊಮ್ಮನಪುರ, ನಾಗಲಾಪುರ, ನರಸಿಂಹಪುರ, ಬೆಳಗುಳ ಹೊಸ ಅಗ್ರಹಾರ, ಮಂಗಳಾಪುರ ಮತ್ತು ಸೋಮಲಾಪುರದ ಬ್ರಾಹ್ಮಣರು ಎರಡು ಪಕ್ಷಗಳ ಅನುಮತಿಯಿಂದ, ದಾನಮಾಡಿದವನ ಮತ್ತು ಸಾಕ್ಷಿಗಳ ಸಹಿಯೊಡನೆ ಕೊಡನಾಡಿನ ಸಂಕಪ್ಪಸೇನಬೋವ ಈ ಒಪ್ಪಂದವನ್ನು ಬರೆದನು.[5] ಈ ನಿದರ್ಶನದಲ್ಲಿ ಸರ್ಕಾರದ ಅಧಿಕಾರಿಗಳು ದತ್ತಿಯನ್ನು ಕೊಟ್ಟರು. ಈ ಶಾಸನದಿಂದ

---

1. *IPS*, No. 699.
2. Panchamukhi : *Karnatak Inscriptions*, I, No. 58.
3. *IPS*, No. 711.
4. *Ibid.*, No. 733 and 737.
5. *EC*, VI, Kp. 57.

ಸರ್ಕಾರಿ ಅಧಿಕಾರಿಗಳು, ಸಹಕಾರಿ ಸಂಸ್ಥೆಗಳು ದತ್ತಿಕೊಡಲು ಯಾವಾಗಲೂ ಒತ್ತಾಯ ಮಾಡುತ್ತಿರಲಿಲ್ಲವೆಂದು ಸ್ಪಷ್ಟವಾಗುತ್ತದೆ.

ಧರ್ಮಾರ್ಥವಾಗಿ ಭೂದಾನ: ಧರ್ಮಾರ್ಥವಾಗಿ "ನಾಡು"ಸಭೆಯು ಭೂದಾನ ಮಾಡಿದ ಅನೇಕ ದಾಖಲೆಗಳಿವೆ:

(೧) ಕ್ರಿ.ಶ. ೧೩೪೧ರಲ್ಲಿ ಅಂಬದಕ್ಕಿ ನಾಡಿನ ನಾಯಕ ಪಪ್ಪಿಶಿಯಾರ್ ಮತ್ತು ಇತರ ನಿವಾಸಿಗಳು ಇಬ್ಬರು ಮಹನೀಯರಿಗೆ ಅಂಬದಕ್ಕಿ ನಾಡಿನಲ್ಲಿ ಅತ್ತಿಗಪಳ್ಳಿ ಗ್ರಾಮಕ್ಕೆ ವೇಟ್ಟಪ್ಪನ್ ಅತ್ತಿಗಪಳ್ಳಿ ಎಂಬ ಹೆಸರನ್ನು ಕೊಟ್ಟು ದಾನಮಾಡಿದರು.[1] (೨) ಕ್ರಿ.ಶ. ೧೩೪೨ ರಲ್ಲಿ ಪುಳ್ಳಿಯೂರ್ ನಾಡಿನ ತುರವರ್ ನಾಯನ್ ತಂಬಿರವಿ ಶೆಟ್ಟಿಯಾರ್ ಒಳಗೊಂಡ ಆ ನಾಡಿನ ನಿವಾಸಿಗಳು, ಆ ನಾಡಿನ ನಾಯಕನ ಮಗ ಶಿಯನನ್ ಎಂಬುವನಿಗೆ ಹಲವು ಜಮೀನುಗಳನ್ನು ಕೊಟ್ಟರು.[2] (೩) ಕ್ರಿ.ಶ. ೧೩೪೬ ರ ಒಂದು ಶಾಸನವು, ಪುಟ್ಟ ವ್ಯಾಪಾರಿ ಮುತ್ತಿಯರಸನ್ ಇಲ್‌ಮನ್ ಸುವಾಸನಾಯಕರ್ ಮತ್ತು ತೆಂಕರ್‍ರು ತುರವಳಿ ನಾಡಿನ ನಿವಾಸಿಗಳ ಸಾರ್ವಜನಿಕ ಧರ್ಮವನ್ನು ತಿಳಿಸುತ್ತದೆ. ಅವರು ಭೂಮಿಯನ್ನು ಮಾರುವ ಅಥವಾ ಭೋಗ್ಯಮಾಡುವ ಹಕ್ಕಿನೊಡನೆ ತೊಂಡ ಮಂಡಲದ ಶೇಂಜಿ ಅಗರಂ ನಿವಾಸಿಯಾದ ಗಂಗಾಧರನೆಂಬುವನಿಗೆ ಕೊಟ್ಟರು.[3] (೪) ಕ್ರಿ.ಶ. ೧೩೪೭ ರಲ್ಲಿ ಪಪ್ಪಿ ಸಿಯಾರ್ ಮತ್ತು ಇತರ ಮೂವರನ್ನೊಳಗೊಂಡಂತೆ ಅಂಬದಕ್ಕಿ ನಾಡಿನ ನಿವಾಸಿಗಳು ಮತ್ತು ಮಹಾಸಾಮಂತಾಧಿಪತಿ ಮಂಜಯನಾಯಕರ ಮಗ ಅಂಕಯನಾಯಕ ಕೆಟ್ಟಸಿಯಾರ್ ಎಂಬುವನಿಗೆ ಆ ನಾಡಿಗೆ ಸೇರಿದ, ದಸಯ್ಯಪಳ್ಳಿಗೆ ಸೇರಿದ ಸಮಸ್ತ ತರಿ ಮತ್ತು ಬಂಜರು ಭೂಮಿಯನ್ನು ತೆರಿಗೆ ರದ್ದು ಮಾಡಿ ದಾನ ಮಾಡಿದರು. ಈ ದಾಖಲೆಯಲ್ಲಿ ನಾಡಿನ ಸಹಿಯಾಗಿ ಶೆಟ್ಟೀಶ್ವರದೇವರ್ ಸಹಿ ಮತ್ತು ನಾಡಿನ ಕರಣಿಕ ನಾಯಕ ಅಲ್ಲಾಳನಾಥ ನೀಲಪ್ಪನ್ ಸಹಿಯೂ ಇದೆ. ಕರಣಿಕನು ಈ ದಾಖಲೆಯನ್ನು ಬರೆದನು.[4] (೫) ಕ್ರಿ.ಶ. ೧೩೬೧ ರಲ್ಲಿ ಪೆರಿಯನಾಡಿನ ನಿವಾಸಿಗಳು ವೀರಪ್ಪನೆಂಬುವನಿಗೆ "ಸರ್ವಮಾನ್ಯ" ವಾಗಿ ತನ್ನಿಚ್ಚೈಪಳ್ಳಿಪುರಂ ಸ್ಥಳಕ್ಕೆ ಸೇರಿದ ತರಿ ಮತ್ತು ಬಂಜರುಭೂಮಿಯನ್ನು ದಾನಮಾಡಿದರು.[5] (೬) ಕ್ರಿ.ಶ. ೧೩೬೩ ರಲ್ಲಿ ಮುಳುಬಾಗಿಲಿನ ಹತೋಟಿ ಹೊಂದಿದ್ದ ಕಂಪಣ್ಣ ಒಡೆಯರ ಮಗ ಕಾಮಯ್ಯನಾಯಕ, ಎಲಹಂಕನಾಡು ಅಲ್ಲಾಳಜೀಯನ ಮಗ ತನ್ನಿಯಪ್ಪನ ಮಗ "ಸರ್ವಮಾನ್ಯಕೊಡಗೆ" ಯಾಗಿ ರೈತರ ಹಾಜರಿಯಲ್ಲಿ ತೊರೆಪೊಳಿನಾಡಿನ ವಿಭಾಗವಾಗಿದ್ದ ಬೆಳವಟ್ಟದಲ್ಲಿ ಭೂಮಿಯನ್ನು ದಾನಮಾಡಿದರು.[6] (೭) ಕ್ರಿ.ಶ. ೧೩೬೭ರಲ್ಲಿ ಮಂಡುನಾಡು ಮೂವತ್ತರ

1. *EC*, X, Sd. 26.
2. *EC*, IX, Ht. 90.
3. *Ibid.*, Bn. 59.
4. *Ibid.*, Ct. 75.
5. *Ibid.*, Kl. 203.
6. *EC*, IX, Bn. 59.

ಗೌಡ ಪ್ರಜೆಗಳು ಸಾಕಣ್ಣನ ಮಗ ದೇವಪ್ಪನಿಗೆ ಭೂಮಿಯನ್ನು ದಾನಮಾಡಿದರು.[1] ಇದೂ ಅಲ್ಲದೆ, ಕ್ರಿ.ಶ. ೧೩೭೧ ರಲ್ಲಿ ಮಂದುನಾಡು ಮೂವತ್ತರ ಸಮಸ್ತನಾಡು ಜನರು, ಮಂಗಲಗ್ರಾಮದಲ್ಲಿ ದೇವರಿಗೆ ಸೇರಿದ ಭೂಮಿಯನ್ನು ಬಿಟ್ಟು ಉಳಿದುದನ್ನು ಸೂರ್ಯ ಭಟ್ಟನ ಮಗ ಮಹರಸನಿಗೆ ಮಾನವನ ನಾಲ್ಕು ಉದ್ದೇಶಗಳನ್ನು ಸಾಧಿಸಲು ಮತ್ತು ಉಮಾಮಹೇಶ್ವರನ ಭಕ್ತಿಯಿಂದಾಗಿ, ಬಡಗೆರೆಯ ಕೆರೆಯಲ್ಲಿ ಭೂಮಿಯನ್ನು ದಾನ ಮಾಡಿದರು.[2] ಕ್ರಿ.ಶ. ೧೩೭೪ರಲ್ಲಿ ಅದೇ ಮಂದುನಾಡು ಮೂವತ್ತರ ಗೌಡ ಪ್ರಜೆಗಳು ಮತ್ತು ನಿಟ್ಟೂರಿನ ಐವರು ಭೂ ಮಾಲೀಕರು ಭಂಡಾರದ ಮಲ್ಲಪ್ಪನಿಗೆ ನಿಟ್ಟೂರು ಗ್ರಾಮದಲ್ಲಿ ಹದಿನಾಲ್ಕು "ಹೊನ್ನು"ಗಳ ಬೆಲೆಯುಳ್ಳ ಗ್ರಾಮವನ್ನು ಕೊಟ್ಟರು.[3] (೮) ಕ್ರಿ.ಶ. ೧೩೯೬ ರ ಒಂದು ಶಾಸನವು ಬಡಗನಾಡಿನ ತಿತಿಸರಿಗದ ಸುಬೂರ್ ಗ್ರಾಮದಲ್ಲಿನ ಕೆಲವು ಜಮೀನನ್ನು ಐವತ್ತು ನಾಡಿನಲ್ಲಿನ ಹೆಬ್ಬಯಲ್ ಬೆಲಿಗನಬದು ಗೌಡಪ್ರಭುಗಳು, ವೀರಪ್ಪನೆಂಬ ಆ ಗ್ರಾಮದ ನಿವಾಸಿಗೆ ದಾನಮಾಡಿದರು. ಈ ಶಾಸನದಲ್ಲಿ ಗೌಡಪ್ರಭುಗಳ ಹೆಸರುಗಳನ್ನು ಕೊಡಲಾಗಿದೆ. ಈ ಶಾಸನದಲ್ಲಿ ಹೆಸರಿರುವ ಬಡಗನಾಡು ಸಾಂತಳಿಗೆ ಸಾಸಿರಪ್ರಾಂತ್ಯದ ಒಂದು ಭಾಗವಾಗಿತ್ತು.[4] ಮತ್ತೊಂದು ಶಾಸನವು ಬಡಗನಾಡಿಗರನ್ನು ಬ್ರಾಹ್ಮಣಕುಲದ ಒಂದು ಪಂಥವೆಂದು ತಿಳಿಸುತ್ತದೆ.[5] ಇದರಿಂದ "ಬಡಗನಾಡಿನವರು" ಎಂಬ ಬ್ರಾಹ್ಮಣಪಂಥವು ಶಿವಮೊಗ್ಗ ಜಿಲ್ಲೆಯಲ್ಲಿ ಹಿಂದೆ ವಾಸವಾಗಿದ್ದ ಸಂತತಿಯವರೆಂದು ಊಹಿಸಬಹುದು. (೯) ನಾಡಪ್ರಭುಗಳು ದಾನಮಾಡಿದುದಕ್ಕೆ ಶಾಸನಾಧಾರವಿದೆ. ಕ್ರಿ.ಶ. ೧೩೭೭ ರಲ್ಲಿ ವಿರೂಪಣ್ಣ ಒಡೆಯರು ಪ್ರಾಂತ್ಯಾಧಿಕಾರಿಯಾಗಿದ್ದಾಗ, ನಸವಂದುನಾಡುಸೀಮೆಯ ಸಮಸ್ತನಾಡಪ್ರಭುಗಳು, ಬೇಚರಸನ ಮಗ ಗೋವಿಂದದೇವನಿಗೆ ಅತ್ತಿಗರಗ್ರಾಮವನ್ನು ಕೊಟ್ಟರು.[6] ಕ್ರಿ.ಶ. ೧೪೦೮ರಲ್ಲಿ ಆರಗವೇಂದೆ ಹದಿನೆಂಟು ಕಂಪಣಗಳ ನಾಡಪ್ರಭುಗಳು ಇತರರೊಡನೆ ಕಲ್ಲಪ್ಪ ಮಾಯಣ್ಣನಿಗೆ ರಾವುನಾಡಿನ ಕೊಬಡೆಗ್ರಾಮದಲ್ಲಿ ಭೂಮಿಯನ್ನು ದಾನಮಾಡಿದರು.[7]

ಪ್ರಜೆಗಳು ರಾಜರು ಮತ್ತು ಕೆಲವು ಪ್ರಾಂತ್ಯಾಧಿಕಾರಿಗಳಲ್ಲಿ ಗೌರವಹೊಂದಿದ್ದರು. ಆರಗ ಹದಿನೆಂಟು ಕಂಪಣಗಳ ಶಾಸನಗಳು ಈ ವಿಷಯವನ್ನು ದೃಢೀಕರಿಸುವುದನ್ನು ಮುಂದೆ ಆ ಸ್ಥಳದ "ನಾಡು" ಸಭೆಯ ಚಟುವಟಿಕೆಗಳನ್ನು ಚರ್ಚಿಸುವಾಗ ತಿಳಿಸ ಲಾಗುತ್ತದೆ. ಈ ಸಂದರ್ಭದಲ್ಲಿ ಈ ವಿಷಯವನ್ನು ಸ್ಥಿರಪಡಿಸುವ ಇತರ ಹಲವು ಶಾಸನಗಳನ್ನು ತಿಳಿಸಬಹುದು—

---

1. *EC*, VIII, Tl. 120.
2. *Ibid.*, Tl. 119.
3. *Ibid.*, Tl. 114.
4. *MAR*, 1931, No. 64.
5. *EC*, XII, Tp. 1.
6. *EC*, VIII, Tl. 119.
7. *Ibid.*, Tl. 196.

(೧) ಕ್ರಿ.ಶ. ೧೩೮೪ ರಲ್ಲಿ ಸಾದಲಿಯ ಲಕ್ಕರಸ ಕೊಳಲದ ನಾಡುಪ್ರಭುಗಳೊಡನೆ, ಕೊಳಲನಾಡಿನ ಚಿಕ್ಕಹಯೂರಿಗೆ ಸೇರಿದ ಭೂಮಿಯನ್ನು ಮೂಲಸ್ಥಾನ ದೇವರ ನೈವೇದ್ಯಕ್ಕೆ ಮತ್ತು ಅಲಂಕಾರಕ್ಕೆ ನಾಗಣ್ಣ ಒಡೆಯರ ಮಗ ದೇಪಣ್ಣ ಒಡೆಯರ ಆಯುರಾರೋಗ್ಯ ಐಶ್ವರ್ಯಕ್ಕೋಸ್ಕರ ದಾನಮಾಡಲಾಯಿತು.[1] (೨) ಅದೇವರ್ಷ ಅದೇ ಉದ್ದೇಶದಿಂದ, ನಾಗಣ್ಣ ಒಡೆಯರ ಮತ್ತು ಅವನ ಮಗನ ಸಲುವಾಗಿ ಕೊಳಲದ ನಾಡಮಹಾಪ್ರಭುಗಳು, ಅದೇ ಅಧಿಕಾರಿ ಲಕ್ಕರಸಪ್ಪ ಮುಕ್ಕಣ್ಣ ಜೀಯ ಅಯ್ಯೀರಿಶೆಟ್ಟಿ ಮತ್ತು ಸಮಸ್ತ ಗೌಡಪ್ರಜೆಗಳು ಒಪ್ಪಿ ಕೊಳಲನಾಡಿನ ಹಳೆಯ ಕೊತ್ತನೂರು ಗ್ರಾಮಕ್ಕೆ ಸೇರಿದ ಎಲ್ಲ ಭೂಮಿಯನ್ನು ದಾನಮಾಡಿದರು.[2] (೩) ಕ್ರಿ.ಶ. ೧೩೮೫ ರಲ್ಲಿ ಪುಳ್ಳಿಯೂರ್ ನಾಡಿನ ರಾಜರಾಜರ್ ಮತ್ತು ನಿವಾಸಿಗಳು, ಪುಳ್ಳಿಯೂರ್ ನಾಡಿನ ನಾಯಕ ತುರವರ್ ನಂಬಿವರಿಶೆಟ್ಟಿಯಾರ್ ಸೇರಿ ಪುಳ್ಳಿಯೂರಿನ ವರದರಾಜ ದೇವರಿಗೆ ಭೂಮಿ ಮತ್ತು ಹಲವು ತೆರಿಗೆಗಳನ್ನು ಹರಿಹರ ರಾಯರ ವಿಜಯಕ್ಕೋಸ್ಕರ ದಾನ ಮಾಡಿದರು.[3] (೪) ಅನೇಕವೇಳೆ “ನಾಟ್ಟವರ್” ದೇವಸ್ಥಾನಕ್ಕೆ ಒಂದು ಗ್ರಾಮವನ್ನು ಸಂಪೂರ್ಣವಾಗಿ ದತ್ತಿಯಾಗಿ ಕೊಡುತ್ತಿದ್ದರು. ಉದಾಹರಣೆಗೆ, ಕ್ರಿ.ಶ. ೧೪೯೯ ರಲ್ಲಿ ಆಲರೂರ್ ಪರ್ರು “ನಾಟ್ಟವರ್” ಕಂದರಡಿತ್ತ ಮಂಗಳಂ ಗ್ರಾಮವನ್ನು ಅದೇ ಸ್ಥಳದ ದೇವಸ್ಥಾನಕ್ಕೆ ಸ್ವಾಮಿ ನರಸನಾಯಕರ ವಿಜಯಕ್ಕೆ, ವಿಶೇಷ ಪೂಜೆಗೆ ದಾನಮಾಡಿದರು.[4]

**ಸಾರ್ವಜನಿಕ ಉದ್ದೇಶಕ್ಕೆ ಮಾಡಿದ ಕೆಲಸಕ್ಕೆ ಮೆಚ್ಚಿಗೆ ವ್ಯಕ್ತಪಡಿಸಿದುದು:** “ನಾಡು” ಸಭೆಯು ಸಾರ್ವಜನಿಕ ಉದ್ದೇಶಕ್ಕೆ ಮಾಡಿದ ಕೆಲಸಗಳಿಗೆ ಮೆಚ್ಚಿಗೆ ವ್ಯಕ್ತ ಪಡಿಸಿ, ಅದೇ ಉದ್ದೇಶಕ್ಕೆ ದಾನಗಳನ್ನು ಮಾಡುತ್ತಿತ್ತು. ಪುಳ್ಳಿಯೂರ್ ನಾಡಿನ ಜನರು, ದತಿಸಿಂಗೆಯ ದಣ್ಣಾಯಕ, ನಂಬಿಸೋಮಶೆಟ್ಟಿ, ಪುಲಿಮಾರಗೌಡ, ನಾಡಿನ ಕರಣಿಕ ಆಣ್ಣೈಯಾರ್ ಮುಂತಾದವರು ನಂಬಿದೇವಿಸೆಟ್ಟಿಗೆ, ಅತ್ತಿನಲ್ಲೈ ಶೂಳಿವಲ್ಲೈ ಎರಡು ಸ್ಥಳಗಳಿಗೂ ಮಧ್ಯೆ ಇದ್ದ ಹಳ್ಳದಲ್ಲಿ ಮೆಕ್ಕಲನ್ನು ತೆಗೆದು ಹಾಕಿಸಿ ಒಂದು ಕೆರೆ ಮಾಡಿ ಕೊಟ್ಟರು.[5] ಕ್ರಿ.ಶ. ೧೫೬೦ ರಲ್ಲಿ ತಳುಕುವಿನ ಗೌಡರು ಮತ್ತು ಸೇನಬೋವ ಮತ್ತು ದೊಡ್ಡೇರಿಸೀಮೆಯ ಹದಿನಾಲ್ಕು ಸ್ಥಳಗಳ ಗೌಡರು ಮತ್ತು ಸೇನಬೋವರು ಮಹಾ ನಾಯಕಾಚಾರ್ಯ ಎಲ್ಲಪ್ಪನಾಯಕನಿಗೆ ಒಂದು ಕೆರೆಯನ್ನು ಮಾನ್ಯವಾಗಿ ಕೊಟ್ಟರು.[6]

**ಜನಗಳ ಸಮ್ಮುಖದಲ್ಲಿ ಭೂದಾನಗಳು:** ಅನೇಕವೇಳೆ ಜನರ ಹಾಜರಿಯಲ್ಲಿ ಭೂದಾನಮಾಡಲಾಗುತ್ತಿತ್ತು. ಈ ಚಟುವಟಿಕೆಗಳಲ್ಲಿ ಜನರು ಭಾಗವಹಿಸುತ್ತಿದ್ದುದು

1. *EC*, X, Kl. 80.
2. *Ibid.*, 67.
3. *EC*, VI, Ht. 93.
4. 190 of 1941.
5. *EC*, IX, Ht. 56.
6. *EC*, XI, Cl. 3.

ರಾಜರು ಪ್ರದೇಶಗಳನ್ನು ಪ್ರತಿನಿಧಿಸುತ್ತಿದ್ದ ಸ್ಥಳೀಯ ಸಂಸ್ಥೆಗಳಿಗೆ ಎಷ್ಟು ಪ್ರಾಮುಖ್ಯ ಮತ್ತು ಉತ್ತೇಜನ ಕೊಡುತ್ತಿದ್ದರೆಂದು ತಿಳಿಯುತ್ತದೆ. ಇದರಿಂದ ಆಳುವವರ ಮತ್ತು ಪ್ರಜೆಗಳ ಸಂಬಂಧವು ನಿಕಟವಾಗುತ್ತಿತ್ತು. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು :

(೧) ಕ್ರಿ. ಶ. ೧೩೪೦ ರಲ್ಲಿ ತೆಂಗಲ್‌ವಲ್ಲಪ್ಪದಣ್ಣಾಯಕರ್ ಮತ್ತು ಕೈವಾರ ನಾಡಿನ ನಿವಾಸಿಗಳು ನೆಲವೈಪಳ್ಳಿ ಗ್ರಾಮದಲ್ಲಿ ಭೂಮಿ ಮತ್ತು ಕೈವಾರನಾಡಿನಲ್ಲಿ ಕೆಲವು ಭಾಗಗಳನ್ನು, ವಿಷ್ಣುವಿನ ಚಕ್ರದ ಗುರುತಿನ ಗಡಿಕಲ್ಲುಗಳನ್ನು ಸ್ಥಾಪಿಸಿ ಪೆರಿಯ ಗೋಮಲಿ ಮತ್ತು ಕರಿಯ ಗೋಮಲಿ ಎಂಬುವರಿಗೆ ಕೊಟ್ಟರು.[1] ಈ ನಿದರ್ಶನದಲ್ಲಿ ಪ್ರಭುತ್ವ ಜನತೆಯೊಡಗೂಡಿ ದಾನಮಾಡಿದುದನ್ನು ಕಾಣಬಹುದು. ಈ ದಾಖಲೆಯು ದಾನದ ಉದ್ದೇಶವನ್ನು ತಿಳಿಸಿಲ್ಲ. (೨) ಕ್ರಿ.ಶ. ೧೩೪೨ ರಲ್ಲಿ ಯಲಹಂಕನಾಡಿನ ಸಮಸ್ತ ಜನರು ಮಹಾಸಾಮಂತಾಧಿಪತಿ ಚಿಕ್ಕಭೈರಯನಾಯಕನ ಮಗ ಹೊನ್ನಪುರಾಯ ನಾಯಕ ನಾಡಸೇನಬೋವ ಅಲ್ಲಾಲನಿಗೆ "ಸರ್ವಮಾನ್ಯಕೊಡಗೆಯಾಗಿ ಜಕ್ಕೂರಿನಲ್ಲಿ ಭೂದಾನವನ್ನು ಮಾಡಿದನು.[2] (೩) ಕ್ರಿ.ಶ. ೧೧೬೧ ರಲ್ಲಿ ವಲ್ಲಪ್ಪದೇಣ್ಣಾಯಕರು ಮತ್ತು ವೆಪ್ಪೂರ್‌ನಾಡಿನ ನಿವಾಸಿಗಳು, ಶೊಕ್ಕಯಪ್ಪನ್ ಮತ್ತು ಇತರರು ಒಂದು ದಾನಮಾಡಿದರು.[3] (೪) ಕ್ರಿ.ಶ. ೧೩೯೯ ರಲ್ಲಿ ಮಹಾಸಾಮಂತಾಧಿಪತಿ ಮಯಿಲೆಯ ನಾಯಕನ ಕಿರಿಯ ಸಹೋದರ ಯೋಜಯನಾಯಕ ಮತ್ತು ಸಾಂತೆಯಪನಾಡಿನ ಗೌಡಪ್ರಜೆಗಳೊಡನೆ ಒಂದು ದಾನಮಾಡಿದನು.[4] (೫) ಕ್ರಿ.ಶ. ೧೩೪೮ ರಲ್ಲಿ ಗುಣನ್ನಯ ನಾಯಕ ಯಲಹಂಕನಾಡು ಮತ್ತು ನಲ್ಲೂರ್‌ನಾಡು ಪ್ರಜೆಗಳ ಹಾಜರಿಯಲ್ಲಿ "ನಾಡವರ ಮುಂದಿಟ್ಟು", "ಸಮಸ್ತ ಪ್ರಜೆಗೌಡಗಳ ಮುಂದಿಟ್ಟು" ಒಂದು ದಾನಮಾಡಿದರು.[5] (೬) ಕ್ರಿ.ಶ. ೧೫೫೭ ರಲ್ಲಿ ಮಹಾನಾಯಕಾಚಾರ್ಯ ನಿಡುಗಲ ತಿಮ್ಮಣ್ಣನಾಯಕ, ನಿಡುಗಲ್ಲಿನ ಗೌಡಪ್ರಜೆಗಳನ್ನೊಳಗೊಂಡು ಸಮಸ್ತ ಪ್ರಜೆಗಳ ಹಾಜರಿಯಲ್ಲಿ ದೇವರ ಪೂಜೆ, ಉತ್ಸವ ಮುಂತಾದುವುಗಳಿಗೆ ಒಂದು ಗ್ರಾಮವನ್ನು ದಾನಮಾಡಿದನು.[6] ಹೀಗೆ "ನಾಡು" ಜನರು ಮತ್ತು ಸರ್ಕಾರದ ಅಧಿಕಾರಿಗಳು ಸಾಮಾನ್ಯ ಉದ್ದೇಶಕ್ಕೆ ಒಂದುಗೂಡುತ್ತಿದ್ದರು.

ವಿಜಯನಗರಸಾಮ್ರಾಜ್ಯದಲ್ಲಿ "ನಾಡು" ಪ್ರಜೆಗಳು ಸೇರಿ ವಿಕ್ರಯಮಾಡುತ್ತಿದ್ದ ನಿದರ್ಶನಗಳಿವೆ. ಕ್ರಿ.ಶ. ೧೩೪೮ ರಲ್ಲಿ ನೆಣಂಗಿನಾಡು ಹೆಗ್ಗಡೆಗಳು ಮುನಿಯೂರುಮಠದ ಸಲಿಸತೀರ್ಥ ಶ್ರೀಪಾದ ಮತ್ತು ಅವರ ಶಿಷ್ಯ ವೈಕುಂಠತೀರ್ಥರಿಗೆ ಅರವತ್ತೆರಡು ಹೊನ್ನು

1. *EC*, IX, Ht. 104.
2. *EC*, IX, Bn. 21.
3. *Ibid.*, Bn. 101.
4. *Ibid.*, Nl. 23.
5. *Ibid.*, Dv. 72.
6. *EC*, XII, Pg. 40.

ಗಳಿಗೆ ಆ ನಾಡಿನಲ್ಲಿ ಒಂದು ಜಮೀನನ್ನು ವಿಕ್ರಯಮಾಡಿ ಪತ್ರಮಾಡಿ ಪತ್ರವನ್ನು ಬರೆದುಕೊಟ್ಟರು.[1] ಕ್ರಿ.ಶ. ೧೩೯೩ ರಲ್ಲಿ ಅದೇ ನಾಡಿನ ಹೆಗ್ಗಡೆಗಳು ಅರಗೊಂಡಗಿ ಭೂಮಿಯನ್ನು ಅದೇ ಮಠದ ಲಕ್ಷ್ಮೀನಾರಾಯಣ ದೇವರಿಗೆ ೭೦ ಗದ್ಯಾಣಗಳಿಗೆ ಕ್ರಯಮಾಡಿದರು.[2] ಆರಗ ಹದಿನೆಂಟು ಕಂಪಣದ "ನಾಡು" ಜನರು ಮತ್ತು ೩ ಪಟ್ಟಣಗಳ ಜನರು ಭೂಮಿಯನ್ನು ಮಾರಲು ಒಪ್ಪಿ ಬರೆದುಕೊಟ್ಟ ನಿದರ್ಶನಗಳನ್ನು ಮುಂದೆ ತಿಳಿಸಲಾಗುತ್ತದೆ.

"ನಾಡು" ಸಭೆಯಿಂದ ಅಗ್ರಹಾರಗಳ ಸ್ಥಾಪನೆ: "ನಾಡು" ಸಭೆಯು ಅಗ್ರಹಾರಗಳನ್ನು ಸ್ಥಾಪಿಸಿದುದಕ್ಕೆ ಅನೇಕ ನಿದರ್ಶನಗಳಿವೆ:

(೧) ಕ್ರಿ.ಶ. ೧೩೮೮ ರಲ್ಲಿ, ಕೋಳಲದ ನಾಡ ಮಹಾಪ್ರಭುಗಳು, ಸಾದಳಿಯ ಅಧಿಕಾರಿ ಲಕ್ಕರಸಪ್ಪ, ಮುಕ್ಕಣ್ಣ ಜೀಯ, ಸೋವಣ್ಣ ಜೀಯ, ಯೀರಿಶೆಟ್ಟಿ ಮತ್ತು ಸಮಸ್ತ ಗೌಡ ಪ್ರಜೆಗಳು ಒಪ್ಪಿ ಕೊಳ್ಳಲಿಕ್ಕೆ ಸೇರಿದ ಹೋಳೆಯ ಕೊತ್ತನೂರ್ ಗ್ರಾಮದ ಭೂಮಿಯನ್ನು ಮಾರಿ, ಅವನ್ನು ೧೬ ಪಾಲುಗಳನ್ನಾಗಿ ಮಾಡಿ ಹಂಚಿದರು.[3] (೨) ಕ್ರಿ. ಶ. ೧೪೦೫ ರಲ್ಲಿ ಆರಗ ಹದಿನೆಂಟು ಕಂಪಣಗಳ "ನಾಡು" ಜನರು, ೩ ಪಟ್ಟಣದವರು ಮತ್ತು ಗ್ರಾಮದ ಒಡೆಯರು ವೀರಣ್ಣ ಒಡೆಯರಿಗೆ ಮಾಧವ ವಿರೂಪಾಕ್ಷಪುರ ಅಗ್ರಹಾರವನ್ನು ಸ್ಥಾಪಿಸಲು ಭೂಮಿಯನ್ನು ಮಾರಿದರು.[4] (೩) ಕ್ರಿ.ಶ. ೧೪೦೭ ರಲ್ಲಿ ಅದೇ ನಾಡು ಸಭೆಯು ಮೈಸೆ ಗ್ರಾಮದಲ್ಲಿ ಒಂದು ಅಗ್ರಹಾರ ವನ್ನು ಸ್ಥಾಪಿಸಲು ಅರವತ್ತು ಹೊನ್ ಬೆಲೆಯುಳ್ಳ ಭೂಮಿಯನ್ನು ಮಾರಿತು.[5] (೪) ಕ್ರಿ.ಶ. ೧೪೧೩ ರ ಒಂದು ಶಾಸನವು ತಾಯೂರ್ ನಾಡಿನ ನಾಯಕ ಪೆರುಮಳ ದೇವ, ತಾಯೂರಿನ ಹಲವು ಗೌಡರು ಮತ್ತು ಸುತ್ತಮುತ್ತಲ ಗ್ರಾಮಗಳ ಗೌಡರು ಉಮ್ಮತ್ತೂರಿನ ಹತ್ತಿರ ಒಂದು ಅಗ್ರಹಾರವನ್ನು ಸ್ಥಾಪಿಸಿ, ಬ್ರಾಹ್ಮಣರಿಗೆ ಭೂಮಿಯನ್ನು ದಾನಮಾಡಿ ಅಲ್ಲಿ ಅವರು ನೆಲಸಿದುದನ್ನು ದಾಖಲೆಮಾಡಿದೆ. ಈ ಶಾಸನದಲ್ಲಿ "ನಾಡ ಪ್ರಭು ಉಮ್ಮತ್ತೂರು ಗೌಡಗಳ ವಪ್ಪ" ಎಂಬಪದಗಳನ್ನು ಉಪಯೋಗಿಸಲಾಗಿದೆ.[6]

"ನಾಡು" ಜನರು ಅಗ್ರಹಾರಗಳನ್ನು ಸ್ಥಾಪಿಸಿರುವುದರ ಜೊತೆಗೆ ಅವುಗಳಿಗೆ ದಾನಗಳನ್ನು ಕೊಡುತ್ತಿದ್ದರು. ಉದಾಹರಣೆಗೆ, ಕ್ರಿ.ಶ. ೧೩೮೨ ರಲ್ಲಿ ಪುಳ್ಳಿಯೂರಿನ ಪೆರಿಯನಾಡಿನ ನಿವಾಸಿಗಳು ಐವಟ್ಟಂ ಅಥವಾ ವರದರಾಜ ಚತುರ್ವೇದಿ ಮಂಗಳಂ ಸಮಸ್ತ ಮಹಾಜನಗಳಿಗೆ ಒಂದು ದಾನ ಮಾಡಿದರು.[7] ಕ್ರಿ. ಶ. ೧೪೫೩ ರಲ್ಲಿ ಸುರೇಶ್ವರ

1. *EC*, VI, Kp. 28.
2 *Ibid.*, 29.
3. *EC*, X, Kl. 67.
4. *EC*, VIII, Tl. 105.
5. *Ibid.*, 190.
6. *MAR*, 1931, No. 58.
7. *EC*, IX, Ht. 135.

ಶ್ರೀಪಾದ ಮತ್ತು ದೇಶ ಸಮಸ್ತರು, ವರ್ಷವೆಲ್ಲ ಮದಕೇಶವ ದೇವಸ್ಥಾನದಲ್ಲಿ ಪುರಾಣ ಶ್ರವಣಮಾಡಲು ಗುಜ್ಜೋಡಿ ನಾರಾಯಣ ಭಟ್ಟನಿಗೆ ಭೂದಾನ ಮಾಡಿದರು.[1]

**ಛತ್ರ ಮತ್ತು ಮಠಗಳಿಗೆ ಕೊಡುಗೆಗಳು :** "ನಾಡು" ಸಭೆಯು ಆಗಾಗ ಛತ್ರ ಗಳನ್ನು ಸ್ಥಾಪಿಸುತ್ತಿದ್ದಿತು. ಕ್ರಿ.ಶ. ೧೪೩೦ ರಲ್ಲಿ ಶ್ರೀಗಿರಿನಾಥ ಒಡೆಯರು ಶ್ರೀಗಿರಿ ಮಲ್ಲಿಕಾರ್ಜುನ ದೇವರ ಒಂದು ಹೊಸ ಛತ್ರಕ್ಕೆ ವಿಶೇಷ ಕೊಡುಗೆಗಳನ್ನು ಕೊಟ್ಟರು. ಅವರ ಪತ್ನಿ ಸಂಗಮದೇವಿ, ಅವಳು ವಾಸಿಸುತ್ತಿದ್ದ ಮನೆ, ಭಾವಿ ಮತ್ತು ಹಣ್ಣಿನ ಗಿಡ ಗಳೊಡನೆ ಛತ್ರದ ೧೯ ಬ್ರಾಹ್ಮಣರಿಗೆ ಕೊಟ್ಟಳು. ಅಲ್ಲದೆ ಈ ಶಾಸನವು ನಾಡಿನ ಜನರು ಛತ್ರವನ್ನು ಮುಂದುವರಿಸಲು ತೆರಿಗೆ ಹಾಕಿಕೊಂಡರು.[2] ಕ್ರಿ.ಶ. ೧೪೩೧ ರಲ್ಲಿ ರಾಯಣ್ಣ ಒಡೆಯರೆಂಬುವರು ಒಂದು ಛತ್ರ ಮತ್ತು ಇತರ ಪುಣ್ಯದ ಕೆಲಸಗಳನ್ನು ಮಾಡಿದರು. ಅನವೇರಿನಾಡು ಮತ್ತು ಹೊಳೆಯ ಹೊನ್ನೂರ್‌ನಾಡಿನ ಸಮಸ್ತ ಗೌಡ ಪ್ರಜೆಗಳು ತಮ್ಮಲ್ಲಿಯೆ ಒಪ್ಪಿ ರಾಯಣ್ಣ ಒಡೆಯರಿಗೆ ಭೂದಾನಕ್ಕೋಸ್ಕರ ಒಂದು ಶಾಸನವನ್ನು ಕೊಟ್ಟರು. ಛತ್ರ ಮತ್ತು ಇತರ ಪುಣ್ಯ ಕೆಲಸಗಳಿಗೆ ತೆರಿಗೆಗಳನ್ನು ಮತ್ತು "ನಾಡು"ವಿಗೆ ಬರಬೇಕಾಗಿದ್ದ ಬಾಕಿಯನ್ನೂ ಮಾಫಿಮಾಡಿ ದಣ್ಣಾಯಕಪುರವನ್ನು ಕೊಟ್ಟರು.[3] ಕ್ರಿ.ಶ. ೧೪೫೧ ರಲ್ಲಿ ಆ ನಾಡಿನ ಹೆಗ್ಗಡೆಗಳು ಅರಂಗೊಡಗಿ ಭೂಮಿಯನ್ನು ಮಠದ ಲಕ್ಷ್ಮೀನಾರಾಯಣದೇವನಿಗೆ ೭೦ ಗದ್ಯಾಣಗಳಿಗೆ ಮಾರಿದರು.[4] ಕ್ರಿ.ಶ. ೧೪೪೪ ರಲ್ಲಿ ಪಡುವಗೇರಿ ನಾಡಿಗೆ ಸೇರಿದ ನವನಂದವ ಕೋಟಯಪ್ಪ ಹೆಗ್ಗಡೆ ತುಂಗಭದ್ರ ನದಿಯ ತೀರದ ಮೇಲಿನ ಮಠದ ಮುಂದೆ ೧೨ ಬ್ರಾಹ್ಮಣರಿಗೆ ಆಹಾರ ಕೊಡಲು ಭೂದಾನವನ್ನು ಮಾಡಿದರು.[5]

**"ನಾಡು" ತೆರಿಗೆಗಳು :** "ನಾಡು" ಸಭೆಯು ತೆರಿಗೆಗಳನ್ನು ವಿಧಿಸುವ ಸಂಪ್ರದಾಯ ಹೊಂದಿತ್ತೆಂದು ಕಾಣುತ್ತದೆ. ಕ್ರಿ.ಶ. ೧೪೩೧ ರ ಒಂದು ಶಾಸನದ ಪ್ರಕಾರ ನಾಡು ತೆರಿಗೆಗಳು ಹೀಗಿದ್ದುವು — ಕಸಬುದಾರರ ಮೇಲಿನ ತೆರಿಗೆ, ಗ್ರಾಮಗದ್ಯಾಣ, ಐದುವಿಧ ಕೆಲಸಗಾರರ ಮೇಲಿನ ತೆರಿಗೆ, ಎಣ್ಣೆಗಾಣಗಳ ಮೇಲಿನ ತೆರಿಗೆ, ಆನೆಯ ಮೇಲಿನ ತೆರಿಗೆ, ಮಗ್ಗದಮೇಲಿನ ತೆರಿಗೆ, ಆಮದು ಮತ್ತು ರಫ್ತು ತೆರಿಗೆಗಳು, ಕಾವಲು ಗಾರರಿಗೆ ಆಹಾರ, ಕಸಸಾಗಾಣೆ ತೆರಿಗೆ ಮತ್ತು ಗೌಡರಿಗೆ ಸಲ್ಲಬೇಕಾದದು. ಕ್ರಿ.ಶ. ೧೫೨೯ ರಲ್ಲಿ ಪುಳ್ಳಿಯೂರ್ ನಾಡಿನಲ್ಲಿ "ತೋಟ್ಟಿಯಂ" ಕೋಮಿನವರು ಪ್ರತಿ ಗ್ರಾಮಕ್ಕೂ ಒಂದು "ಪಣ"ವನ್ನು ಕೊಡಬೇಕಾಗಿದ್ದಿತು.[6] ಇದು ಒಂದು ಕೋಮಿನ ಮೇಲಿನ ತೆರಿಗೆಯಾಗಿದ್ದಿತು. ಸರ್ಕಾರಕ್ಕೆ ಜನರಿಂದ ಸ್ವಪ್ರೇರಣೆಯ ಕೊಡುಗೆಗಳಿಂದ

1 Panchamukhi, R. S. : *Karnatak Inscriptions*, I, No. 53.
2. *EC*, VIII, Tl. 33.
3. *EC*, VII, Sh. 71.
4. *EC*, VI, Kp. 29.
5. *Ibid.*, Kp. 32.
6. *EC*, IX, Ht. 103.

ಆದಾಯ ಬರುತ್ತಿತ್ತು. ಮೇಲೆ ತಿಳಿಸಿದ ಶಾಸನ ವುಳ್ಳಿಯೂರ್‌ನಾಡಿನ ತೋಟ್ಟಗರ ಕೋಮಿನವರು, ಯಾರಾದರೂ ತೆರಿಗೆಯನ್ನು ಕೊಡದಿದ್ದರೆ ಅಂತಹವರನ್ನು "ನಾಡು" ವಿನಿಂದ, ಸಭೆಯಿಂದ ಬಹಿಷ್ಕರಿಸಬೇಕೆಂದು ತಿಳಿಸುತ್ತದೆ. ಇದರಿಂದ ಮತೀಯ ಸಂಸ್ಥೆಗಳು ತಮ್ಮ ಮತೀಯರ ಮೇಲೆ ನಿಯಮಗಳನ್ನು ಮಾಡುವ ಅಧಿಕಾರಹೊಂದಿದ್ದ ತೆಂದು ತ್ರಿಳಿಯಬಹುದು. ಶಾಸನಗಳು ಇತರ ಅನೇಕ ತೆರಿಗೆಗಳನ್ನು ತಿಳಿಸುತ್ತವೆ.

**ಆರಗ ಹದಿನೆಂಟು ಕಂಪಣಗಳ ಸಭೆಗಳು :** ಕರ್ನಾಟಕದಲ್ಲಿ "ಕಂಪಣ" ಎಂಬುದು ಒಂದು ಆಡಳಿತ ವಿಭಾಗವಾಗಿದ್ದಿತು. ಈ ಪದವನ್ನು ಗ್ರಾಮಗಳ ಗುಂಪಿಗೆ ಅಥವಾ ಪುನರ್ವಿಭಾಗಕ್ಕೆ ಬಳಸಲಾಗುತ್ತಿತ್ತು. ಫ್ಲೀಟ್‌ರವರು "ಕಂಪಣ" ಎಂಬುದು ಕನ್ನಡದ "ಕಂಪಳ", "ಕಂಪಿಲು" ಎಂದರೆ, "ಗುಂಪು", "ರಾಶಿ", "ತಂಡ", "ಜನಸಮುದಾಯ" ಇವುಗಳಿಗೆ ಅನ್ವಯವಾಗುತ್ತದೆಂದು ಅಭಿಪ್ರಾಯಹೊಂದಿದ್ದಾರೆ.[1]

"ನಾಡು"ಗಳ ಹಾಗೆ ಕಂಪಣಗಳಲ್ಲಿಯೂ ಪ್ರತಿನಿಧಿ ಸಂಸ್ಥೆಗಳಿದ್ದುವು. "ನಾಡು" ಸಭೆಗಳು ಉತ್ತಮವಾಗಿ ಕೆಲಸಮಾಡುತ್ತಿದ್ದುವು ಮತ್ತು ಶಾಸನಗಳು ಅವುಗಳ ಬಹುಮುಖ ಚಟುವಟಿಕೆಗಳನ್ನು ತಿಳಿಸುತ್ತವೆ. "ನಾಡು" ಸಭೆಯನ್ನು, ನಾವು ಹಿಂದೆ ತಿಳಿಸಿರುವ ಹಾಗೆ, ಸರ್ಕಾರದ ಅಧಿಕಾರಿಯೊಬ್ಬನು ಕರೆಯಬಹುದಾಗಿತ್ತು, ಅಲ್ಲದೆ ಅದು ತಾನಾಗಿಯೇ ಸೇರುತ್ತಿತ್ತು. ಈ ಅಭಿಪ್ರಾಯಗಳನ್ನು ಆರಗ ಹದಿನೆಂಟು ಕಂಪಣಗಳ ಶಾಸನಗಳು ಸ್ಥಿರಪಡಿಸುತ್ತವೆ. ಕ್ರಿ.ಶ. ೧೩೬೩ರಲ್ಲಿ ನಾಗಣ್ಣಮಂತ್ರಿ ಮತ್ತು ಪ್ರಧಾನ ದೇವರಸ ಮುಂತಾದ ಅನೇಕ ಮುಖ್ಯ ಅಧಿಕಾರಿಗಳು, ಇತರ ಅರಸುಗಳು ಮತ್ತು ಜೈನ ಮಲ್ಲಪ್ಪ ಹದಿನೆಂಟು ಕಂಪಣಗಳ ಮತ್ತು ಮೂರು ಪಟ್ಟಣಗಳ ಹಿರಿಯರನ್ನು ಕರೆಯಿಸಿ ಒಂದು ವಿಚಾರಣೆ ಮಾಡಿದರು. ಈ ಶಾಸನ, ಸಭೆ ಸೇರಿದ ಸ್ಥಳವನ್ನು ತಿಳಿಸುತ್ತದೆ. ಅದು ಆರಗ ಚಾವಡಿಯಲ್ಲಿ ಸೇರಿತು.[2] "ನಾಡು" ಸಭೆ ಸ್ವಪ್ರೇರಣೆಯಿಂದ ಸೇರಿದುದಕ್ಕೆ ಅನೇಕ ಶಾಸನಗಳಿವೆ. ಉದಾಹರಣೆಗೆ, ಕ್ರಿ.ಶ. ೧೪೦೭ರಲ್ಲಿ ಆರಗ ಹದಿನೆಂಟು ಕಂಪಣಗಳ "ನಾಡು" ಮತ್ತು ಮೂರು ಪಟ್ಟಣಗಳ ಜನರು ಒಂದು ಒಪ್ಪಂದಕ್ಕೆ ಬಂದರು.[3]

"ನಾಡು" ಸಭೆಯ ಒಂದು ಮುಖ್ಯ ಕರ್ತವ್ಯ ದೇವಸ್ಥಾನಗಳಿಗೆ ಭೂದಾನ ಮತ್ತು ದತ್ತಿಗಳನ್ನು ನೀಡುವುದಾಗಿದ್ದಿತು. ಆರಗ ಶಾಸನಗಳು ಇವನ್ನು ದೃಢೀಕರಿಸುತ್ತವೆ. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು :

(೧) ಕ್ರಿ.ಶ. ೧೩೬೮ರಲ್ಲಿ ಸಿರಸಿ ತಾಲ್ಲೂಕಿನ ಬನವಾಸಿಯ ಒಂದು ಶಾಸನ ಗುತ್ತಿ ಹದಿನೆಂಟು ಕಂಪಣಗಳ ಗೌಡ ಪ್ರಜೆಗಳು ಮಾಡಿದ ಒಂದು ಭೂದಾನವನ್ನು

1. *IA*. IV, p. 211 fn.
2. *EC*, VIII, Tl. 197.
3. *Ibid*., 162.

ದಾಖಲೆ ಮಾಡಿದೆ. ಮಾಧವಾಂಕ ಬನವಾಸಿ-೧೨೦೦೦ವನ್ನು ಆಳುತ್ತಿದ್ದಾಗ ಆತನ ಸೇವಕ ಅಹೋಬಲನಾಥ ಗೋಪಿನಾಥ ದೇವಸ್ಥಾನವನ್ನು ದುರಸ್ತಿಮಾಡಿದನು. ಆತನ ಬೇಡಿಕೆಯ ಮೇಲೆ ಗುತ್ತಿ ಹದಿನೆಂಟು ಕಂಪಣಗಳ ಗೌಡ ಪ್ರಜೆಗಳು ಬನವಾಸಿಯಲ್ಲಿ ಸೇರಿ, ದೇವಸ್ಥಾನಕ್ಕೆ ಭೂದಾನ ಮಾಡಿದರು.[1] ಈ ಶಾಸನದಿಂದ ಕೆಲವು ವಿಷಯಗಳನ್ನು ತಿಳಿದುಕೊಳ್ಳಬಹುದು. ಮೊದಲನೆಯದಾಗಿ, ವಿಜಯನಗರ ಕಾಲದಲ್ಲಿ ಪ್ರತಿನಿಧಿ ಸಭೆ ಅಸ್ತಿತ್ವದಲ್ಲಿದ್ದಿತು. ಎರಡನೆಯದಾಗಿ, ಈ ಶಾಸನ ಆ ಸಭೆಯ ಚಟುವಟಿಕೆಗಳನ್ನು ತಿಳಿಸುತ್ತದೆ. ಮೂರನೆಯದಾಗಿ, ಸಭಾಸದಸ್ಯರು ಕುಳಿತಿದ್ದರೆಂದು ತಿಳಿಸುತ್ತದೆ (ಕೂಟವಾಗಿ ಕುಳ್ಳಿದ್ದು). ಕಡೆಯದಾಗಿ, ಅದು ದೇವಸ್ಥಾನಗಳಿಗೆ ಭೂದಾನ ಮಾಡುತ್ತಿದ್ದಿತು.

(೨) ಕ್ರಿ.ಶ. ೧೩೭೭ರಲ್ಲಿ ಹರಹಳ್ಳಿ ನಾಡಿನ ಎರಡು ಕನ್ನೂರ್ ಅಗ್ರಹಾರಗಳು, ಎಡಿಹಳ್ಳಿ, ಗವಲೂರು ಮತ್ತು ೭೦ ಗ್ರಾಮಗಳ ಸಮಸ್ತ ಬ್ರಾಹ್ಮಣರು ಮತ್ತು "ನಾಡ ಸಮಸ್ತ ಗೌಡ ಪ್ರಭುಗಳು" ಗೌತಮ ಗ್ರಾಮಕ್ಕೆ ಸೇರಿದ ಬತ್ತ ಬೆಳೆಯುವ ಭೂಮಿಯನ್ನು ನರಸಿಂಹ ದೇವರಿಗೆ ದಾನಮಾಡಿದರು. ಆಗ ಮಂತ್ರಿ ಮಾದರಸ ಒಡೆಯ ಮಲೆ ದೇಶದ ಆರಗ, ಗುತ್ತಿ ಮತ್ತು ಇತರ ರಾಜ್ಯಗಳನ್ನು ಆಳುತ್ತಿದ್ದನು.[2]

(೩) ಕ್ರಿ.ಶ. ೧೪೦೪ರಲ್ಲಿ ಆರಗ ವೇಂಠೆಯ "ಹದಿನೆಂಟು ಕಂಪಣದ ಸಮಸ್ತ ನಾಡು, ಮೂರು ಪಟ್ಟಣದ ಸಮಸ್ತ ಹಲರು", ಆರಗದ ಮೂಲಸ್ಥಾನದ ಕಿಲಿನಾಥ ದೇವರ ನೈವೇದ್ಯಕ್ಕೆ ಬೊರಡಿ ಗ್ರಾಮದಲ್ಲಿ ಹನ್ನೆರಡು ಹೊನ್ನುಗಳ ಬೆಲೆಯುಳ್ಳ ಭೂಮಿಯನ್ನು, ಸುಂಕ, ಕರುಕ, ಗ್ರಾಮಗದ್ಯಾಣ, ಪಂಚಕರುಕ ಮುಂತಾದ ತೆರಿಗೆಗಳಿಂದ ಮಾಫಿ ಮಾಡಿ ದಾನ ಮಾಡಿದರು.[3] ಈ ನಿದರ್ಶನದಲ್ಲಿ ಆ ಸಭೆ ತೆರಿಗೆಗಳನ್ನು ರದ್ದುಮಾಡಿತು ಮತ್ತು ಈ ದಾನಗಳನ್ನು ಒಮ್ಮತವಾಗಿ ಮಾಡಿತು.

(೪) ಕ್ರಿ.ಶ. ೧೪೦೬ರಲ್ಲಿ ಆರಗ ಹದಿನೆಂಟು ಕಂಪಣಗಳ ಮುಂದುನಾಡು ನಾಲ್ಕು ಮತ್ತು ನಾಡು ಮೂವತ್ತರ ಸಮಸ್ತ ಗೌಡರು ತಮ್ಮಲ್ಲಿ ಒಪ್ಪಿ ಆರಗದ ಮೂಲಸ್ಥಾನದ ಕಲಿನಾಥ ದೇವರಿಗೆ ಭೂಮಿಯನ್ನು ದಾನಮಾಡಿದರು.[4]

"ನಾಡು" ಸಭೆ ದಾನದ ಉದ್ದೇಶದಿಂದ ಭೂಮಿಯನ್ನು ಕೊಡುತ್ತಿದ್ದಿತು ಮತ್ತು ಮಾರುತ್ತಿದ್ದಿತು. ಕ್ರಿ.ಶ. ೧೩೯೭ರಲ್ಲಿ ಆರಗ ರಾಜ್ಯದ ಸಮಸ್ತ ಬ್ರಾಹ್ಮಣರು ಮತ್ತು ಗೌಡ ಪ್ರಜೆಗಳು, ಮುದುವಂಕನಾಡಿನ ಸಮಸ್ತ ನಾಡು ಜನರು ತಮ್ಮಲ್ಲಿ ಒಪ್ಪಿ ವಿರೂಪಣ್ಣನೆಂಬುವನಿಗೆ ಭೂದಾನ ಮಾಡಿದರು.[5] ಕ್ರಿ.ಶ. ೧೪೦೪ರಲ್ಲಿ ಆರಗ ಹದಿನೆಂಟು ಕಂಪಣಗಳ "ಸಮಸ್ತ ನಾಡ, ಮೂರು ಪಟ್ಟಣದ ಹಲರು" ತಮ್ಮಲ್ಲಿ

---

1. *SII*, XX, No. 230.
2. *EC*, VII, Sk. 35.
3. *EC*, VIII, Tl. 9.
4. *EC*, VIII, Tl. 12.
5. *Ibid.*, VIII,

ಒಪ್ಪಿ ವಿಠಪ್ಪನೆಂಬುವನಿಗೆ ೯೫ " ಹೊನ್ "ಗೆ ಕೌಡ್‌ವಳ್ಳಿ ಗ್ರಾಮವನ್ನು ಮಾರಿದರು.[1] ಕ್ರಿ.ಶ. ೧೪೦೭ರಲ್ಲಿ ಆರಗ ಹದಿನೆಂಟು ಕಂಪಣಗಳ ಮಂದುನಾಡು ಮೂವತ್ತರ ಸಮಸ್ತ ಜನರು ಕಮೋಜನೆಂಬುವನಿಗೆ ಹಲವನಹಳ್ಳಿಯಲ್ಲಿ " ಕೊಡಗಿಯಾಗಿ " ಭೂದಾನ ಮಾಡಿದರು.[2] ಕ್ರಿ.ಶ. ೧೪೧೫ರಲ್ಲಿ ಆರಗ ಹದಿನೆಂಟು ಕಂಪಣಗಳ ನಾಡುಗಳು ಮತ್ತು ಮೂರು ಪಟ್ಟಣದವರು ತಮ್ಮಲ್ಲಿ ಒಪ್ಪಿ ವಿಠಲಣ್ಣನೆಂಬುವನಿಗೆ ಭೂಮಿಯನ್ನು ಕ್ರಯ ಮಾಡಿದರು.[3] ಹೀಗೆ ನಾಡು ಸಭೆಯು ತನ್ನ ಹತೋಟಿಗೆ ಸೇರಿದ ಭೂಮಿಯನ್ನು ಕ್ರಯ ಮಾಡಬಹುದಾಗಿತ್ತು. ಕ್ರಿ.ಶ. ೧೪೨೭ ರಲ್ಲಿ ಆರಗ ವೇಂಠೆಯ ಸಾಂತಳಿಗೆ ನಾಡಿನ ಹೆಗ್ಗಡೆಗಳು ಮತ್ತು " ಸಮಸ್ತ ನಾಡವರು " ಹೆಬ್ಬರದಿಯ ಹರಿಯಕನಾಯಕಿತ್ತಿಗೆ ಆರಾಮವಳ್ಳಿಯಲ್ಲಿ ೮೫ ವರಹಕ್ಕೆ ಮೂವತ್ತು " ಸಲೆಗೆ " ಭೂಮಿಯನ್ನು ಮಾರಿದರು. ಭೂಮಿಯನ್ನು ಕೊಂಡವನು ಅದನ್ನು ಅಮರೇಶ್ವರತೀರ್ಥಶ್ರೀಪಾದರಿಗೆ ಅವರ ಛತ್ರಕ್ಕೆ ದಾನಮಾಡಿದರು.[4]

" ನಾಡು " ಸಭೆಯು ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದುದಲ್ಲದೆ ಅದರ ಸ್ಥಾಪನೆಗೆ ಉತ್ತೇಜನ ಕೊಡುತ್ತಿತ್ತು. ಕ್ರಿ.ಶ. ೧೪೦೩ರಲ್ಲಿ ಆರಗ ರಾಜ್ಯದ ಹದಿನೆಂಟು ಕಂಪಣಗಳ ಮೂರು ಪಟ್ಟಣಗಳ ರೈತರು ಸಮ್ಮತಿಸಿ ವಿಠಲಪ್ಪ ಒಡೆಯರಿಗೆ ೧೫೦ " ಹೊನ್ನು "ಗಳ ಬೆಲೆಯುಳ್ಳ ಭೂಮಿಯನ್ನು ಕೊಟ್ಟರು. ಅದನ್ನು ಬೊಮ್ಮನಪುರವೆಂಬ ಅಗ್ರಹಾರವನ್ನಾಗಿ ಮಾಡಿ ಅದನ್ನು ೫೪ ಪಾಲುಗಳನ್ನಾಗಿ ವಿಂಗಡಿಸಿ ೪ ಪಾಲುಗಳನ್ನು ದೇವಸ್ಥಾನಕ್ಕೂ ಮತ್ತು ೫೦ ಪಾಲುಗಳನ್ನು ಬ್ರಾಹ್ಮಣರಿಗೂ ಕೊಡಲಾಯಿತು.[5] ಕ್ರಿ. ಶ. ೧೪೦೫ರಲ್ಲಿ ಹದಿನೆಂಟು ಕಂಪಣಗಳ " ನಾಡು " ಜನರು, ಮೂರು ಪಟ್ಟಣದವರು ಮತ್ತು ಗ್ರಾಮಗಳ ಒಡೆಯರು, ವೀರಣ್ಣ ಒಡೆಯರಿಗೆ ಮಾಧವ ವಿರೂಪಾಕ್ಷಪುರ ಎಂಬ ಅಗ್ರಹಾರವನ್ನು ಸ್ಥಾಪಿಸಲು ಭೂಮಿಯನ್ನು ಮಾರಿದರು.[6] ಕ್ರಿ.ಶ. ೧೪೦೫ರಲ್ಲಿ ಆರಗ ವೇಂಠೆ ಕಂಪಣದ ಮಂದುನಾಡಿನ ಸಮಸ್ತ ಗೌಡ ಪ್ರಜೆಗಳು ತಮ್ಮಲ್ಲಿ ಒಪ್ಪಿ ಮರಿಭಟ್ಟನೆಂಬುವನಿಗೆ ಭೂಮಿಯನ್ನು ಮಾರಿ ಒಂದು ಶಾಸನ ಮಾಡಿದರು. ಮರಿಭಟ್ಟ ಅದನ್ನು ನರಸಿಂಹಭಾರತಿಪುರ ಎಂಬ ಅಗ್ರಹಾರವನ್ನಾಗಿ ಮಾಡಿದನು.[7] ಕ್ರಿ.ಶ. ೧೪೦೭ರಲ್ಲಿ ತಿಪ್ಪಣ್ಣ-ಐಯ್ಯನೆಂಬುವನು " ನಾಡು " ಜನರ ಸಮ್ಮತಿಯಿಂದ ಮಯಿಸೆ ಗ್ರಾಮದಲ್ಲಿ ೭೦ " ಹೊನ್ " ಬೆಲೆಯುಳ್ಳ ಭೂಮಿಯನ್ನು ಬೊಮ್ಮಣ್ಣ-ಐಯ್ಯನೆಂಬುವನಿಗೆ ಅಗ್ರಹಾರ ಸ್ಥಾಪಿಸಲು ಮಾರಿದರು.[8] ಕ್ರಿ.ಶ. ೧೪೦೭ರಲ್ಲಿ " ನಾಡು " ಸಮಸ್ತ ಜನರು

---

1. *Ibid.*, 133.
2. *Ibid.*, 122.
3. *Ibid*, 217.
4. *EC*, VI, Kp. 27.
5. *EC*, VI, Kp. 53.
6. *EC*, VIII, Tl. 105.
7. *Ibid*, 126.
8. *Ibid*, 190.

ವೈರಾಗ್ಯ ಶಿವಾಚಾರ್ಯ ದೇವಗುರುವಿಗೆ ನೂರು "ಹೊನ್" ಬೆಲೆಯುಳ್ಳ ಭೂಮಿಯನ್ನು ದಕ್ಷಿಣಾಮೂರ್ತಿ–ಶಿವಾಚಾರ್ಯಪುರ ಎಂಬ ಅಗ್ರಹಾರವನ್ನು ಸ್ಥಾಪಿಸಲು ಕೊಟ್ಟರು.[1] ಕಡೆಯದಾಗಿ ಕ್ರಿ.ಶ. ೧೪೦೮ರಲ್ಲಿ ಆರಗ ಹದಿನೆಂಟು ಕಂಪಣಗಳ ಮತ್ತು ಮೂರು ಪಟ್ಟಣಗಳ ಗೌಡ ಪ್ರಜೆಗಳು ಒಪ್ಪಿ ಸುರಲಿ ಗ್ರಾಮವನ್ನು ನಾಗಸಮುದ್ರವೆಂಬ ಅಗ್ರಹಾರವನ್ನಾಗಿ ಮಾಡಿದರು.[2]

"ನಾಡು"ವಿಗೆ ಸಂಬಂಧಿಸಿದ ಮೇಲೆ ತಿಳಿಸಿರುವ ಸಾಕ್ಷ್ಯದಿಂದ ವಿಜಯನಗರ ರಾಜರು, ಸ್ಥಳೀಯ ಸಂಸ್ಥೆಗಳು ಮುಂದುವರಿಯಲು ಅವಕಾಶ ಕೊಟ್ಟರೆಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ. "ನಾಡು"ಗಳಲ್ಲಿ ಸಹಕಾರ ಮನೋಭಾವವನ್ನು ಕಾಣಬಹುದು ಮತ್ತು ಅದರ ಸಂಸ್ಥಾರೂಪ ಪ್ರಶಂಸನೀಯವಾದುದು. "ನಾಡು" ಸಭೆಯ ಚಟುವಟಿಕೆಗಳು ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸಂಸ್ಥೆಗಳು ಕೆಲಸ ಮಾಡುತ್ತಿದ್ದುದಕ್ಕೆ ನಿರ್ಧಾರಯುತ ಸಾಕ್ಷ್ಯವಾಗಿದೆ ಮತ್ತು ಆ ಸಂಸ್ಥೆಗಳು ತಮ್ಮ ವಶಕ್ಕೆ ಒಳಪಟ್ಟವರ ಸಹಕಾರ ಮತ್ತು ಸಂಸ್ಥಾರೂಪ ಅಂತಃಕರಣದಿಂದ ಕೆಲಸ ಮಾಡುತ್ತಿದ್ದುವು. ಸ್ವಯಮಾಧಿಪತ್ಯ ಹೊಂದಿದ್ದ ಪಟ್ಟಣ ಅಥವಾ ನಗರ ಮತ್ತು ಶ್ರೇಣಿಗಳ ವ್ಯವಸ್ಥೆಯನ್ನು ಮುಂದಿನ ಅಧ್ಯಾಯದಲ್ಲಿ ತಿಳಿಯಬಹುದು.

## ಅಧ್ಯಾಯ ೫

# ಪಟ್ಟಣಗಳು ಮತ್ತು ಶ್ರೇಣಿಗಳು

### ಪೀಠಿಕೆ

ಹಳ್ಳಿ ಮತ್ತು ಪಟ್ಟಣದ ವ್ಯತ್ಯಾಸವನ್ನು ಸೂಚಿಸಲು ಉಚಿತ ಪದಪ್ರಯೋಗವನ್ನು ಮಾಡಲಾಗುತ್ತಿದ್ದಿತು. ಹಳ್ಳಿಯನ್ನು ಸೂಚಿಸಲು ಸಾಮಾನ್ಯವಾಗಿ ಗ್ರಾಮ ಎಂಬ ಪದವನ್ನು ಬಳಸಲಾಗುತ್ತಿದ್ದಿತು. ಪುರ, ನಗರ ಮತ್ತು ಪಟ್ಟಣವೆಂಬ ಪದಗಳು ನಗರ ಅಥವಾ ಪಟ್ಟಣವನ್ನು ಸೂಚಿಸುತ್ತಿದ್ದಿತು. ಪಟ್ಟಣದಲ್ಲಿ ಜನಸಂಖ್ಯೆಯು ಹೆಚ್ಚಾಗಿತ್ತು.[3] "ಮಿತಾಕ್ಷರ" ಗ್ರಾಮ, ಕರ್ವಟ ಮತ್ತು ನಗರ ಅಂದರೆ ಒಂದು ಗ್ರಾಮ, ಒಂದು ಸಣ್ಣ ಪಟ್ಟಣ ಮತ್ತು ನಗರವನ್ನು ಗುರುತಿಸುತ್ತದೆ.[4] ವಿಜಯನಗರಕ್ಕೆ ಭೇಟಿ ಇತ್ತ ಪೋರ್ಚುಗೀಸ್ ಪ್ರವಾಸಿಗ ಪೇಸ್, ಗ್ರಾಮಗಳು, ಪಟ್ಟಣಗಳು ಮತ್ತು ನಗರ

---

1. *Ibid.*, 162.
2. *Ibid.*, 222.
3. Madhavacharya: *Parasara-Madhava* (Ed. Chandrakanta Tankalankara, Vols. 1-3. Calcutta, 1890-2), III, p. 266.
4. Vijnanesvara: *The Mitakashra* (J. R. Gharpure, Bombay, 1910), II, V. 167.

ಗಳನ್ನು ಗುರುತಿಸಿದ್ದಾನೆ. ಅವನು, ರಾಜ್ಯವೆಲ್ಲ ನಗರಗಳು ಮತ್ತು ಗ್ರಾಮಗಳಿಂದ ಕೂಡಿನಿಬಿಡ ಜನಸಂಖ್ಯೆ ಹೊಂದಿತ್ತೆಂದು ತಿಳಿಸುತ್ತಾನೆ.[1]

ಒಂದು ನಗರ ಮತ್ತು ಗ್ರಾಮದ ವ್ಯತ್ಯಾಸವನ್ನು ಅವುಗಳ ವಿಸ್ತೀರ್ಣ, ಅನುಕೂಲಗಳು, ವ್ಯಾಪಾರ ಮತ್ತು ಪೌರ ಸ್ಥಳಗಳ ಸಾಮಾನ್ಯ ಆರ್ಥಿಕ ವ್ಯವಸ್ಥೆಯಲ್ಲಿ ಕಾಣಬಹುದು.[2] ಮಧ್ಯಯುಗದ ಪಟ್ಟಣದ ಆರ್ಥಿಕ ಲಕ್ಷಣಗಳನ್ನು ತಿಳಿಯಲು ಇವುಗಳನ್ನು ಒಂದೊಂದನ್ನಾಗಿ ಪರಿಶೀಲಿಸಬಹುದು.

"ಮಿತಾಕ್ಷರ"ದ ಪ್ರಕಾರ ನಗರವು ಗ್ರಾಮಕ್ಕಿಂತ ಎರಡರಷ್ಟು ಮತ್ತು ನಗರ ನಾಲ್ಕರಷ್ಟು ದೊಡ್ಡದಾಗಿತ್ತು.[3] ಕ್ರಿ.ಶ. ೧೪೨೦ ಅಥವಾ ೧೪೨೧ರಲ್ಲಿ ವಿಜಯನಗರಕ್ಕೆ ಭೇಟಿಕೊಟ್ಟ ಇಟಲಿ ದೇಶದ ಪ್ರವಾಸಿಗ ನಿಕೊಲೊ ಕಂಟಿ ವಿಜಯನಗರದ ವಿವರವನ್ನು ತಿಳಿಸುತ್ತಾನೆ. ಅದು ಬಹಳ ಎತ್ತರವಾದ ಬೆಟ್ಟಗಳ ಸನ್ನಿವೇಶದಲ್ಲಿದ್ದಿತು. ನಗರದ ಸುತ್ತಳತೆ ೬೦ ಮೈಲಿಗಳು, ಅದರ ಗೋಡೆಗಳು ಬೆಟ್ಟಗಳವರೆವಿಗೆ ಹೋಗಿದ್ದವು ಮತ್ತು ತಗ್ಗುಪ್ರದೇಶವನ್ನೆಲ್ಲ ಒಳಗೊಂಡಿದ್ದಿತು.[4] ಕ್ರಿ.ಶ. ೧೪೪೩ರಲ್ಲಿ ವಿಜಯನಗರಕ್ಕೆ ಬಂದ ಪರ್ಷಿಯಾ ದೇಶದ ರಾಯಭಾರಿ ಅಬ್ದುಲ್ ರಜಾಕ್, ವಿಜಯನಗರವು ಅದುವರೆವಿಗೆ ಕಣ್ಣಿನಲ್ಲಿ ನೋಡಿಲ್ಲದಂತಹ ನಗರವಾಗಿದ್ದಿತೆಂದು ತಿಳಿಸುತ್ತಾನೆ; ಅಲ್ಲದೆ, ಜನಸಂಖ್ಯೆಯು ಹೆಚ್ಚಾಗಿದ್ದಿತೆಂದು, ಪೇಟೆ ಬೀದಿಗಳು ಉದ್ದವಾಗಿಯೂ ಮತ್ತು ಅಗಲವಾಗಿಯೂ ಇದ್ದುವೆಂದು ತಿಳಿಸುತ್ತಾನೆ.[5]

ಗ್ರಾಮಗಳಿಗಿಂತ ಪಟ್ಟಣಗಳಲ್ಲಿ ಜೀವನ ಸೌಕರ್ಯಗಳು ಹೆಚ್ಚಾಗಿದ್ದುವು. ವಿಜಯನಗರಕ್ಕೆ ಭೇಟಿಕೊಟ್ಟ ಮತ್ತೊಬ್ಬ ಪೋರ್ಚುಗೀಸ್ ಪ್ರಯಾಣಿಕ ನ್ಯೂನಿಜ್ ಹೊಸಪೇಟೆಯ ವಿಚಾರವಾಗಿ ಬರೆದಿದ್ದಾನೆ. ಕೃಷ್ಣದೇವರಾಯನು ಅಲ್ಲಿ ಕಲ್ಲುಕಟ್ಟಡದ ಮನೆಗಳುಳ್ಳ ಬಹಳ ಉದ್ದವಾದ ರಸ್ತೆಯನ್ನು ಮಾಡಿಸಿದ್ದನೆಂದೂ, ಅದರ ಉದ್ದ ೪೭೦೦ ಮತ್ತು ಅಗಲ ೪೦ ಹೆಜ್ಜೆಗಳಿದ್ದುವೆಂದು ತಿಳಿಸುತ್ತಾನೆ. ಅಲ್ಲದೆ ಅದು ನೋಡಲು ಅತ್ಯಂತ ಸುಂದರವಾದ ಬೀದಿಯಾಗಿದ್ದಿತು.[6] ಪೇಸ್ ವಿಜಯನಗರದ ಒಂದು ಬೀದಿಯ ವಿಚಾರ ಬರೆದಿದ್ದಾನೆ. ಅಲ್ಲಿ ಅಗಲವಾದ ಮತ್ತು ಸುಂದರವಾದ ಒಂದು ಬೀದಿ ಇದ್ದಿತೆಂದೂ, ಸಾಲುಸಾಲಾಗಿದ್ದ ಅನೇಕ ಮನೆಗಳು ಮತ್ತು ಬೀದಿಗಳಿದ್ದುವೆಂದು ತಿಳಿಸುತ್ತಾನೆ.[7] ವಿಜಯನಗರಕ್ಕೆ ಹೇರಳವಾದ ನೀರುಸರಬರಾಜಿದ್ದಿತು. ಹಂಪೆಗೆ ನೀರು

---

1. Sewell: *op cit.*, p. 230.
2. Appadorai, A: *Economic Conditions in Southren India* (1000-1500 A.D. Madras, 1936, vols. 1-2), I, p. 345.
3. Vijnanesvara, *op.cit.*, II, V. 167.
4. Sewell, *op.cit.*, p 80.
5. *Ibid.*, pp. 86-88.
6. *Ibid.*, p. 345.
7. *Ibid.*, p. 246.

ಸರಬರಾಜು ತುರುತ್ತು ನಾಲೆ ಮತ್ತು ತುಂಗಭದ್ರ ನದಿಯಿಂದ ಆಗುತ್ತಿದ್ದಿತು.[1] ಅಲ್ಲದೆ, ಪಟ್ಟಣದಲ್ಲಿ ವ್ಯಾಪಾರ ಹೆಚ್ಚಾಗಿರುತ್ತಿತ್ತು. ನಗರ ಮುಖ್ಯವಾಗಿ ಒಂದು ವಾಣಿಜ್ಯ ಸಂಸ್ಥೆಯಾಗಿದ್ದಿತು ಅಥವಾ ವ್ಯಾಪಾರ ಶ್ರೇಣಿಯಾಗಿದ್ದಿತು. "ನಗರ"ವು ವಾಣಿಜ್ಯ ಮತ್ತು ಕೈಗಾರಿಕೆಗಳಿಗೆ ಮೀಸಲಾದ ಒಂದು ಆಡಳಿತ ವಿಭಾಗವಾಗಿದ್ದಿತೆಂದು ಕಾಣುತ್ತದೆ.

## ಪಟ್ಟಣಗಳ ರಚನೆ

ವಿಜಯನಗರ: ವಿಜಯನಗರ ಸಾಮ್ರಾಜ್ಯದಲ್ಲಿ ಪಟ್ಟಣಗಳ ರಚನೆ ಮತ್ತು ಬೆಳವಣಿಗೆಗೆ ಅನೇಕ ಅಂಶಗಳು ಸಹಾಯಕವಾಗಿದ್ದುವು. ಪಟ್ಟಣವು ಅನೇಕ ವೇಳೆ ಒಂದು ದೇವಸ್ಥಾನದ ಸುತ್ತ ಬೆಳೆಯುತ್ತಿದ್ದಿತು. ಪ್ರಸಿದ್ಧ ದೇವಸ್ಥಾನವು ಜನರನ್ನು ಆಕರ್ಷಿಸುತ್ತಿದ್ದಿತು ಮತ್ತು ಯಾತ್ರಾಸ್ಥಳವಾಗುತ್ತಿದ್ದಿತು. ಹೀಗೆ ಒಂದು ಮಠೀಯ ಕೇಂದ್ರ ಅಥವಾ ಯಾತ್ರಾಸ್ಥಳ ಒಂದು ಪಟ್ಟಣವಾಗಿ ಬೆಳೆಯುತ್ತಿತ್ತು. ಶ್ರೀ ವಿರೂಪಾಕ್ಷ ಹಂಪಿ ನಗರದ (ವಿಜಯನಗರದ ಈಚಿನ ನಿವೇಶನ) ಪಾಲಕದೇವರಾಗಿದ್ದಿತು.[2] ವಿಜಯನಗರವು ತುಂಗಭದ್ರ ನದಿಯ ದಡದಲ್ಲಿದ್ದಿತು.[3] ಅಬ್ದುರ್ ರಜಾಕ್ ಪ್ರಕಾರ ವಿಜಯನಗರದಲ್ಲಿ ಆರು ಕೋಟೆಗಳು ಒಂದರೊಳಗೊಂದು ಇದ್ದುವು ಮತ್ತು ರಾಜನ ಅರಮನೆಯು ಕೊನೆಯ ಕೋಟೆಯೊಳಗಿದ್ದಿತು.[4] ಪೇಸ್ ಕೂಡ ನಗರದಲ್ಲಿ ಒಂದರೊಳಗೊಂದು ಬಲವಾದ ಗೋಡೆಗಳಿಂದ ರಕ್ಷಣೆಹೊಂದಿದ್ದಿತೆಂದು ತಿಳಿಸುತ್ತಾನೆ. ಅಲ್ಲದೆ ವಿಜಯನಗರ ರಾಜಧಾನಿಯಾಗಿದ್ದಿತೆಂದು ಮತ್ತು ರಾಜನು ಯಾವಾಗಲೂ ಅಲ್ಲೇ ವಾಸವಾಗಿರುತ್ತಿದ್ದನೆಂದೂ, ನಗರವು ಬೆಟ್ಟಗಳ ನಡುವೆ ಇದ್ದು, ಅವುಗಳಿಂದ ಸುತ್ತುವರಿಯಲ್ಪಟ್ಟದ್ದಿತೆಂದು ತಿಳಿಸುತ್ತಾನೆ.[5] ವಿಜಯನಗರದ ಉತ್ತರಕ್ಕೆ ೩ ಸುಂದರ ಪಗೋಡಗಳಿದ್ದುವೆಂದು ತಿಳಿದುಬರುತ್ತದೆ. ಅದರಲ್ಲೊಂದು ವಿಠ್ಠಲಸ್ವಾಮಿ, ಇನ್ನೊಂದು ವಿರೂಪಾಕ್ಷ ದೇವಸ್ಥಾನ. ವಿರೂಪಾಕ್ಷ ದೇವರಲ್ಲಿ ರಾಜನು ವಿಶೇಷ ಭಕ್ತಿಹೊಂದಿದ್ದನೆಂದು ಮತ್ತು ಅದು ಒಂದು ಯಾತ್ರಾಸ್ಥಳವಾಗಿತ್ತೆಂದು ತಿಳಿಸುತ್ತಾನೆ. ಆ ದೇವಸ್ಥಾನದ ಹಲವು ಭಾಗಗಳು, ವಿಜಯನಗರದ ಹಿಂದಿನ ಕಾಲದಲ್ಲಿ ಕಟ್ಟಸಲ್ಪಟ್ಟಿದ್ದರೂ, ವಿಜಯನಗರ ರಾಜರು ಅದಕ್ಕೆ ಹೊಸ ಭಾಗಗಳನ್ನು ಸೇರಿಸಿದರು. ಕೃಷ್ಣದೇವರಾಯ ತನ್ನ ಪಟ್ಟಾಭಿಷೇಕೋತ್ಸವದ ನೆನಪಿಗಾಗಿ ಮುಖ್ಯ ದೇವಾಲಯದ ಮುಂದೆ ರಂಗಮಟಪವನ್ನು ಕಟ್ಟಿಸಿದನು. ವಿಜಯನಗರ ರಾಜರ ಪಟ್ಟಾಭಿಷೇಕೋತ್ಸವವು ವಿರೂಪಾಕ್ಷ ದೇವಸ್ಥಾನದಲ್ಲಿ ನಡೆಯುತ್ತಿದ್ದಿತು. ಶಾಸನ

---

1. Longhurst A. H.: *Humpi Ruins Described and Illustrated* (Madras, 1917), p. 51.
2. *EI*, III, p. 22, V, 42. 1356 A.D.
3. Elliot: *History of India*, IV, p. 106.
4. Sewell, *op.cit.*, 86–90.
5. *Ibid.*, pp. 235-236.

ವೊಂದು ವೀರಕೃಷ್ಣರಾಯ ಮಹಾರಾಯನು, ತನ್ನ ಪಟ್ಟಾಭಿಷೇಕ ಮಹೋತ್ಸವದ ಶುಭಕಾಲದಲ್ಲಿ ಪವಿತ್ರವಾದ ವಿರೂಪಾಕ್ಷದೇವರಿಗೆ ಪ್ರತಿನಿತ್ಯದ ನೈವೇದ್ಯಕ್ಕೆ ಸಿಂಗ ನಾಯಕನ ಹಳ್ಳಿಯನ್ನು ದಾನಮಾಡಿದನೆಂದು ತಿಳಿಸುತ್ತದೆ.[1] ಆರವೀಡು ವಂಶದವರು ಅಧಿಕಾರಕ್ಕೆ ಬರುವವರೆಗೆ ವಿಜಯನಗರ ರಾಜರು ತಮ್ಮ ದಾನಗಳನ್ನು ಹಂಪೆಯ ಸ್ಥಳ ದೇವರ ಹೆಸರಿನಲ್ಲಿ ಮಾಡುತ್ತಿದ್ದರು ಮತ್ತು ಅವುಗಳು ಕನ್ನಡ ಲಿಪಿಯಲ್ಲಿರುತ್ತಿದ್ದುವು.[2] ಈ ಸಂದರ್ಭದಲ್ಲಿ ವಿಜಯನಗರ ಮತ್ತು ಅದರ ಉಪನಗರಗಳ ವಿವರಣೆ, ವಿಜಯನಗರದ ಬೆಳವಣಿಗೆಯನ್ನು ತಿಳಿಯಲು ಮತ್ತು ಅದರ ವಿವಿಧ ಉಪನಗರಗಳ ಆಡಳಿತವನ್ನು ತಿಳಿಯಲು ಸಹಕಾರಿಯಾಗಿದೆ.[3]

ವಿಜಯನಗರ, ಸಂಪ್ರದಾಯದ ಪ್ರಕಾರ, ಕ್ರಿ.ಶ. ೧೩೩೬ರಲ್ಲಿ ಸ್ಥಾಪಿತವಾಯಿತು. ಕ್ರಿ.ಶ. ೧೫೬೫ರಲ್ಲಿ ನಾಶವಾಗುವ ತನಕ ಇದು ಆ ಕಾಲದ ಅತ್ಯಂತ ಪ್ರಸಿದ್ಧ ನಗರಗಳ ಲ್ಲೊಂದಾಗಿದ್ದಿತು. ನಗರವು ಉತ್ತರದಲ್ಲಿ ಆನೆಗೊಂದಿಯಿಂದ ದಕ್ಷಿಣದಲ್ಲಿ ಹೊಸ ಪೇಟೆಯವರೆವಿಗೆ, ಪಶ್ಚಿಮದಲ್ಲಿ ಹಂಪಿಯಿಂದ ಪೂರ್ವದಲ್ಲಿ ಕಮಲಾಪುರದವರೆವಿಗೆ ಹಬ್ಬಿತ್ತು. ಈ ಪ್ರದೇಶದಲ್ಲಿ ಅದರ ಉಪನಗರಗಳಿದ್ದುವು. ಪ್ರತಿಯೊಂದು ಉಪನಗರವೂ ಒಂದು ಮುಖ್ಯ ದೇವಸ್ಥಾನ, ದೇವಸ್ಥಾನದ ಮುಂದೆ ಪೇಟೆಬೀದಿಯನ್ನು ಹೊಂದಿ ಸ್ವಯಂಪೂರ್ಣವಾದುದಾಗಿತ್ತು. ವಿರೂಪಾಕ್ಷ ದೇವಾಲಯದ ಸಮೀಪದಲ್ಲಿ ಹಂಪಿ ಅಥವಾ ಪಂಪಾನಗರವಿದ್ದು, ಅದರ ಮುಂದೆ ಪೇಟೆ ಬೀದಿ ಇದ್ದಿತು. ಅಚ್ಯುತರಾಯ ಕಟ್ಟಿದ ಅಚ್ಯುತಪುರದಲ್ಲಿ ಅಚ್ಯುತರಾಯ ದೇವಸ್ಥಾನವಿದ್ದಿತು. ದೇವಸ್ಥಾನದ ಸಮೀಪದಲ್ಲಿದ್ದ ಪೇಟೆಬೀದಿಯನ್ನು ಶಾಸನಗಳಲ್ಲಿ ಅಚ್ಯುತರಾಯಪೇಟೆ ಎಂದು ಕರೆಯ ಲಾಗಿದೆ.[4] ಅದರ ಗಡಿಗಳು ಹೀಗಿದ್ದುವು: ಪಶ್ಚಿಮದಲ್ಲಿ ಮಾತಂಗ ಪರ್ವತ, ಪೂರ್ವದಲ್ಲಿ ತಿಪರಾಜ ಕೋಟೆ, ಉತ್ತರದಲ್ಲಿ ಸೀತಾಕುಂಡ (ತುಂಗಭದ್ರ ನದಿಯ ಒಂದು ಭಾಗ) ಮತ್ತು ದಕ್ಷಿಣದಲ್ಲಿ ಭೂಪತಿಕೆರೆ. ಕೃಷ್ಣದೇವರಾಯನ ಮಗ ತಿರುಮಲನ ಹೆಸರಿನಲ್ಲಿ ತಿರುಮಲಾಪುರವೆಂಬ ಉಪನಗರವಿದ್ದು, ಅಲ್ಲಿ ಸೊಗಸಾದ ವಿಠಲ ದೇವಾಲಯವಿದ್ದಿತು.[5]

ವಿಜಯನಗರದ ಮತ್ತೊಂದು ಉಪನಗರವಾಗಿದ್ದ ಕೃಷ್ಣಾಪುರದ ವಿಚಾರವಾಗಿ ಪೇಸ್ ಬರೆದಿದ್ದಾನೆ.[6] ಕ್ರಿ.ಶ. ೧೫೩೩ರ ಒಂದು ಶಾಸನವು ಕೃಷ್ಣಾಪುರದ ಪೇಟೆಯ

1. *EI*, I, pp. 363 and 373; 29 of 1889.
2. *EI*, XIV, pp. 240, 322.
3. Dikshit, G. S.: *Social and Economic Life*, Ch. XII, in *Karnataka Through the Ages* (Pub. Government of Mysore, 1968).
4. *SII*, IX (ii), No. 564.
5. Rangacharya V.: *Inscriptions of the Madras Presidency*, I Vol., Bellary, No. 327.
6. Sewell: *op.cit.*, p. 278.

ಧಾನ್ಯಗಳ ಅಂಗಡಿಗಳನ್ನು ಸೂಚಿಸುತ್ತದೆ.[1] ಕ್ರಿ.ಶ. ೧೫೪೫ರ ಮತ್ತೊಂದು ಶಾಸನವು ಕೃಷ್ಣಾಪುರಪೇಟೆಗೆ ಸಂಬಂಧಿಸಿದುದು.[2] ಈ ಉಪನಗರಕ್ಕೆ ಕೃಷ್ಣದೇವಾಲಯ ಕೇಂದ್ರವಾಗಿದ್ದು ಹಿರಿಯ ನಾಲೆಯಿಂದ ನೀರು ಸರಬರಾಜಾಗುತ್ತಿತ್ತು. ಈಗಿನ ಹೊಸಪೇಟೆಯಲ್ಲಿ ಕೃಷ್ಣದೇವರಾಯ ಕಟ್ಟಿದ ಎರಡು ಉಪನಗರಗಳಿವೆ. ಒಂದು, ತನ್ನ ಪತ್ನಿಯ ಗೌರವಾರ್ಥವಾಗಿ ಕಟ್ಟಿದ ತಿರುಮಲದೇವಿಯರ ಪಟ್ಟಣ[3] ಮತ್ತು ಮತ್ತೊಂದು ತನ್ನ ತಾಯಿಯನ್ನು ಗೌರವಿಸಲು ಕಟ್ಟಿದ ನಾಗಲಾಪುರ. ಪೇಸ್ ಈ ವಿಚಾರವನ್ನು ಬರೆಯುತ್ತಾ ದಕ್ಷಿಣದ ವೈದಾನಪ್ರದೇಶದಲ್ಲಿ ನಾಗಲಾಪುರವೆಂಬ ನಗರವಿತ್ತೆಂದು ತಿಳಿಸುತ್ತಾನೆ.[4] ಮತ್ತೊಬ್ಬ ಪೋರ್ಚುಗೀಸ್ ಪ್ರವಾಸಿ ನ್ಯೂನಿಜ್ ಕೃಷ್ಣದೇವರಾಯನು ನಾಗಲಾಪುರ ಪಟ್ಟಣವನ್ನು ಕಟ್ಟಿಸಿದನೆಂದೂ, ಅದರ ಸುತ್ತ ರಾಜ್ಯದಲ್ಲಿ ಅತ್ಯಂತ ಉತ್ತಮ ರಚನೆಯ ಒಂದು ಹೊಸಗೋಡೆಯನ್ನು ಕಟ್ಟಿದನೆಂತಲೂ, ಅಲ್ಲಿ ಕಲ್ಲುಕಟ್ಟಡಗಳ ಮನೆಗಳನ್ನೊಳಗೊಂಡ ಒಂದು ಉದ್ದವಾದ ರಸ್ತೆಯನ್ನು ಕಟ್ಟಿಸಿದನೆಂದೂ ತಿಳಿಸುತ್ತಾನೆ. ಈ ಪಟ್ಟಣದಲ್ಲಿ ಜನರನ್ನು ನೆಲಸುವಂತೆ ಮಾಡಲು ತನ್ನ ರಾಜ್ಯದ "ನಾಯಕರಿ"ಗೆಲ್ಲ ಅಲ್ಲಿ ಅರಮನೆಗಳನ್ನು ಕಟ್ಟಿಸಬೇಕೆಂದು ಆಜ್ಞೆಮಾಡಲು ಅವರು ಕಟ್ಟಿಸಿದರು. ಈ ಪಟ್ಟಣದಲ್ಲಿ ೪೨೦೦ ಹೆಜ್ಜೆಗಳ ಉದ್ದವಿದ್ದ, ನೋಡಲು ಅತ್ಯಂತ ಸುಂದರವಾದ ಒಂದು ಮುಖ್ಯ ಬೀದಿ ಇದ್ದಿತು. ವೆಚ್ಚವನ್ನು ಲೆಕ್ಕಿಸದೆ ಈ ಪಟ್ಟಣವನ್ನು ಕಟ್ಟಿಸಿದನೆಂದು ತಿಳಿಸುತ್ತಾನೆ.[5] ಕಮಲಾಪುರದಲ್ಲಿ ಅಚ್ಯುತರಾಯನು ತನ್ನ ಪತ್ನಿ ವರದಾದೇವಿಯ ಗೌರವಾರ್ಥವಾಗಿ ಕಟ್ಟಿಸಿದ ವರದರಾಜಮ್ಮನ ಪಟ್ಟಣವಿದ್ದಿತು.[6]

ತಿರುವೇಂಗಳನಾಥ ದೇವಸ್ಥಾನವನ್ನು ಒಳಗೊಂಡಿದ್ದ ಅಂಜನಗಿರಿ ಎಂಬ ಭಾಗವಿದ್ದಿತು. ಅದರ ಗಡಿಗಳು ಹೀಗಿದ್ದುವು: ಪೂರ್ವಕ್ಕೆ ಹಿರಿಯ ಕುಂಬಾರಕೇರಿ, ಉತ್ತರಕ್ಕೆ ಅಕ್ಕಿಪೇಟೆ, ಪಶ್ಚಿಮಕ್ಕೆ ಮಿನವನ ಗುಡಿ ಮತ್ತು ದಕ್ಷಿಣಕ್ಕೆ ಕೋಟೆ.[7] ಹಜಾರರಾಮ ದೇವಸ್ಥಾನದ ಸಮೀಪದಲ್ಲಿ, ರಾಮಪುರವೆಂಬ ಉಪನಗರವಿದ್ದಿತು.[8] ಆ ನಗರಕ್ಕೆ ಪ್ರವೇಶ ಪೂರ್ವದಲ್ಲಿ ಕಂಪಿಲಿ ಕಡೆಯಿಂದ ಇದ್ದಿತು. ಕಂಪಿಲಿ ರಾಜಧಾನಿಗೆ ಉಕ್ಕಡದ ಹಾಗಿದ್ದಿತು.[9] ಅದರ ಒಂದು ಭಾಗವನ್ನು ವಿಜಯವಿರೂಪಪುರವೆಂದು

---

1. *SII*, IV, No. 262.
2. *Ibid.*, No. 265.
3. *Ibid.*, No. 263.
4. *Ibid.*, p. 278.
5 *Ibid.*, p. 345.
6. *SII*, IX (ii), No. 595. *Ibid.*, No. 573.
7. *Ibid.*, No. 510.
8. Rangacharya: *Inscriptions of the Madras Presidency*, I Bellary, No. 369.
9. Dikshit: *Social and Economic Life, Karnataka Through the Ages*, p. 602.

ಕರೆಯುತ್ತಿದ್ದರು.[1] ಈ ನಾನಾ ಉಪನಗರಗಳ ಆಡಳಿತವು "ಸೆಟ್ಟಿಪಟ್ಟಣಸ್ವಾಮಿ" ಗಳೆಂದು ಕರೆಯಲ್ಪಡುತ್ತಿದ್ದ ಪೌರಸಭಾಧಿಕಾರಿಗಳ ಕೈಲಿದ್ದಿತೆಂದು ಶಾಸನಗಳ ಸಾಕ್ಷ್ಯವಿದೆ. ಕ್ರಿ.ಶ. ೧೫೩೮ರ ಹೊಸಪೇಟೆಯ ಒಂದು ಶಾಸನವು ತಿರುಮಲದೇವಿಯರ ಪಟ್ಟಣ ವರದರಾಜಮ್ಮನ ಪಟ್ಟಣ ಮತ್ತು ಕೃಷ್ಣಾಪುರದ "ಸೆಟ್ಟಿಪಟ್ಟಣ" ಸ್ವಾಮಿಗಳನ್ನು ಸೂಚಿಸುತ್ತದೆ.[2]

ಶ್ರೀಗಿರಿಸಮುದ್ರ : ಕ್ರಿ.ಶ. ೧೩೭೦ರ ಮಾಗಡಿಯ ಒಂದು ಶಾಸನದ ಪ್ರಕಾರ ಶ್ರೀಗಿರಿದೇವ ಒಡೆಯರ ಆಜ್ಞೆಯ ಮೇಲೆ ವೀರಪ್ಪನೆಂಬುವನು ಶಿವಗಂಗ ದೇವರ ಗೌರವಾರ್ಥವಾಗಿ ಶ್ರೀಗಿರಿಸಮುದ್ರವೆಂಬ ಪಟ್ಟಣವನ್ನು ಕಟ್ಟಿಸಿದನು.[3] ಈ ನಿದರ್ಶನದಲ್ಲಿ ರಾಜನ ಒಬ್ಬ ಅಧಿಕಾರಿಯು ಒಂದು ಮಠೀಯ ಕೇಂದ್ರದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಲು ಕಾರಣನಾದನು.

ಬೊಮ್ಮನಹಳ್ಳಿ : ಕ್ರಿ.ಶ. ೧೪೪೪ರ ಗುಂಡ್ಲುಪೇಟೆಯ ಒಂದು ಶಾಸನವು, ದೇವರಾಯ ಬೊಮ್ಮನಹಳ್ಳಿ ಎಂಬ ಹೊಸ ಪಟ್ಟಣವನ್ನು ನಿರ್ಮಿಸಿ ಅದನ್ನು ತ್ರಿಯಂಬಕ ದೇವರ ಸೇವೆಗೆ ತೆರಿಗೆ ಮಾಫಿ ಮಾಡಿದನೆಂದು ತಿಳಿಸುತ್ತದೆ. ಈ ಹೊಸ ಪಟ್ಟಣದ ಗಡಿಗಳನ್ನು ಲಿಂಗಚಿಹ್ನೆಯುಳ್ಳ ಕಲ್ಲುಗಳಿಂದ ಗುರುತು ಮಾಡಲಾಯಿತು. ಒಂದು ಕೆರೆಯನ್ನು ನಿರ್ಮಿಸಿ ಆ ಪ್ರದೇಶದಲ್ಲಿ ಅಡಕೆ ಮರಗಳನ್ನು ನೆಟ್ಟು, ಆ ಪಟ್ಟಣವನ್ನು ೧೨ "ಗದ್ಯಾಣ"ಗಳಿಗೆ ಬಾಡಿಗೆಗೆ ಕೊಡಲಾಯಿತು.[4] ಹೀಗೆ ಹಳೆಯ ಪಟ್ಟಣಗಳು ಹೊಸ ಪಟ್ಟಣಗಳಿಗೆ ಅವಕಾಶ ಮಾಡಿಕೊಟ್ಟವು.

ಅನೇಕವೇಳೆ ಪಟ್ಟಣವನ್ನು ಸ್ಥಾಪಿಸಲು ಮುಖಂಡತ್ವವನ್ನು ವಹಿಸಿಕೊಂಡವರಿಗೆ ಪ್ರೋತ್ಸಾಹ ಕೊಡಲಾಗುತ್ತಿತ್ತು. ಮಂಡ್ಯ ಜಿಲ್ಲೆಯ ತಿಗಡಹಳ್ಳಿಯ ಒಂದು ಶಾಸನವು[5] ತಲಕಾಡಿನ ಸ್ಥಾನಪತಿ ನಾಗಪಂಡಿತನ ಮಗ ಮಲ್ಲಪ್ಪ ಮಾರಭಕ್ತ ಮತ್ತು ಇತರ ಹಲವರಿಗೆ, ಪ್ರತಿಯೊಬ್ಬರ ಪಾಲನ್ನು ನಿರ್ಧರಿಸಿ ಒಂದು ಗ್ರಾಮವನ್ನು "ಪುರ" ವಾಗಿ ದಾನಮಾಡಿದನು. ದಾನ ಪಡೆದವರು ಕ್ರಿ.ಶ. ೧೩೫೯ರ ವರೆಗೆ ಅಲ್ಪಹಣವನ್ನು ಕೊಡಬೇಕಾಗಿದ್ದಿತು. ಇದನ್ನು ಕ್ರಿ.ಶ. ೧೩೫೯ ರಿಂದ ಕ್ರಿ.ಶ. ೧೩೬೨ರ ವರೆಗೆ ಸ್ವಲ್ಪ ಹೆಚ್ಚಿನ ಹಣವನ್ನು, ಅನಂತರ ನಿಗದಿಯಾದ ಮೊತ್ತವನ್ನು ಕೊಡಬೇಕೆಂದು ತೀರ್ಮಾನಿಸಲಾಯಿತು.

ತಿರುಮಲಾಪುರಿ : ಅನೇಕವೇಳೆ ಒಬ್ಬ ವ್ಯಕ್ತಿಯು ಗ್ರಾಮದ ಸಹಾಯದಿಂದ ಹೊಸ ಪಟ್ಟಣವನ್ನು ಸ್ಥಾಪಿಸುತ್ತಿದ್ದನು. ಕ್ರಿ.ಶ. ೧೩೭೭ರ ಪಾವಗಡದ ಒಂದು

---

1. *SII*, IX (ii), No. 530.
2. *Ibid.*, No. 573.
3. *EC*, IX, Ma. 49.
4. *EC*, IV, Gu. 2.
5. *MAR*, 1920, p. 35.

ಶಾಸನವು, ರಾಜುದೇವಗೌಡ ಮತ್ತು ಇತರರು ೭೦೦ ಕೆಲಸಗಾರರ ಸಹಾಯದಿಂದ ತಿರುಮಲಾಪುರಿ, ಅಂಭೋಜಪಟ್ಟಣ ಮತ್ತು ರಾಜುಗಿರಿಪಟ್ಟಣ ಎಂಬ ಮೂರು ಪಟ್ಟಣಗಳನ್ನು ಸ್ಥಾಪಿಸಿದರು. ಆ ಮೂರು ಪಟ್ಟಣಗಳನ್ನು ಸ್ಥಾಪಿಸಲು ೮೭೦ ಲಕ್ಷ್ಮೀಪತಿ ವರಹ, ೨೦೦೦ ಸಬ್ಬರಲಿಗ ವರಹ ಮತ್ತು ೧೫೦ ಪುತಳಿಕಾಸು ವೆಚ್ಚ ವಾಯಿತು. ರಾಜುದೇವಗೌಡ ಆ ಪಟ್ಟಣವನ್ನು ಕಟ್ಟಿದ ಕೆಲಸಗಾರರ ಮುಖಂಡರಿಗೆ " ನಿಲುವದೋಪು ", ಬಂಗಾರದ ಕಡವೆಗಳು ಮತ್ತು ೫ ಜೋಡಿ ಶಾಲುಗಳನ್ನು ಕೊಟ್ಟು ಗೌರವಿಸಿದನು.[1] ಹೀಗೆ ಈ ಶಾಸನವು ಮೂರು ಪಟ್ಟಣಗಳನ್ನು ಕಟ್ಟಲು ವೆಚ್ಚವಾದ ಮೊಬಲಗನ್ನು ತಿಳಿಸುವುದಲ್ಲದೆ, ಅವನ್ನು ಕಟ್ಟಲು ಮೇಲ್ವಿಚಾರಣೆ ನಡೆಸಿದವನಿಗೆ ಪ್ರಚೋದನೆ ಕೊಟ್ಟುದನ್ನು ತಿಳಿಸುತ್ತದೆ.

**ಕೃಷ್ಣಪುರ :** ಕ್ರಿ.ಶ. ೧೫೫೪ರ ಹೊಳಲ್ಕೆರೆಯ ಒಂದು ಶಾಸನವು[2] ಹೊಸ ಪಟ್ಟಣಗಳನ್ನು ಕಟ್ಟುವುದಕ್ಕೆ ನೆರವಾಗಲು ಮತ್ತು ಅವುಗಳ ಕ್ಷಿಪ್ರಬೆಳವಣಿಗೆಗೆ ಅಲ್ಲಿ ಹೊಸದಾಗಿ ನೆಲಸಿದವರಿಗೆ ಹಕ್ಕುಗಳನ್ನು ನೀಡಲಾಗುತ್ತಿದ್ದಿತೆಂದು ತಿಳಿಸುತ್ತದೆ. ಈ ನಿದರ್ಶನದಲ್ಲಿ, ಹೊರಗಿನ ಪೇಟೆಯು ನಾಶವಾಗಿರಲು ಸುಂಕದ ಇಲಾಖೆಯ ನರಸಿಂಹಯ್ಯ ವಿಠಣ್ಣನಾಯಕನಿಗೆ ಅರ್ಜಿಹಾಕಲು, ಅವನು ಲಿಂಗಣಗೌಡ ಮತ್ತು ಸಮಸ್ತ ಪ್ರಜೆಗಳನ್ನು ಕರೆಸಿ, ಇರ ಕೃಷ್ಣಪ್ಪನಾಯಕನ ಹೆಸರಿನಲ್ಲಿ ಕೃಷ್ಣಾಪುರವೆಂಬ ಹೆಸರಿನಲ್ಲಿ ಆ ಪೇಟೆಯನ್ನು ಪುನಃ ಕಟ್ಟಿ ವಲಸೆಮಾಡಲು ನಿರ್ದೇಶನ ಕೊಟ್ಟನು. ಅಲ್ಲಿ ನೆಲಸಿದವರು ಒಂದುವರ್ಷ ಎಲ್ಲ ಕಂದಾಯಗಳ ಮಾಫಿ ಹೊಂದಿರುವರೆಂದು ತಿಳಿಸಿರುವನು.

**ಪಟ್ಟಣಗಳ ಬೆಳವಣಿಗೆಗೆ ನದಿಯ ಸಾಮೀಪ್ಯ ಒಂದು ಅಂಶ :** ಪಟ್ಟಣಗಳು ದೇಶದ ಒಳವ್ಯಾಪಾರದ ಕೇಂದ್ರಗಳಾಗಿದ್ದುವು ಮತ್ತು ನದಿಗಳು ಸರಕುಗಳನ್ನು ಒಳ ಭಾಗದಿಂದ ರೇವುಪಟ್ಟಣಗಳಿಗೆ ಸಾಗಿಸಲು ಅನುಕೂಲವಾಗಿದ್ದಿತು. ಆನೆಗೊಂದಿಯು ನದಿಯ ದಡದ ಮೇಲಿದ್ದಿತು. ಪೇಸ್ ಪ್ರಕಾರ ಆನೆಗೊಂದಿಯಲ್ಲಿ ರಾಜನು ಒಬ್ಬ ಸೇನಾ ನಾಯಕನನ್ನೂ ಇಟ್ಟಿದ್ದನು. ಬುಟ್ಟಿಗಳಂತೆ ದುಂಡಾಗಿದ್ದ ದೋಣಿಗಳಲ್ಲಿ ಜನರು ಬರುತ್ತಿದ್ದರು. ಒಳಗಡೆ ದೋಣಿಗಳು, ಬೊಂಬುಗಳಿಂದ ಮಾಡಲ್ಪಟ್ಟು ಹೊರಗಡೆ ಚರ್ಮದಿಂದ ಮುಚ್ಚಲಾಗಿತ್ತು. ಅದರಲ್ಲಿ ೧೫ ಅಥವಾ ೨೦ ಜನಗಳಿಗೆ ಸ್ಥಳಾವಕಾಶ ವಿತ್ತು. ಆವಶ್ಯಕವಿದ್ದಾಗ ಇವುಗಳಲ್ಲಿ ಕುದುರೆಗಳನ್ನು ಮತ್ತು ಎತ್ತುಗಳನ್ನು ಸಾಗಿಸ ಬಹುದಾಗಿತ್ತು. ಆದರೆ ಈ ಪ್ರಾಣಿಗಳು ಬಹುಪಾಲು ಈಜಿಕೊಂಡು ಹೋಗುತ್ತಿದ್ದವು.[3] ಹೀಗೆ ಕೆಲವು ಪಟ್ಟಣಗಳ ಬೆಳವಣಿಗೆಗೆ ವಾಣಿಜ್ಯವು ಕಾರಣವಾಗಿತ್ತು.

**ಅನಂತಪುರ ಮತ್ತು ಪೆರಿಯುರಾಜ ಪಟ್ಟಣ :** ಅನೇಕ ವೇಳೆ ರಾಜರ ಮತ್ತು ಮಂತ್ರಿಗಳ ಹೆಸರುಗಳನ್ನು ಪಟ್ಟಣಗಳಿಗೆ ಇಡಲಾಗುತ್ತಿತ್ತು. ಉದಾಹರಣೆಗೆ, ಅನಂತ

---

1. *EC*, XII, Pg. 18.
2. *EC*, XI, Hk. 112.
3. Sewell, *op.cit.*, p. 250.

ಪುರ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದವರ ಮಂತ್ರಿ ಅನಂತರಸನ ಹೆಸರಿನಿಂದ ಬಂದಿದೆ.[1] ಕ್ರಿ.ಶ. ೧೪೬೮ರ ಚಾಮರಾಜನಗರದ ಒಂದು ಶಾಸನವು, ಮಹಾಮಂಡಲೇಶ್ವರ ವೀರಪಾರ್ವತಿರಾಯ ಒಡೆಯರು ಒಂದು ಪಾಳೆಯವನ್ನು ಒಬ್ಬನಿಗೆ ದಾನಮಾಡಿದನು. ಅವನು ಚಂದವಾಡಿಯಲ್ಲಿ ಪಾರ್ವತಿರಾಯ ಒಡೆಯರ ಹೆಸರಿನಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದನು.[2] ಕ್ರಿ.ಶ. ೧೪೪೯ರ ಹುಣಸೂರಿನ ಒಂದು ಶಾಸನವು ಮಹಾಮಂಡಲೇಶ್ವರ ಕುಲೋತ್ತುಂಗ ಚಂಗಲ್ವ ಪಿರಿಯ ರಾಜಯ್ಯದೇವ ಒಂದು ಪಟ್ಟಣವನ್ನು ಕಟ್ಟಲು ಕಾರಣನಾಗಿ ಅದಕ್ಕೆ ಪಿರಿಯರಾಜಪಟ್ಟಣ ಎಂಬ ಹೆಸರನ್ನು ಕೊಟ್ಟನು.[3]

**ಸಂತೆಗಳು :** ಸಂತೆಗಳ ಸ್ಥಾಪನೆ ಪಟ್ಟಣಗಳ ಬೆಳವಣಿಗೆಗೆ ಕಾರಣವಾಯಿತು. ಮಾರುವವರು ಮತ್ತು ಕೊಳ್ಳುವವರು ಒಂದು ಗೊತ್ತಾದ ಸ್ಥಳದಲ್ಲಿ ಗೊತ್ತಾದ ವೇಳೆಯಲ್ಲಿ ಸೇರುವುದಕ್ಕೆ ಸಂತೆ ಎನ್ನಬಹುದು. ಹೀಗೆ ಸಂತೆ ಒಂದು ಮುಖ್ಯ ವ್ಯಾಪಾರ ಕೇಂದ್ರವಾಗಿದ್ದಿತು. ಸಂತೆ ನಡೆಯುತ್ತಿದ್ದ ಪಟ್ಟಣಗಳಲ್ಲಿ ವ್ಯಾಪಾರಿಗಗಳಿಗೆ ಮತ್ತು ಇತರ ಸಂದರ್ಶಕರಿಗೆ ಒಳ್ಳೆಯ ರಸ್ತೆಗಳು ಮತ್ತು ವಿಶೇಷವಾದ ನೀರು ಮುಂತಾದ ಅನುಕೂಲಗಳನ್ನು ಒದಗಿಸಲಾಗುತ್ತಿತ್ತು. ಸ್ಥಳೀಯ ವರ್ತಕರು ಮತ್ತು ಅವರ ಅಧ್ಯಕ್ಷ ಸಂತೆಯನ್ನು ನಡೆಸುತ್ತಿದ್ದರು. ಅಧ್ಯಕ್ಷನು ಪೌರಸಭಾಧ್ಯಕ್ಷನೂ ಆಗಿದ್ದನು. ಸಂತೆಗೆ ತಗಲುವ ವೆಚ್ಚವನ್ನು, ದಾಸ್ತಾನುಗಳನ್ನು ಮಾರಿದಾಗ ಅಥವಾ ಕೊಂಡಾಗ ವಸೂಲು ಮಾಡುತ್ತಿದ್ದ ಸುಂಕಗಳಿಂದ ನಡಸಲಾಗುತ್ತಿತ್ತು. ಈ ಸುಂಕವನ್ನು ನಗದು ಅಥವಾ ಸರಕುಗಳ ರೂಪದಿಂದ ವಸೂಲು ಮಾಡಲಾಗುತ್ತಿದ್ದಿತು. ಸಂತೆಯನ್ನು ನಡೆಸುವುದಕ್ಕೆ ರೈತರು ಮತ್ತು ವರ್ತಕರು ಒಂದಾಗಿ ಅಧ್ಯಕ್ಷನಿಗೆ ಭೂಮಿ ಮತ್ತು ಹಲವು ತೆರಿಗೆಗಳನ್ನು ಕೊಡುತ್ತಿದ್ದರು. ಅನೇಕ ವೇಳೆ ಸಂತೆಯನ್ನು ಸ್ಥಾಪಿಸಲು ಶ್ರೇಣಿಯ ಅಧ್ಯಕ್ಷನಿಗೆ ಭೂಮಿಯನ್ನು ಕೊಡಲಾಗುತ್ತಿತ್ತು. ಸಂತೆ ನಡೆಯುವ ಸ್ಥಳವನ್ನು ಪೇಟೆ, ಸಂತೆ ಅಥವಾ ಸಂತೇಪೇಟೆ ಎಂದು ಕರೆಯುತ್ತಿದ್ದರು. ನಾಡುಗೌಡ ಅಥವಾ ಮಹಾ ಮಂಡಲೇಶ್ವರ ಅಥವಾ ಒಬ್ಬ ಮಂತ್ರಿಯ ಆಜ್ಞೆಯ ಮೇರೆಗೆ ಸಂತೆಗಳನ್ನು ಪ್ರಾರಂಭಿಸ ಲಾಗುತ್ತಿತ್ತು ಅಥವಾ ಊರ್ಜಿತಗೊಳಿಸಲಾಗುತ್ತಿತ್ತು.

ಈ ಕೆಳಗೆ ಕೊಟ್ಟಿರುವ ಶಾಸನಗಳು ಸಂತೆಗಳು ಸ್ಥಾಪಿತವಾಗುತ್ತಿದ್ದ ಬಗೆಯನ್ನು ತಿಳಿಸುತ್ತವೆ—(೧) ಕ್ರಿ.ಶ. ೧೫೬೨ರಲ್ಲಿ ಕೈವಾರನಾಡಿನ ಸಮಸ್ತ ಗೌಡ ಪ್ರಜೆಗಳು, ಪೆಕ್ಕುಂದ್ರದ ಸಮಸ್ತ ನಾನಾ ದೇಶಿಗಳು ಮತ್ತು ಹದಿನೆಂಟು ಜಾತಿಯವರು ಕೈವಾರದಲ್ಲಿ ಒಂದು ಸಂತೆಯನ್ನು ಸ್ಥಾಪಿಸಿ, ಪೆರಿಯನಾಯನ ಎಂಬುವನನ್ನು " ಪಟ್ಟಣಸ್ವಾಮಿ"ಯಾಗಿ ನೇಮಿಸಿದರು.[4] ಈ ನಿದರ್ಶನದಲ್ಲಿ ಒಂದು ದೊಡ್ಡ ಸಭೆಯು ಸಂತೆಯನ್ನು ಸ್ಥಾಪಿಸಿತು.

---

1. *ARSIE*, 1925-26, part II, para 37 ; 350 of 1926.
2. *EC*, IV, Ch. 105.
3. *EC*, IV, Hs. 15.
4. *EC*, X, Ct. 95.

(೨) ಕ್ರಿ.ಶ. ೧೩೭೮ರಲ್ಲಿ ಸಾದಳಿನಾಡಿನ ಗೌಡರು, ಸಾದಳಿನಾಡಿನ ರಾಮೇಶ್ವರ ಗ್ರಾಮದಲ್ಲಿ ಒಂದು ಸಂತೆಯನ್ನು ಸ್ಥಾಪಿಸಿದರು. ಸೆರೆಯ ಐವರು ಸೆಟ್ಟಿಗಳು ಮತ್ತು "ಸಾಲುಮೂಲೆಯ" ಸಮಸ್ತ ಹಿರಿಯರು ಹಲವು ನಿಯಮಗಳನ್ನು ಮಾಡಿದರು. ಸಂತೆಗೆ ಬಂದ ಸಗಟು ಧಾನ್ಯಗಳ ಮೇಲೆ ಒಂದು ವರ್ಷ ಯಾವ ತೆರಿಗೆಗಳನ್ನೂ ವಿಧಿಸುವಂತಿರಲಿಲ್ಲ.[1] ಈ ನಿದರ್ಶನದಲ್ಲಿ ನಾಡಿನವರು ಸಂತೆಯನ್ನು ಸ್ಥಾಪಿಸಿ ಪಟ್ಟಣದ ಸ್ಥಾಪನೆಗೆ ಉತ್ತೇಜನ ಕೊಡಲು ಒಂದು ವರ್ಷ ತೆರಿಗೆಗಳಿಂದ ರಿಯಾಯಿತಿ ಕೊಟ್ಟರು.

(೩) ಕ್ರಿ.ಶ. ೧೪೧೯ರಲ್ಲಿ ಹೆಮ್ಮಾಡಿನಾಡು ನಾಯಕ ಚಿಕ್ಕಮುದ್ದೇನಾಯಕನ ಪ್ರೇರಣೆಯಿಂದ ಬಲ್ಲೇಗಾವುಂಡ ಒಂದು ಸಂತೆಯನ್ನು ಪ್ರಾರಂಭಿಸಿದನು.[2]

(೪) ಕ್ರಿ.ಶ. ೧೫೬೧ರಲ್ಲಿ ನಾಡುಹಳ್ಳಿ ಸೀಮೆಯ ನಾಯಕ ಗೌರರೂರ್-ಹೆಬ್ಬಾರುವ ಮತ್ತು ಇತರ ಗೌಡರು ಅಂಗಡಿಗಳ ತೆರಿಗೆಗಳನ್ನು ವಸೂಲುಮಾಡುವ ಹಕ್ಕನ್ನು ಒಬ್ಬನಿಗೆ ಕೊಟ್ಟರು. ಆ ಹಕ್ಕನ್ನು ಪಡೆದವನು ಚನ್ನಿಗರಾಯ ದೇವಸ್ಥಾನದ ಸೇವೆಗೆ ಒಂದು ನಿಗದಿಯಾದ ಹಣವನ್ನು ಸಂದಾಯ ಮಾಡುವ ಷರತ್ತಿನ ಮೇಲೆ ಒಂದು "ಪೇಟೆಯ ಶಾಸನವನ್ನು" ಕೊಟ್ಟರು. ಅವರು ಮುತೆನಹಳ್ಳಿಗೆ ಚನ್ನಿಗರಾಯಪೇಟೆ ಎಂಬ ಹೆಸರನ್ನು ಕೊಟ್ಟು, ಚನ್ನಪ್ಪ ಸೆಟ್ಟಿ ಪ್ರತಿವರ್ಷ ಚೆನ್ನಿಗರಾಯದೇವರಿಗೆ ನೈವೇದ್ಯಕ್ಕೆ ೩೦ ವರಹಗಳನ್ನು ಕೊಡುವ ಷರತ್ತಿನ ಮೇಲೆ ತೆರಿಗೆರಹಿತ ಆ ಪೇಟೆಯನ್ನು ದಾನಮಾಡಿದರು. ಈ ನಿದರ್ಶನದಲ್ಲಿ ನಾಡುಜನರು ಒಂದು "ಪೇಟೆ"ಯನ್ನು ಸ್ಥಾಪಿಸಿ ಒಬ್ಬ ವರ್ತಕನಿಗೆ ಹಲವು ಷರತ್ತುಗಳ ಮೇಲೆ ತೆರಿಗೆ ರಿಯಾಯಿತಿ ಕೊಟ್ಟರು.[3]

(೫) ವ್ಯಕ್ತಿಗಳು ಸಂತೆಯನ್ನು ಸ್ಥಾಪಿಸಿದ ನಿದರ್ಶನಗಳು ಶಾಸನಗಳಲ್ಲಿವೆ. ಕ್ರಿ.ಶ. ೧೫೭೯ರಲ್ಲಿ ಇಲವರಿಗೆ ಮಲ್ಲಪಣ್ಣ ಒಂದು ಅಂಗಡಿಯನ್ನು ಕಟ್ಟಿಸಿ ಅದನ್ನು ಮಲಪುರದಲ್ಲಿ ನಡೆಯುತ್ತಿದ್ದ ಸಂತೆಯ ಸುಂಕ ಮತ್ತು ವೊರಬದಲ್ಲಿ ಸ್ವಲ್ಪ ಭೂಮಿಯೊಡನೆ ಸೂರ್ಯನಾರಾಯಣದೇವರಿಗೆ ದಾನಮಾಡಿದನು.[4]

(೬) ಶಿಡ್ಲಘಟ್ಟದ ಒಂದು ಶಾಸನವು, ಕ್ರಿ.ಶ. ೧೫೩೧ರಲ್ಲಿ ಗರ್ಭಸರು ಮಹಾಪಾತ್ರೆ ತಿಮ್ಮಪ್ಪನೆಂಬುವನಿಗೆ ಬಸವಪಟ್ಟಣ ಗ್ರಾಮವನ್ನು ಸಂತೆಗೆ "ಉಂಬಳಿಮಾನ್ಯ"ವಾಗಿ ಕೊಟ್ಟನು.[5] ಸಂತೆಯನ್ನು ಪ್ರಾರಂಭಿಸಿ ಒಂದು ಗ್ರಾಮವನ್ನು ಪಟ್ಟಣವನ್ನಾಗಿ ಪರಿವರಿವರ್ತಿಸಿದುದಕ್ಕೆ ಇದು ನಿದರ್ಶನವಾಗಿದೆ.

(೭) ಅನೇಕ ವೇಳೆ ಸಂತೆಯನ್ನು ನಾಯಕನೊಬ್ಬನು ಸ್ಥಾಪಿಸಿದ್ದನು. ಆನೆಕಲ್ಲಿನ ಒಂದು ಶಾಸನವು ಕ್ರಿ.ಶ. ೧೪೧೭ರಲ್ಲಿ ಜುಂಜೋಜಿನಾಯಕನ ಮಗ ಹಿರಿಯ ಮುದಿಯ

---

1. *Ibid.*, Sd. 112.
2. *MAR*, 1925, No. 99.
3. *MAR*, 1926, No. 24.
4. *SII*, IX (ii), No. 523.
5. *EC*, X, Sd. 22

ನಾಯಕ ತನ್ನ ನಾಯಕಹುದ್ದೆಗೆ ಸೇರಿದ ಸೋಮಗೊಂಡನಹಳ್ಳಿಯಲ್ಲಿ ಒಂದು ಶಾಸನವನ್ನು ಸ್ಥಾಪಿಸಿದನು.[1] ಕ್ರಿ.ಶ. ೧೪೧೮ರಲ್ಲಿ ಜುಂಜುಬಯ್ಯನಾಯಕನ ಮಗ ಜಕಮುದ್ದೆನಾಯಕನ ಮಗ ಜಕಮುದ್ದೆನಾಯಕ ತನ್ನ ನಾಯಕಹುದ್ದೆಗೆ ಸೇರಿದ ಹಿಮ್ಮರೆನಾಡಿನ ಬಲ್ಲಗೌಂಡನ ಮುಖಾಂತರ ಒಂದು ಸಂತೆಯನ್ನು ಸ್ಥಾಪಿಸಿದನು. ಆ ನಾಡಿನ ಸಮಸ್ತ ಗೌಡರು, ಸೆಟ್ಟಿಗಳು ಮತ್ತು ಇತರರು "ಪಟ್ಟಣಸ್ವಾಮಿ"ತನವನ್ನು ಭೂಮಿಯೊಡನೆ ಮತ್ತು ಸುಂಕವನ್ನು ಮಾಫಿಮಾಡಿಕೊಟ್ಟರು.[2] ಈ ನಿದರ್ಶನದಲ್ಲಿ ನಾಯಕ ಸಂತೆಯನ್ನು ಸ್ಥಾಪಿಸಿದ ಮೇಲೆ, ನಾಡು, ತೆರಿಗೆ ರದ್ದುಮಾಡಿ "ಸ್ವಾಮಿತನ"ವನ್ನು ಕೊಟ್ಟಿತು. ಕ್ರಿ.ಶ. ೧೫೩೧ರಲ್ಲಿ ಕಾಳಹಸ್ತಿನಾಯಕ ಚಿಕ್ಕಮಾಲೂರಿನ ಸಂತೆಯ ಸುಂಕಗಳನ್ನು ದಾನಮಾಡಿದನು.[3]

(೮) ಕ್ರಿ.ಶ. ೧೩೮೩ ರ ಬೇಲೂರಿನ ಒಂದು ಶಾಸನವು ಸಂತೆಗಳು ನಡೆಯುತ್ತಿದ್ದ ೨೭ ಪಟ್ಟಣಗಳ ಪಟ್ಟಿಯನ್ನು ಕೊಡುತ್ತದೆ. ಅವು ಹೀಗಿದ್ದುವು: ವಿಜಯನಗರಿ, ಹಸ್ತಿನಾವತಿ, ದೋರಸಮುದ್ರ, ಗುತ್ತಿ, ಪೆನುಗೊಂಡ, ಆದವಾನಿ, ಉದಯಗಿರಿ, ಚಂದ್ರಗಿರಿ, ಮುಳವಾಯಿ, ಕಾಂಚಿ, ಪಡೆವೀಡು, ಚದುರಂಗಪಟ್ಟಣ, ಮಂಗಳೂರು, ಬಾರಕೂರು, ಹೊನ್ನಾವರ, ಚಂದ್ರವುರ, ಆರಗ, ಚಂದ್ರಗುತ್ತಿ, ಅಣ್ಣಿಗೆರೆ, ಹುಲಿಗೆರೆ, ನಿಡುಗಲ್ಲು, ಚಿಮುತನಕಲ್ಲು, ತರಿಯಕಲ್ಲು, ಆನೆವಿದ್ದಸರಿ, ಕಲ್ಲೆಯ, ತೆಲಕಲಾಂಬಿ ಮತ್ತು ಸಿಂಗಪಟ್ಟಣ.[4]

(೯) ಶ್ರೇಣಿಗಳು ಸಂತೆಗಳನ್ನು ಸ್ಥಾಪಿಸುತ್ತಿದ್ದುವು. ಬೌರಿಂಗ್‌ಪೇಟೆ ನೋಣಮಂಗಳ ಗ್ರಾಮದ ಕ್ರಿ.ಶ. ೧೪೩೦ರ ಒಂದು ಶಾಸನವು, ಐವತ್ತಾರು ರಾಷ್ಟ್ರಗಳ "ಸಾಲುಮೂಲೆ", ಸಮಸ್ತ ರೈತರು ಮತ್ತು ಪಾಂಚಾಲರೊಡನೆ ಒಂದು ಸಂತೆಯನ್ನು ಸ್ಥಾಪಿಸಿ, ಆ ಸಂದರ್ಭದಲ್ಲಿ ಸಂತೆಯ "ಪಟ್ಟಣಸ್ವಾಮಿ" ಚಿಯಿಬಸ್ಸಿಸೆಟ್ಟಿಗೆ ಭೂಮಿಯನ್ನು ಮಾನ್ಯವಾಗಿ ಕೊಟ್ಟರು.[5]

ಶ್ರೇಣಿಗಳ ಮುಖಂಡರು ಸರ್ಕಾರಕ್ಕೆ ಅರ್ಜಿ ಹಾಕಿದಾಗ ಅದು ಹೊಸ ಪಟ್ಟಣಗಳನ್ನು ಕಟ್ಟುವ ಕೆಲಸವನ್ನು ಕೈಗೊಳ್ಳುತ್ತಿತ್ತು. ಅವರು ಜನಸಮುದಾಯದ ಪರವಾಗಿ ವರ್ತಿಸುತ್ತಿದ್ದರು. ಶ್ರೇಣಿಗಳ ಮುಖಂಡರನ್ನು ಸೂಚಿಸಲು "ಉಭಯನಾನಾದೇಶಿ",[6] "ಪಟ್ಟಣಸ್ವಾಮಿ"[7], "ಮಹಾವಡ್ಡವ್ಯವಹಾರಿ"[8], "ವಡ್ಡವ್ಯವಹಾರಿ"[9] ಎಂಬ

1. *EC*, IX, An. 44.
2. *Ibid.*, IV.
3. *EC*, XII, Mi. 69.
4. *EC*, V, Bl. 75.
5. *EC*, X, Bp. 72.
6. *MAR*, 1919, p. 33, para 85
7. *EC*, IX, Cn. 37
8. *EC*, Kl. 73
9. *EC*, IX, An. 64

ಪದಗಳನ್ನು ಉಪಯೋಗಿಸಲಾಗುತ್ತಿತ್ತು ಮತ್ತು ಅವರು ಅನೇಕವೇಳೆ ಪಟ್ಟಣಗಳ ಮುಖಂಡರು ಆಗಿರುತ್ತಿದ್ದರು. ದೊಡ್ಡ "ವಡ್ಡವ್ಯವಹಾರಿ", ನಾನಾದೇಶಿಗಳ ಮುಖಂಡ ಅರ್ಜುಭಟ್ಟಯ್ಯನ ಮಗ ಮಹಾದೇವಣ್ಣ ಬುಕ್ಕಣ್ಣ ಒಡೆಯರಿಗೆ ಚಂಗನಾಡಿನ ಲಕ್ಷ್ಮೀಪುರದಲ್ಲಿ ಒಂದು ಸಂತೆಯನ್ನು ಸ್ಥಾಪಿಸಲು ಅರ್ಜಿ ಹಾಕಿದನು. ರಾಜನು ಆವಶ್ಯಕವಾದ ಆಜ್ಞೆಯನ್ನು ಮಾಡಲು ಪ್ರಧಾನಮಂತ್ರಿ ಸೋರಪ್ಪ, ನವಿಲೆ, ಹಂದರಗೆ, ಪೊಸನಾಡು, ಅಲ್ಲಾಳಪಟ್ಟಣ ಮತ್ತು ಇತರ ಸ್ಥಳಗಳ ರೈತರ ಸಹಾಯದಿಂದ ಆ ಆಜ್ಞೆಯನ್ನು ಕಾರ್ಯಗತಮಾಡಿದನು.[1]

**ಕೆಲವು ಮುಖ್ಯ ಪಟ್ಟಣಗಳು :** ವಿಜಯನಗರ ಸಾಮ್ರಾಜದಲ್ಲಿ ಅನೇಕ ಪಟ್ಟಣಗಳಿದ್ದುವು. ಪಶ್ಚಿಮತೀರದ ಮುಖ್ಯ ಪಟ್ಟಣಗಳಲ್ಲಿ ಹಲವು ಅಂಕೋಲ, ಮೆರ್ಜನ್, ಹೊನ್ನಾವರ, ಭಟ್ಕಲ್, ಬೈಂದೂರು, ಬಾರಕೂರು, ಬಸರೂರು, ಮಂಗಳೂರು ಮತ್ತು ಕುಂಬ್ಳ[2]. ಇತರ ಮುಖ್ಯ ಪಟ್ಟಣಗಳು ಹದಿನೆಂಟು ಕಂಪಣಗಳ ರಾಜಧಾನಿ ಉದ್ಧರೆ,[3] ಭಾರಂಗಿ, ಸಂಗೀತಪುರ[4], ಗೇರುಸೊಪ್ಪೆ ಮತ್ತು ಬಿದನೂರು.[5]

ಡಾ|| ಮಹಾಲಿಂಗಂ, ಸಾಮ್ರಾಜ್ಯದ ಕೇಂದ್ರ ಭಾಗದ ಹಲವು ಮುಖ್ಯ ನಗರಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಅವು ಶ್ರೀರಂಗಪಟ್ಟಣ, ದ್ವಾರಸಮುದ್ರ, ಇಕ್ಕೇರಿ, ಬಂಕಾಪುರ, ರಾಯಚೂರು, ಆದವಾನಿ, ವಿಜಯನಗರ ಮತ್ತು ಪೆನುಕೊಂಡ. ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಕೊಂಡವೀಡು, ಶ್ರೀಶೈಲಂ, ಉದಯಗಿರಿ, ಕಾಳಹಸ್ತಿ, ತಿರುಪತಿ, ಚಂದ್ರಗಿರಿ, ಪುಲಿಕಟ್, ಮೈಲಾಪುರ, ಕಾಂಚೀಪುರಂ, ತಿರುವಣ್ಣಾಮಲೈ, ಚಿದಂಬರಂ, ಕುಂಭಕೋಣಂ, ನಾಗಪಟ್ಟಣಂ, ತಂಜಾವೂರು, ಶ್ರೀರಂಗಂ, ಮಧುರೈ, ಶ್ರೀವಿಲ್ಲಿಪುತ್ತೂರು, ತಿರುನಲ್ವೇಲಿ, ರಾಮೇಶ್ವರಂ ಮತ್ತು ಅನಂತಶಯನಂ.[6]

**ಶ್ರೇಣಿ ಸಭೆಗಳು : ವೃತ್ತಿಶ್ರೇಣಿಗಳು :** ಶ್ರೇಣಿಸಭೆಗಳು ಪೌರಸಭೆಗಳೂ ಆಗಿದ್ದುವು. ಡಾ. ಅಪ್ಪಾದೊರೈ ಹೇಳಿರುವ ಹಾಗೆ ಮಧ್ಯಯುಗದ ಪಟ್ಟಣದ ಆರ್ಥಿಕ ವ್ಯವಸ್ಥೆ ಶ್ರೇಣಿಯ ಸುತ್ತ ಕೇಂದ್ರೀಕೃತವಾಗಿದ್ದಿತು.[7] ಶ್ರೇಣಿ ಅಂದರೆ ವ್ಯಕ್ತಿಗಳು ಒಂದು ಕಸಬಿನಿಂದ ಜೀವನೋಪಾಯವನ್ನು ಸಾಗಿಸುತ್ತಿದ್ದ ಸ್ವಇಚ್ಛಿಕ ಸಂಘವಾಗಿದ್ದಿತು. ಶ್ರೇಣಿಯಲ್ಲಿ ಎರಡು ವಿಧಗಳಿದ್ದುವು. ಅವು: (೧) ಜಾತಿಶ್ರೇಣಿ ಮತ್ತು (೨) ವ್ಯಾಪಾರಿಗಳ ಶ್ರೇಣಿ. ಸದಸ್ಯರು ಒಂದೇ ಕಸಬಿನಲ್ಲಿರುವುದು ಮತ್ತು ಸದಸ್ಯತ್ವ ಎಲ್ಲರಿಗೂ ತೆರೆದಿರುವುದು

---

1. *EC*, V, Ak. 68.
2. Mahalingam : *Economic Life* (Madras, 1951), p. 5.
3. *EC*, VIII, Sb. 152
4. *Ibid.*, Sb. 163
5. *Ibid.*, Sb. 329
6. Elliot : *History of India*, IV, p. 104
7. Mahalingam : *Economic Life*, p. 5
8. Appadurai : *op.cit.*, I, p. 357

ಶ್ರೇಣಿಯ ಮುಖ್ಯ ಲಕ್ಷಣಗಳಾಗಿದ್ದವು. ವಾಸ್ತವವಾಗಿ ಒಂದು ಶ್ರೇಣಿಯ ಹೆಚ್ಚಿನ ಸದಸ್ಯರು ಒಂದೇ ಜಾತಿಗೆ ಅಥವಾ ಕೋಮಿಗೆ ಸೇರಿರುತ್ತಿದ್ದರು. ಅನೇಕ ಪಟ್ಟಣಗಳ ಆಡಳಿತ ಬಹುಮಟ್ಟಿಗೆ ಒಂದು ಶ್ರೇಣಿಗೆ ಸೇರಿದ್ದಿತು.[1] ದಕ್ಷಿಣ ಭಾರತದಲ್ಲಿ ಅನೇಕ ವೃತ್ತಿ ಶ್ರೇಣಿಗಳಿದ್ದುವು. ಶಾಸನವೊಂದು ಹದಿನೆಂಟು "ಪಣ"ಗಳಿದ್ದುವೆಂದು (ಕೋಮುಗಳು) ತಿಳಿಸುತ್ತದೆ. ಅವು: ವ್ಯಾವಹಾರಿಕರು, ಪಾಂಚಾಲರು, ಕುಂಭಾಲಿಕರು, ತಂತುವಾಯಿನ್ (ನೇಯ್ಗೆಯವರು), ವಸ್ತ್ರಭೇದಿಕರು (ಬಟ್ಟೆಗೆ ಬಣ್ಣಹಾಕುವವರು), ತಿಲಘಟಕರು (ಎಣ್ಣೆ ತೆಗೆಯುವವರು), ಪುರಾಂತಕರು (ಪಾದರಕ್ಷೆ ಮಾಡುವವರು), ವಸ್ತ್ರರಕ್ಷಕರು (ದರ್ಜಿ), ದೇವಾಂಗರು, ಪರಿಕೆಲಿತಿ (ಗೂಳಿ ಸಾಕುವವರು), ಗೋರಕ್ಷಕರು, ಕಿರಾತರು, ರಜಕರು (ದೋಬಿ) ಮತ್ತು ಕ್ಷೌರಕರು.[2] ಆದರೆ ಇವರಲ್ಲಿ ಪಾಂಚಾಲ ಅಥವಾ ವೀರ ಪಾಂಚಾಲರು ಅತ್ಯಂತ ಉತ್ತಮ ವ್ಯವಸ್ಥೆ ಹೊಂದಿದ್ದರು.[3]

ಶ್ರೇಣಿಯ ಸ್ಥಾಪನೆಗೆ ಕಾರಣ ಸಾಮಾನ್ಯವಾಗಿ ಹಿತರಕ್ಷಣೆ. ಅದರ ಸದಸ್ಯರು ಅವರ ಕಸಬಿನ ಹಿತರಕ್ಷಣೆ ಮಾಡುತ್ತಿದ್ದರು. ಶ್ರೇಣಿಗಳು ರಾಜಕೀಯ ಅಧಿಕಾರವನ್ನು ಚಲಾಯಿಸುತ್ತಿದ್ದಹಾಗೆ ಕಾಣುತ್ತದೆ. ಅವು ಅನೇಕ ಹಕ್ಕುಗಳನ್ನು ಹೊಂದಿ, ರಾಜಕೀಯ ವಿಷಯಗಳಲ್ಲಿ ಸಹಕರಿಸುತ್ತಿದ್ದುವು. ಅವು ಕಾಲಾನುಕಾಲದಲ್ಲಿ ರಾಜರಿಂದ ಹಕ್ಕುಗಳನ್ನು ಪಡೆಯುತ್ತಿದ್ದುವು. ಅವು ಸ್ಥಳೀಯವಾಗಿ ವ್ಯವಸ್ಥಿತವಾಗಿದ್ದವು. ಆದರೆ ಸ್ಥಳೀಯವಲ್ಲದೆ, ಹೊರಗೂ ಹತೋಟಿ ಹೊಂದಿದ ಶ್ರೇಣಿಗಳಿದ್ದುವು. ಅವು ಹಕ್ಕುಗಳನ್ನು ಪಡೆಯಲು ಮತ್ತು ದಾನಮಾಡಲು ಸಂಸ್ಥಾರೂಪವಾಗಿ ವರ್ತಿಸುತ್ತಿದ್ದುವು.

ವ್ಯಾಪಾರ ಶ್ರೇಣಿ: ಕಸಬು ಶ್ರೇಣಿಗಳಲ್ಲದೆ ವ್ಯಾಪಾರ ಶ್ರೇಣಿಗಳೂ ಇದ್ದುವು. ವ್ಯಾಪಾರ ಶ್ರೇಣಿ ಮುಖ್ಯವಾಗಿ ವರ್ತಕರ ಸಂಘವಾಗಿದ್ದಿತು. ಪ್ರತಿ ಶ್ರೇಣಿಯ ವರ್ತಕರು ಅಥವಾ ಕಸಬುದಾರರ ಅಂಗಡಿಗಳು ಹತ್ತಿರವಿದ್ದವು. ಮತ್ತು ಆಭರಣಗಳನ್ನು ತಯಾರಿಸು ವವರು ಕೆಂಪು, ಮುತ್ತು ಮತ್ತು ವಜ್ರಗಳನ್ನು ಪೇಟೆಯಲ್ಲಿ ಬಹಿರಂಗವಾಗಿ ಮಾರುತ್ತಿದ್ದರೆಂದು ಅಬ್ದುರ್ ರಜಾಕ್ ತಿಳಿಸುತ್ತಾನೆ.[4] ಈ ಪದ್ಧತಿಯನ್ನು ಪೇಸ್ ಕೂಡ ತಿಳಿಸುತ್ತಾನೆ.[5] ಒಂದೇ ವ್ಯಾಪಾರದವರು ಶ್ರೇಣಿಯನ್ನು ಮಾಡಿಕೊಳ್ಳಲು ಸೇರುತ್ತಿದ್ದರು ಮತ್ತು ಅವರು ರಾಜನ ಆರ್ಥಿಕ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ಡಾ. ಮಹಾಲಿಂಗಂರವರ ಪ್ರಕಾರ ಶ್ರೇಣಿ ಸ್ಥಳೀಯ ಆಡಳಿತದಲ್ಲಿ ಮುಖ್ಯ ಪಾತ್ರ ವಹಿಸಿದ್ದು ಗ್ರಾಮಸಭೆಯನ್ನು ಹೋಲುತ್ತಿದ್ದಿತು.[6] ಕಸಬು ಶ್ರೇಣಿಯ ಹಾಗೆಯೆ

1. Mahalingam: *SIP*, p. 380
2. *ARSIE*, 1918, paras 84 and 85; *EI*, XX, p 90
3. *EI*, III, pp. 67-69
4. Elliot: *op.cit.*, IV, T. 107
5. Sewell: *op.cit.*, 246-247
6. Mahalingam, *SIP*, p. 386

ವರ್ತಕರು ಶ್ರೇಣಿ ರಚಿಸಲು ಒಂದುಗೂಡುತ್ತಿದ್ದ ಅಂಶಗಳು, ಒಂದೇ ಕಸಬಿನ ಅವಲಂಬನೆ, ಒಂದೇ ವ್ಯಾಪಾರ ನಿಯಮಗಳ ಪಾಲನೆ, ಸರ್ಕಾರ ಶ್ರೇಣಿಗೆ ನೀಡಿದ ಹಕ್ಕುಗಳನ್ನು ಎಲ್ಲರೂ ಅನುಭವಿಸುವುದು, ಶ್ರೇಣಿಯವರ ವ್ಯಕ್ತಿಸ್ವಾತಂತ್ರ್ಯ ಮತ್ತು ಆಸ್ತಿಸಂರಕ್ಷಣೆ ಮತ್ತು ಶ್ರೇಣಿಯ ಹೆಸರಿನಲ್ಲಿ ದೇವದೇವತೆಗಳಿಗೆ ಭಕ್ತಿ ಮತ್ತು ನೆರೆಹೊರೆ ಸಂಪರ್ಕ ಇವೇ ಆಗಿದ್ದುವು.

ಶ್ರೇಣಿಗಳು ತಮ್ಮ ವರಮಾನವನ್ನು ಅನೇಕ ಮೂಲಗಳಿಂದ ಪಡೆಯುತ್ತಿದ್ದುವು. ಇವು ಸದಸ್ಯರ ಚಂದ, ಲೇವಾದೇವಿಯಿಂದ ಬರುತ್ತಿದ್ದ ಲಾಭ, ತೆರಿಗೆ ವಸೂಲಿಯಲ್ಲಿ ಭಾಗವಹಿಸುವುದು, ಸಂಘದ ಆಸ್ತಿಯಿಂದ ಬರುತ್ತಿದ್ದ ವರಮಾನ ಮುಂತಾದವು ಗಳಾಗಿದ್ದುವು.

ಶ್ರೇಣಿಗಳು ಪ್ರಾತಿನಿಧ್ಯಸ್ವರೂಪವನ್ನು ಹೊಂದಿ ಸ್ಥಳೀಯ ಜನರ ಹಿತಸಂರಕ್ಷಣೆ ಮಾಡುತ್ತಿದ್ದುವು. ಸರ್ಕಾರದ ಉನ್ನತ ಅಧಿಕಾರಿಗಳೂ ಕೂಡ ಈ ಸಭೆಗಳ ಹಕ್ಕುಗಳಲ್ಲಿ ಪ್ರವೇಶಿಸುತ್ತಿರಲಿಲ್ಲ. "ಮಿತಾಕ್ಷರ"ದ ಪ್ರಕಾರ, ರಾಜನು ಅವುಗಳ ವೈಯಕ್ತಿಕ ಸ್ವರೂಪವನ್ನು ಮುಂದುವರಿಸಿ ಹಳೆಯ ನಿಯಮಗಳನ್ನು ಸಂರಕ್ಷಿಸಬೇಕಾಗಿತ್ತು.[1] ಅಧಿಕಾರಿಗಳು ಈ ಸಂಸ್ಥೆಗಳ ಒಪ್ಪಿಗೆ ಇಲ್ಲದೆ ಕಂದಾಯಗಳ ರದ್ದು ಅಥವಾ ದಾನಮಾಡು ವಂತಿರಲಿಲ್ಲ. ಡಾ. ಅಪ್ಪಾದೊರೈ ಹೇಳಿರುವಂತೆ, ಶ್ರೇಣಿಗಳು ಸಾಮಾನ್ಯವಾಗಿ ಮುಖ್ಯ ವಿಷಯಗಳನ್ನು ತೀರ್ಮಾನಿಸುವುದರಲ್ಲಿ ಮತ್ತು ಸಹಕಾರ ಸಂಘಗಳಾಗಿ ಶಕ್ತಿಯುತ ವಾಗಿದ್ದುವು.[2]

ವಿಜಯನಗರ ಕಾಲದಲ್ಲೂ ಕೂಡ, ಶ್ರೇಣಿಗಳು ಮೊದಲಿನಂತೆಯೆ ಅನೇಕ ಹಕ್ಕುಗಳನ್ನು ಹೊಂದಿದ್ದು ರಾಜಕೀಯ ವಿಷಯಗಳಲ್ಲಿ ಸಹಕರಿಸುತ್ತಿದ್ದುವು. ಶ್ರೇಣಿಗಳು ತಮ್ಮ ಪ್ರಭಾವ ಬೀರದ ಯಾವುದೇ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳು ಇರಲಿಲ್ಲವೆಂದು ಡಾ. ಮಹಾಲಿಂಗಂ ಹೇಳಿರುವುದು ಸತ್ಯವಾಗಿದೆ.[3]

ವಿಜಯನಗರ ಕಾಲದಲ್ಲಿ ವ್ಯಾಪಾರ ಶ್ರೇಣಿಗಳನ್ನು ಗುರುತಿಸಲು ಅನೇಕ ಪದಗಳನ್ನು ಉಪಯೋಗಿಸಲಾಗಿದೆ. ಅವುಗಳಲ್ಲಿ ಹಲವು ಹೀಗಿದ್ದುವು: ಬಣಜಿಗರು, ನಾನಾದೇಶಿ, ಉಭಯನಾನಾದೇಶಿ, ನಗರ, ನಖರ, ವೈಶ್ಯರು, ಸೆಟ್ಟಿಗಳು, ಸೆಟ್ಟಿ ಗುತ್ತರು, ಬೀರವಣಿಜರು, ಐಯ್ಯೊವೊಳೆ, ಮಣಿಗ್ರಾಮಮ್, ಯಳಮೆ, ಹಂಜಮಾನ ಮುಂತಾದುವು ಸ್ವಾಯತ್ತತೆಯನ್ನು ಹೊಂದಿದ್ದ ಸಂಸ್ಥೆಗಳಾಗಿದ್ದುವು. ಮೇಲೆ ತಿಳಿಸಿರುವ ಶ್ರೇಣಿಗಳ ವಿವರವನ್ನು ಈ ಅಧ್ಯಾಯದಲ್ಲಿ ಮುಂದೆ ತಿಳಿಸಲಾಗಿದೆ.

**ಶ್ರೇಣಿಗಳ ನಾಯಕರು:** ಈ ಸಂಘಗಳಿಗೆ ನಾಯಕರಿದ್ದರು. ಅವರನ್ನು ಹೇಗೆ ನೇಮಿಸುತ್ತಿದ್ದರೆಂದು ತಿಳಿದು ಬಂದಿಲ್ಲ. ವ್ಯಾಪಾರ ಶ್ರೇಣಿಗಳ ಮುಖಂಡರು ಅನೇಕವೇಳೆ

1 **Vijnanesvara:** *op.cit.*, V, 192
2. **Appadorai:** *op.cit.*, I, p. 377
3. **Mahalingam:** *Economic Life*, p. 34

ಪಟ್ಟಣಗಳ ಮುಖಂಡರಾಗಿದ್ದರು.[1] ಅವರಿಗೆ ಬೇರೆ ಬೇರೆ ಹೆಸರಿದ್ದುವು. ಅವು, ಉಭಯ ನಾನಾದೇಶಿ ಮುಖಂಡ,[2] ಪಟ್ಟಣಸ್ವಾಮಿ,[3] ಮಹಾವಡ್ಡ ವ್ಯವಹಾರಿ,[4] ವಡ್ಡವ್ಯವಹಾರಿ[5] ಪಟ್ಟವ್ಯಾಪಾರಿ,[6] ಸೆಟ್ಟಿ,[7] ಸ್ವಾಮಿ,[8] ಪೃಥ್ವೀಸೆಟ್ಟಿ,[9] ಸೆಟ್ಟಿಪಟ್ಟಣ ಸ್ವಾಮಿ,[10] ಸೆಟ್ಟಿತನ,[11] ಪುರಪತಿ,[12] ನಗರೇಶ್ವರ ಮತ್ತು ಪಟ್ಟಣಾಧೀಶ್ವರ[13] ಮತ್ತು ಮಹಾಪ್ರಭು[14]. ಅವರು ಪೌರಾಡಳಿತದ ಉಸ್ತುವಾರಿ ಸಂಬಂಧವಾಗಿ ಅಧಿಕಾರ ಹೊಂದಿದ್ದರು. ಶ್ರೇಣಿಯ ರಚನೆ ಮತ್ತು ಕೆಲಸ ಮಾಡುವ ರೀತಿ ಸ್ಥಳದಿಂದ ಸ್ಥಳಕ್ಕೆ ಮತ್ತು ಕಾಲದಿಂದ ಕಾಲಕ್ಕೆ ಬೇರೆಯಾಗಿದ್ದಿರಬೇಕು. ನಾಯಕನು ಸಂಸ್ಥೆಯ ಕೆಲಸದ ಮೇಲೆ ಸ್ವಲ್ಪ ಹತೋಟಿ ಹೊಂದಿ ಮತ್ತು ಕೇಂದ್ರಸರ್ಕಾರದೊಡನೆ ವ್ಯವಹಾರಗಳಲ್ಲಿ ಅದರ ಪ್ರತಿನಿಧಿಯಾಗಿ ಕೆಲಸಮಾಡುತ್ತಿದ್ದನು. "ಪಟ್ಟಣಸ್ವಾಮಿ" ಅಥವಾ "ಸೆಟ್ಟಿ" ಒಂದು ಸ್ಥಳದ ವಾಣಿಜ್ಯ ಸಂಸ್ಥೆಗಳ ನಾಯಕನಾಗಿದ್ದನು.

**ಪಟ್ಟಣಸ್ವಾಮಿ–ನೇಮಕ :** ಪಟ್ಟಣಸ್ವಾಮಿ ಅನೇಕವೇಳೆ ಪಟ್ಟಣದ ಸ್ಥಾಪಕನಾಗಿದ್ದನು. ಕ್ರಿ.ಶ. ೧೪೩೦ರಲ್ಲಿ ಮಾರಗಲ್ ಸಂತೆಯ ಪಟ್ಟಣಸ್ವಾಮಿ ಚಿಯಿಬಸಿಸೆಟ್ಟಿಗೆ ಭೂಮಿಯನ್ನು ಕೊಡಲಾಯಿತು.[15] ಕ್ರಿ.ಶ. ೧೫೩೧ ರಲ್ಲಿ ತಿಮ್ಮಪ್ಪನೆಂಬುವನಿಗೆ ಸಂತೆಗೆ ಮಾನ್ಯವಾಗಿ ಬಸವಪಟ್ಟಣಗ್ರಾಮವನ್ನು ಕೊಡಲಾಯಿತು.[16] ವಿಜಯನಗರಕಾಲದಲ್ಲಿ ಪಟ್ಟಣಸ್ವಾಮಿ ಹುದ್ದೆಯನ್ನು ಎರಡು ವಿಧವಲ್ಲಿ ಹೊಂದಬಹುದಾಗಿತ್ತು. ಸ್ಥಳದ ಜನರು ಅಥವಾ ಅವರ ಪ್ರತಿನಿಧಿಗಳು ಆ ಹುದ್ದೆಯನ್ನು ಕೊಡಬಹುದಾಗಿತ್ತು. ನೇಮಕ ಮಾಡಲು ಜನರ ಸಮ್ಮತಿಯನ್ನು ತೆಗೆದುಕೊಳ್ಳಲಾಗುತ್ತಿತ್ತು. ಇದರಲ್ಲಿ ನಾವು

---

1. *MAR*, 1925, No. 36.
2. *Ibid.*, 1919, p. 33, para 85
3. *EC*, IX, An. 44 ; *EC*, IX, An. 64 ; *EC*, IX, Ht. 128 ; *EC*, X, Bg. 72 ; *EC*, X, Bg. 83 ; *EC*, X, Mr. 4 ; *SII*, IX (ii) Nos 516, 618.
4. *EC*, X, Kl. 73
5. *EC*, V, Ag. 68, *EC* IX Bn. 56 ; *EC*, IX, Cp. 37, *MAR*, 1928, No. 88
6. *EC*, IX, Bn. 59
7. *EC*, IX, Bn. 96, *EC*, XI, Hk. 17 ; *EC*, YL, (2): *EC*, X, Sd. 122
8. *EC*, IX, An. 4
9. *EC*, VIII, Sb. 18
10. *EC*, X, Bl. 6
11. *EC*, VIII, Sb. 428 ; *MAR*, 1926, No. 119
12. *MAR*, 1928, No. 37
13. *EC*, IX, Bn. 96
14. *EC*, X, Kl. 73
15. *EC*, X, Bg. 72
16. *EC*, X, Sd 22




ಚಿತ್ರ ೨ : ವಿಜಯನಗರ ಸಾಮ್ರಾಜ್ಯದಲ್ಲಿದ್ದ ಪಟ್ಟಣಗಳು

ಪ್ರಾತಿನಿಧ್ಯವನ್ನು ಕಾಣಬಹುದು. ಈ ಕೆಳಗೆ ಕೊಟ್ಟಿರುವ ಶಾಸನಗಳು ಇದಕ್ಕೆ ಸಾಕ್ಷ್ಯವಾಗಿವೆ—

(೧) ಕ್ರಿ.ಶ. ೧೩೬೨ರಲ್ಲಿ ಕೈವಾರ ನಾಡಿನ ಸಮಸ್ತ ಗೌಡಪ್ರಜೆಗಳು, ಪೆಕ್ಕುಂದ್ರದ ಸಮಸ್ತ ನಾನಾ ದೇಶಿಗಳು ಮತ್ತು ಹದಿನೆಂಟು ಜಾತಿಯವರು ಪೆರಿಯ ನಾಯಕನನ್ನು ಸಂತೆಯ ಪಟ್ಟಣಸ್ವಾಮಿಯನ್ನಾಗಿ ನೇಮಿಸಿದರು.[1] (೨) ಕ್ರಿ.ಶ. ೧೩೮೩ರ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಒಂದು ಶಾಸನವು ಗುತ್ತಿ ಹದಿನೆಂಟು ಕಂಪಣಗಳ ಸಮಸ್ತ "ಸಾಲುಮೂಲೆ", ವಖಲಿಗೆರೆ ನಾಡು, ಹೊನ್ನತ್ತಿನಾಡು, ಹಲಸಿಗೆ, ಹೊನ್ನಲೆ, ಇನ್ ಗುಂಡಿ ಮತ್ತು ಇತರ ಸ್ಥಳದವರು ತಮ್ಮಲ್ಲಿ ಒಪ್ಪಿ ಮುದೆ ದಣ್ಣಾಯಕನಿಗೆ "ಸೆಟ್ಟಿತನ"ವನ್ನು ಕೊಟ್ಟರು.[2] (೩) ಕ್ರಿ.ಶ. ೧೪೧೨ರ ಬೆಂಗಳೂರು ಜಿಲ್ಲೆ ಆನೆಕಲ್ ತಾಲ್ಲೂಕಿನ ಒಂದು ಶಾಸನವು ಹಿರಸುನಾಟ್ ಪ್ರಭು ಮತ್ತು ಐವತ್ತಾರು ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ಇತರ ಅನೇಕರು, ಮರಿಸೆಟ್ಟಿ ಮತ್ತು ತಿರುಮಲಸೆಟ್ಟಿ ಅವರಿಗೆ ಪಟ್ಟಣಸ್ವಾಮಿ ಹುದ್ದೆಯನ್ನು ಕೊಟ್ಟರು.[3] (೪) ಕ್ರಿ.ಶ. ೧೪೧೮ರ ಅದೇ ಸ್ಥಳದ ಮತ್ತೊಂದು ಶಾಸನವು ಹಿಮ್ಮರೆ ನಾಡಿನ ಸಮಸ್ತ ಗೌಡರು, ಸೆಟ್ಟಿಗಳು ಮತ್ತು ಇತರರು ಬಲ್ಲಗಾವುಂಡನಿಗೆ "ಸ್ವಾಮಿತನ"ವನ್ನು ಕೊಟ್ಟರೆಂದು ದಾಖಲೆ ಮಾಡಿದೆ.[4] (೫) ಅದೇ ಸ್ಥಳದ ಕ್ರಿ.ಶ. ೧೪೨೭ರ ಒಂದು ಶಾಸನವು ಹಿರಿಯ ವರ್ತಕರು ಮತ್ತು ನಾನಾ ದೇಶಿಗಳ ಎರಡು ಪಂಥದ ಪ್ರತಿನಿಧಿಗಳು, "ಪಟ್ಟಣಸ್ವಾಮಿ"ತನವನ್ನು ಕೊಟ್ಟರೆಂದು ತಿಳಿಸುತ್ತದೆ.[5] (೬) ಕ್ರಿ.ಶ. ೧೪೩೦ರ ಕೋಲಾರ ಜಿಲ್ಲೆಯ ಬೌರಿಂಗ್ ಪೇಟೆ ತಾಲ್ಲೂಕಿನ ನೊಣಮಂಗಲ ಗ್ರಾಮದ ಒಂದು ಶಾಸನವು ೫೬ ರಾಷ್ಟ್ರಗಳ "ಸಾಲುಮೂಲೆ" ರೈತರು ಮತ್ತು ಪಾಂಚಾಲರು ಚಿಯಿ ಬಸ್ಸಿಸೆಟ್ಟಿಯನ್ನು "ಪಟ್ಟಣ ಸ್ವಾಮಿ"ಯನ್ನಾಗಿ ಮಾಡಿದರೆಂದು ತಿಳಿಸುತ್ತದೆ.[6]

ಅನೇಕವೇಳೆ ಈ ಹುದ್ದೆಯನ್ನು ಸರ್ಕಾರವು ಒಬ್ಬ ಪ್ರಮುಖ ವರ್ತಕನಿಗೆ ಕೊಡುತ್ತಿತ್ತು. ಬೌರಿಂಗ್ ಪೇಟೆ ತಾಲ್ಲೂಕು ಕಾಮಸಮುದ್ರ ಗ್ರಾಮದ ಕ್ರಿ.ಶ. ೧೪೨೬ರ ಒಂದು ಶಾಸನವು, ಚಿಕಿವಿಯ ನಾಯಕ "ಪಟ್ಟಣ ಸ್ವಾಮಿತನ"ವನ್ನು ಬುದಪ ಸೆಟ್ಟಿ ಎಂಬುವನಿಗೆ ಕೊಟ್ಟನೆಂದು ತಿಳಿಸುತ್ತದೆ.[7]

---

1. *EC*, X, Ct. 95.
2. *EC*, VIII, Sb. 428.
3. *EC*, IX, An. 44: 56 means many.
4. *Ibid.*, IV.
5. *Ibid.*, 64.
6. *EC*, X, Bp. 72
7. *Ibid*, 83.

ಮಧ್ಯಯುಗದ ಕರ್ನಾಟಕದಲ್ಲಿ ಈ ಹುದ್ದೆಯು ವಂಶಪಾರಂಪರ್ಯವಾಗಿದ್ದಿತು.[1] ಡಾ. ಅಪ್ಪಾದೊರೈ ತಿಳಿಸಿರುವಹಾಗೆ ಮುಖಂಡತ್ವವು ಅನೇಕ ವೇಳೆ ವಂಶಪಾರಂಪರ್ಯವಾಗಿದ್ದಿರಬಹುದು.[2]

"ಪಟ್ಟಣ ಸ್ವಾಮಿ"ಯು ಶ್ರೇಣಿಗಳಿದ್ದ ಪೌರ ಆಡಳಿತವನ್ನು ಹೊಂದಿದ್ದನೆಂದು ಕಾಣುತ್ತದೆ.[3] ಅವನು ನಗರದ ಮುಖಂಡನಾಗಿದ್ದನು. ಒಂದೇ ಸ್ಥಳದಲ್ಲಿ ಆ ಸ್ಥಳದ ವಿಸ್ತೀರ್ಣವನ್ನು ಅವಲಂಬಿಸಿ ಒಂದಕ್ಕಿಂತ ಹೆಚ್ಚಿನ "ಪಟ್ಟಣ ಸ್ವಾಮಿ" ಇರಬಹುದಾಗಿತ್ತು. ಕ್ರಿ.ಶ. ೧೪೧೨ ರ ಆನೇಕಲ್ಲಿನ ಒಂದು ಶಾಸನವು ದಂಡಿಶೆಟ್ಟಿ ಮತ್ತು ತಿರುಮಲಶೆಟ್ಟಿ ಒಂದು ಸ್ಥಳದ (ಹೆಸರನ್ನು ತಿಳಿಸಿಲ್ಲ) "ಪಟ್ಟಣಸ್ವಾಮಿ" ಆಗಿದ್ದರೆಂದು ತಿಳಿಸುತ್ತದೆ.[4] ಕ್ರಿ.ಶ. ೧೫೩೪ರ ಹೊಳಲ್ಕೆರೆಯ ಒಂದು ಶಾಸನವು ಮಲ್ಲಿಸೆಟ್ಟಿ ಮತ್ತು ವೀರಿಸೆಟ್ಟಿ "ಪಟ್ಟಣಸ್ವಾಮಿ"ಗಳೆಂದು ತಿಳಿಸುತ್ತದೆ.[5] ಹಿಂದೆ ವಿಜಯನಗರದ ಉಪನಗರಗಳಾದ ತಿರುಮಲದೇವಿಯರ ಪಟ್ಟಣ, ವರದರಾಜಮ್ಮನ ಪಟ್ಟಣ ಮತ್ತು ಕೃಷ್ಣಾಪುರದಲ್ಲಿ ಸೆಟ್ಟಿಪಟ್ಟಣ ಸ್ವಾಮಿಗಳು ಇದ್ದರೆಂದು ಈಗಾಗಲೇ ತಿಳಿಸಿದ್ದೇವೆ.[6] ಕೆಳದಿ ಸೀಮೆಯಲ್ಲಿ ಕಳಸೆ ಪಟ್ಟಣದಲ್ಲಿ ಒಂದಕ್ಕಿಂತ ಹೆಚ್ಚಿನ "ಪಟ್ಟಣ ಸ್ವಾಮಿ"ಗಳಿದ್ದರು.[7]

**ಪಟ್ಟಣಸ್ವಾಮಿಯ ಸಂಭಾವನೆ ಮತ್ತು ಕರ್ತವ್ಯಗಳು :** ಅವನ ಮುಖ್ಯ ವರಮಾನ, "ಮಾನ್ಯ" ಭೂಮಿಯಾಗಿದ್ದಿತು. ಕ್ರಿ.ಶ. ೧೩೬೨ ರಲ್ಲಿ ಕೈವಾರ ಸಂತೆಯ ಪಟ್ಟಣಸ್ವಾಮಿ ಪೆರಿಯನಾಯಕನಿಗೆ ಸಮಸ್ತ ತೆರಿಗೆಗಳನ್ನೂ ಮಾಫಿ ಮಾಡಿ ಭೂಮಿಯನ್ನು ಕೊಡಲಾಯಿತು.[8] ಕ್ರಿ.ಶ. ೧೪೧೨ ರಲ್ಲಿ ದಂಡಿ ಸೆಟ್ಟಿ ಮತ್ತು ತಿರುಮಲಸೆಟ್ಟಿ, ಸುಂಕದಿಂದ ರಿಯಾಯಿತಿ ಪಡೆದ "ಮಾನ್ಯ" ಭೂಮಿಯನ್ನು ಪಡೆದರು.[9] ಕ್ರಿ.ಶ. ೧೪೨೬ ರಲ್ಲಿ ಬುಡಪಸೆಟ್ಟಿ ಪಟ್ಟಣ ಸ್ವಾಮಿತನವನ್ನು "ಮಾನ್ಯ" ಸಹಿತ ಪಡೆದನು.[10] ಕ್ರಿ.ಶ. ೧೪೩೦ರಲ್ಲಿ ಮಾರಗಲ್ ಚಿಯಿಬಸ್ಸಿ ಸೆಟ್ಟಿ ಭೂಮಿಯನ್ನು ಪಡೆದನು.[11] ಕ್ರಿ.ಶ. ೧೫೫೪ರಲ್ಲಿ ವಿಠ್ಠಣ್ಣ ನಾಯಕ "ಪಟ್ಟಣಸ್ವಾಮಿ"ಗೆ (ಹೆಸರನ್ನು ಸೂಚಿಸಿಲ್ಲ) ಭೂಮಿಯನ್ನು ಕೊಟ್ಟನು.[12]

---

1. Dikshit: *op.cit.* pp. 156–157.
2. Appadorai: *op.cit.*, I, p. 386.
3. Mahalingam: *Economic Life*, p. 32.
4. *EC*, IX, An. 44.
5. *EC*, XI, Hk. 17.
6. *SII*, IX (ii), No. 573.
7. *MAR*, 1930, No. 60.
8. *EC*, X, Ct. 95.
9. *EC*, IX, An. 44.
10. *EC*, X, Bp. 83.
11. *Ibid.*, 152.
12. *EC*, VI, Tk. 69.

"ಪಟ್ಟಣಸ್ವಾಮಿಯ" ಮುಖ್ಯ ಕರ್ತವ್ಯಗಳು, ಪೌರಾಧ್ಯಕ್ಷತೆ ಮತ್ತು ಸಂತೆಯ ಉಸ್ತುವಾರಿಗಳಾಗಿದ್ದುವು. ಸಂತೆಯ ವೆಚ್ಚವನ್ನು ಸುಂಕಗಳ ವಸೂಲಿಯಿಂದ ಪೂರೈಸುತ್ತಿದ್ದನು ಮತ್ತು ಅದು ಅವನ ಮತ್ತೊಂದು ವರಮಾನವಾಗಿತ್ತು. ಕ್ರಿ.ಶ. ೧೩೭೦ರ ಒಂದು ಶಾಸನವು; ರಾಮೇಶ್ವರ ಗ್ರಾಮದಲ್ಲಿ ಸಂತೆಯು ಸ್ಥಾಪಿಸಲ್ಪಟ್ಟು, ಅಲ್ಲಿಗೆ ಬರುತ್ತಿದ್ದ ಸಗಟು ಧಾನ್ಯಗಳು ಒಂದು ವರ್ಷ ಕಾಲ ಯಾವ ತೆರಿಗೆಯನ್ನು ಕೊಡಬೇಕಾಗಿರಲಿಲ್ಲವೆಂದು ತಿಳಿಸುತ್ತದೆ. ಅನಂತರ ಇತರ ತೆರಿಗೆಗಳೊಡನೆ "ಸ್ವಾಮಿತನ"ದ ತೆರಿಗೆ ಮತ್ತು ಐವರು "ಸೆಟ್ಟಿಗಳ" ತೆರಿಗೆಗಳನ್ನು ವಿಧಿಸಬೇಕಾಗಿತ್ತು.[1] "ಪಟ್ಟಣಸ್ವಾಮಿ" ವಸೂಲುಮಾಡುತ್ತಿದ್ದ ಸಂತೆಯ ಸುಂಕವನ್ನು ಸ್ಥಳೀಯ ದೇವರ ಸೇವಕ ದಾನಮಾಡಿ ದುದಕ್ಕೆ ಅನೇಕ ದಾಖಲೆಗಳಿವೆ.[2]

**ಕಂದಾಯದ ವಿಷಯಗಳಲ್ಲಿ "ಪಟ್ಟಣಸ್ವಾಮಿ"ಯ ಅಧಿಕಾರ :** "ಸೆಟ್ಟಿಪಟ್ಟಣಸ್ವಾಮಿ" ಕಂದಾಯದ ವಿಚಾರದಲ್ಲಿ ಅಧಿಕಾರಹೊಂದಿದ್ದನೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಕ್ರಿ.ಶ. ೧೫೨೫ರಲ್ಲಿ ಧಾರಾಪುರದ ಲಿಂಗರಸ "ಸೆಟ್ಟಿಗಳು" ಮತ್ತು ವೆಲುಪದಿಗೆಯಲ್ಲಿ (ಕೃಷ್ಣರಾಯಪುರ) ವಾಸಿಸುತ್ತಿದ್ದ ಸ್ಥಳೀಯ ಮತ್ತು ಹೊರಗಿನ ವರ್ತಕರು, ರಾಜನ ಹೆಸರಿನಲ್ಲಿ ಪ್ರಾರಂಭಿಸಿದ ಪೇಟೆಬೀದಿಯಲ್ಲಿನ ತೆರಿಗೆಗಳನ್ನು ನಿರ್ಧರಿಸಿ ಆಜ್ಞೆಮಾಡಿದರು. ಈ ಆಜ್ಞೆಯ ಪ್ರಕಾರ ಮೊದಲಿನ ಮೂರು ವರ್ಷಗಳಲ್ಲಿ ಯಾವ ತೆರಿಗೆಗಳನ್ನೂ ಹಾಕಬಾರದು. ಅನಂತರ ಪ್ರತಿ ಎಣ್ಣೆಗಾಣಕ್ಕೆ ಒಂದು ವರಹ, ನೇಯುವ ಮಗ್ಗಕ್ಕೆ ಮೂರು ಪಣಗಳು, ಅಂಗಡಿಯೊಂದಕ್ಕೆ ಮೂರು ಪಣಗಳು, ಸಣ್ಣಪುಟ್ಟ ಸಾಮಾನುಗಳ ಅಂಗಡಿಯೊಂದಕ್ಕೆ ಒಂದು ಪಣ ಇವೆಲ್ಲವನ್ನು ವರ್ಷಕ್ಕೊಂದುಸಲ ವಸೂಲು ಮಾಡಬೇಕಾಗಿತ್ತು.[3] ಇದೇ ರೀತಿ ಕ್ರಿ.ಶ. ೧೫೩೫ರಲ್ಲಿ ಪ್ರಧಾನ ತಿರುಮಲರಾಯನ ನಿಯೋಗಿ ಅಬ್ಬರಾಜ ತಿಮ್ಮಪ್ಪ, ವಿಜಯನಗರದ ಉಪನಗರಗಳಾಗಿದ್ದ ತಿರುಮಲದೇವಿಯರ ಪಟ್ಟಣ, ವರದರಾಜಮ್ಮನ ಪಟ್ಟಣ ಮತ್ತು ಕೃಷ್ಣಪುರದ "ಸೆಟ್ಟಿಪಟ್ಟಣಸ್ವಾಮಿ"ಗಳ ಅನುಮತಿಯಿಂದ "ಮೂಲವಿಸ"ವನ್ನು (ಒಂದು ತೆರಿಗೆ) ದಾನಮಾಡಿದನು.[4] ಈ ಶಾಸನಗಳಿಂದ "ಸೆಟ್ಟಿಪಟ್ಟಣಸ್ವಾಮಿ"ಗಳು ತೆರಿಗೆ ವಸೂಲಿಯ ಕರ್ತವ್ಯವಲ್ಲದೆ, ಕಂದಾಯದ ಆಡಳಿತವನ್ನು ಹೊಂದಿದ್ದರೆಂದು ತಿಳಿಯುತ್ತದೆ. ಪಟ್ಟಣದ ಮತ್ತೊಬ್ಬ ಅಧಿಕಾರಿಯಾಗಿದ್ದ "ಸೇನಬೋವ", "ಸೆಟ್ಟಿಪಟ್ಟಣಸ್ವಾಮಿ"ಗೆ ಸಹಾಯ ಮಾಡುತ್ತಿದ್ದನು.

"ಪಟ್ಟಣಸ್ವಾಮಿ" ಸಂತೆಗಳಲ್ಲಿ ಸುಂಕವನ್ನು ವಿಧಿಸುತ್ತಿದ್ದನು ಮತ್ತು ವಸೂಲು ಮಾಡುತ್ತಿದ್ದನು. ಕ್ರಿ.ಶ. ೧೫೩೮ರ ಒಂದು ಶಾಸನವು ವೀರಣ್ಣನಾಯಕ, ಪ್ರತಿ

1. *EC*, X, Sd. 112
2. *SII*, IX (ii), No. 523; *Ibid.*, No. 530 and 584
3. *Ibid.*, No. 516
4. *Ibid.*, No. 573

ಶುಕ್ರವಾರ ಲಕ್ಷ್ಮಣಪುರದಲ್ಲಿ ನಡೆಯುತ್ತಿದ್ದ ಸಂತೆಯಲ್ಲಿ "ಸೆಟ್ಟಿ"ಗಳು ಮತ್ತು "ಪಟ್ಟಣ ಸ್ವಾಮಿಗಳು ವಸೂಲುಮಾಡುತ್ತಿದ್ದ ಸುಂಕ ಮತ್ತು ಇತರ ವರಮಾನವನ್ನು ಹರುಹೆ ಲಕ್ಷ್ಮಣಪುರದ ಮಹಾಲಕ್ಷ್ಮಿದೇವಿದೇವತೆಯ ಸೇವೆಗೆ ದಾನಮಾಡಿದನೆಂದು ತಿಳಿಸುತ್ತದೆ.[1] ಶಾಸನಗಳು ಸಂತೆಗಳ ಸುಂಕವನ್ನು ದೇವಸ್ಥಾನಗಳಲ್ಲಿ ಸೇವೆಗೆ ದಾನಮಾಡಿದುದನ್ನು ತಿಳಿಸುತ್ತವೆ. ಕ್ರಿ.ಶ. ೧೩೭೮ರಲ್ಲಿ ಎಲಬರಿಗೆ ಮಲ್ಲಪಣ್ಣ ಒಂದು ಅಂಗಡಿಯನ್ನು ಕಟ್ಟಿಸಿ, ಅದನ್ನು ಮಲಪುರದ ಸಂತೆಯ ಸುಂಕದ ವರಮಾನದೊಡನೆ ಸೂರ್ಯನಾರಾಯಣದೇವ ದೇವರಿಗೆ ದಾನಮಾಡಿದನು.[2] ಕ್ರಿ.ಶ. ೧೫೨೯–೩೦ರಲ್ಲಿ ವಿಜಯವಿರೂಪಪುರ (ಹೊಸ ಪೇಟೆ ತಾಲ್ಲೂಕಿನ ಕಂಪ್ಲಿ) ಪೇಟೆಬೀದಿಯಲ್ಲಿ ವಸೂಲುಮಾಡುತ್ತಿದ್ದ ಕಂದಾಯವನ್ನು ಮಲ್ಲಿಕಾರ್ಜುನ ದೇವರ ಸೇವೆಗೆ ದಾನಮಾಡಲಾಯಿತು.[3] ಕ್ರಿ.ಶ. ೧೫೩೦ರಲ್ಲಿ ಆ ಸಂತೆ ಯಲ್ಲಿ ವಸೂಲು ಮಾಡುತ್ತಿದ್ದ ಸುಂಕವನ್ನು ಭೈರವದೇವರ ಸೇವೆಗೆ ದಾನಮಾಡ ಲಾಯಿತು.[4] ಕ್ರಿ.ಶ. ೧೫೪೫ರಲ್ಲಿ ಕೊನೇಟಿ ತಿಮ್ಮರಾಜ ರವುದೂರ್ ಸುಂಕವನ್ನು ವಿಠಲದೇವರ ನೈವೇದ್ಯಕ್ಕೆ ದಾನಮಾಡಿದನು.[5]

**ಭೂದಾನಗಳಲ್ಲಿ ಪಟ್ಟಣ ಸ್ವಾಮಿಯ ಅಧಿಕಾರ:** ಭೂದಾನ ಮಾಡುವಾಗ "ಪಟ್ಟಣಸ್ವಾಮಿ"ಯ ಒಪ್ಪಿಗೆಯನ್ನು ಪಡೆಯಲಾಗುತ್ತಿತ್ತು. ಕ್ರಿ.ಶ. ೧೫೪೫ರಲ್ಲಿ ಗೌಡ, ಸೇನಬೋವ ಮತ್ತು "ಪಟ್ಟಣಸ್ವಾಮಿ"ಗಳ ಸಮ್ಮತಿಯಿಂದ ರಾಮರಾಜಯ ಕುರಿಗೋಡು ಬಸ್ತಿಯ ಜಿನದೇವರ ಸೇವೆಗೆ ಭೂದಾನಮಾಡಿದನು.[6] ಅದೇ ರೀತಿ ನಿಡುಗಲ್ಲ ಸೀಮೆಯ ಗೌಡ ಸೇನಬೋವರು "ಸೆಟ್ಟಿಪಟ್ಟಣಸ್ವಾಮಿ"ಗಳೊಡನೆ ನಿಡುಗಲ್ ರಾಜ್ಯದ ತಿಮುಕುಂಟೆ ಗ್ರಾಮವನ್ನು ಪೆಯಲಬಂದೆ ತಿರುವೇಂಗಳನಾಥ ದೇವರ ಸೇವೆಗೆ ದಾನ ಮಾಡಿದರು.[7]

ಕ್ರಿ.ಶ. ೧೩೬೭ರ ಕಂಪಣ್ಣ ಒಡೆಯರ ಕಾಲದ ಒಂದು ಶಾಸನವು, ಬಂಡೆಹಳ್ಳಿ ಗ್ರಾಮಗಳ ಭೂಮಿಯನ್ನು ಮತ್ತು ಸುಂಕದ ಒಂದು ಭಾಗವನ್ನು ನಾಡು, ನಗರ ಮತ್ತು ನಾನಾ ದೇಶಿಗಳ ಸಮ್ಮತಿಯಿಂದ ಮೋಡೆಹಳ್ಳಿ ಮಲ್ಲಿನಾಥ ದೇವರ ಸೇವೆಗೆ ದಾನಮಾಡಿದ ರೆಂದು ತಿಳಿಸುತ್ತದೆ. ಈ ಶಾಸನದಿಂದ ನಾನಾ ದೇಶಿಗಳು ಮತ್ತು ನಗರ ಕಂದಾಯದ ವಿಚಾರದಲ್ಲಿ ಮತ್ತು ಭೂದಾನ ಮಾಡುವುದರಲ್ಲಿ ಅಭಿಪ್ರಾಯ ಕೊಡುವ ಹಕ್ಕನ್ನು ಹೊಂದಿದ್ದರೆಂದು ತಿಳಿಯುತ್ತದೆ.[8] ಕ್ರಿ.ಶ. ೧೫೪೭ರ ಒಂದು ಶಾಸನವು ಹರಗಲ ಸೀಮೆ

1. *Ibid.*, No. 534
2. *Ibid.*, No. 533
3. *Ibid.*, No. 530.
4. *Ibid.*, No. 532.
5. *Ibid.*, No. 616.
6. *Ibid.*, No. 618.
7. *Ibid.*, No. 666.
8. *Ibid.*, No. 411.

ಅಮ್ಮಿನಭಾವಿ ಪ್ರದೇಶದ ನಾಯಿಂದರಿಗೆ, ತಿಮ್ಮೋಜ, ಕೊಂಡೋಜ ಮತ್ತು ಭದ್ರೋಜ ರವರ ಅರಿಕೆಯ ಮೇಲೆ ಮಹಾಮಂಡಲೇಶ್ವರ ಶ್ರೀರಂಗರಾಜ ಮತ್ತು ರಾಮರಾಜ ತೆರಿಗೆ ಗಳನ್ನು ರದ್ದು ಮಾಡಿದರೆಂದು ದಾಖಲೆ ಮಾಡಿದೆ. ಈ ಆಜ್ಞೆಯನ್ನು "ಸೆಟ್ಟಿಪಟ್ಟಣ ಸ್ವಾಮಿ"ಗೆ ತಿಳಿಸಲಾಯಿತು.[1]

**ಬಿರುದುಗಳು ಮತ್ತು ಗೌರವಗಳನ್ನು ನೀಡುವ ಅಧಿಕಾರ :** ಕ್ರಿ.ಶ. ೧೩೬೨ರ ಬೇಲೂರಿನ ಒಂದು ಶಾಸನವು, ಅನೇಕ ಪಟ್ಟಣಗಳ ವರ್ತಕರು ಮತ್ತು ರೈತರು ಸಭೆ ಸೇರಿ ಪ್ರಸಿದ್ಧ ಸೇನಾನಿ ಮುದ್ದಣ್ಣ ದಣ್ಣಾಯಕನಿಗೆ, ಆತನು ರಾಜ್ಯದಲ್ಲೆಲ್ಲ ವಾಣಿಜ್ಯಕ್ಕೆ ಕೊಟ್ಟ ರಕ್ಷಣೆಗೆ ಪ್ರತಿಯಾಗಿ "ಪೃಥ್ವೀಸೆಟ್ಟಿತನ" (ಪೌರಸಭಾಧ್ಯಕ್ಷ) ವೆಂಬ ಬಿರುದನ್ನು ನೀಡಿದರೆಂದು ತಿಳಿಸುತ್ತದೆ.[2] ಇದು ಪಟ್ಟಣಗಳ ಎಲ್ಲ ವರ್ತಕರು ಸಾಮೂಹಿಕವಾಗಿ ವಾಣಿಜ್ಯಕ್ಕೆ ಕೊಟ್ಟ ರಕ್ಷಣೆಗೆ ಮನ್ನಣೆ ಕೊಡಲು ಸೇರಿದ ಸಭೆ.

**ಪೌರಸಭೆ; ನಗರ :** ಈ ಮೊದಲೇ ತಿಳಿಸಿರುವ ಹಾಗೆ ಪಟ್ಟಣ ಅಥವಾ ನಗರ ಒಂದು ಆಡಳಿತ ವಿಭಾಗವಾಗಿದ್ದಿತು. "ನಗರ" ಎಂಬ ಪದವನ್ನು ಪೌರಸಭೆಯನ್ನು ಸೂಚಿಸಲೂ ಉಪಯೋಗಿಸಲಾಗುತ್ತಿತ್ತು. ಪೌರಸಭೆಯನ್ನು ಸೂಚಿಸುವುದಕ್ಕೆ ನಕರ, ನಖರ, ನಗರಸಮೂಹ ಅಥವಾ ಸಮೂಹ ಎಂಬ ಪದಗಳನ್ನು ಉಪಯೋಗಿಸ ಲಾಗುತ್ತಿತ್ತು. ಕ್ರಿ.ಶ. ೧೩೬೮ರ, ಒಂದು ಶಾಸನದ ಪ್ರಕಾರ ಮೋಡಿಹಳ್ಳಿಯ ಮಲ್ಲಿನಾಥ ದೇವರ ಸೇವೆಗೆ ಭೂದಾನ ಮತ್ತು ಸುಂಕದ ಒಂದು ಭಾಗವನ್ನು ದಾನಮಾಡಲು "ನಗರ"ದ ಒಪ್ಪಿಗೆಯನ್ನು ತೆಗೆದುಕೊಳ್ಳಲಾಯಿತು. ಇಲ್ಲಿ "ನಗರ" ಎಂಬ ಪದವು ಪೌರಸಭೆಯನ್ನು ಸೂಚಿಸುತ್ತದೆ. "ಪಟ್ಟಣಸ್ವಾಮಿ" ಪೌರಸಭಾಧ್ಯಕ್ಷನಾಗಿರುತ್ತಿದ್ದನು.[3] ಕ್ರಿ.ಶ. ೧೪೩೮ರ ಮಲೂರಿನ ಒಂದು ಶಾಸನವು ತೆಕಲ್ ನಗರದ "ಪಟ್ಟಣಸ್ವಾಮಿ" ಸಿಂಗರಾಜ, ಆ ನಗರದ ಸುತ್ತ ಎರಡು ಸುತ್ತು ಕೋಟೆಗಳನ್ನು ಮತ್ತು ಅನೇಕ ಕಟ್ಟಡ ನಿರ್ಮಾಣ ಚಟುವಟಿಕೆಗಳನ್ನು ಕೈಗೊಂಡನೆಂದು ತಿಳಿಸುತ್ತದೆ.[4] ಈ ಸಂದರ್ಭದಲ್ಲಿ ಕ್ರಿ.ಶ. ೧೭೦೦ರಲ್ಲೂ "ಪಟ್ಟಣಸ್ವಾಮಿ" ಹುದ್ದೆ ಅಸ್ತಿತ್ವದಲ್ಲಿದ್ದಿತೆಂದು ನೆನೆಸಿಕೊಳ್ಳ ಬಹುದು. ಆ ವರ್ಷದ ಬೇಲೂರಿನ ಒಂದು ಶಾಸನವು, ಬೇಲೂರಿನ ವರ್ತಕರು (ಪೌರ ಸಭಾಧ್ಯಕ್ಷ) "ಸೆಟ್ಟಿಪಟ್ಟಣಸ್ವಾಮಿ" ಮತ್ತು ದೇವಾಲಯದ ಅರ್ಚಕರು ದೋಬಿ ಕೋಮಿನವರಿಗೆ ಒಂದು ಶಾಸನವನ್ನು ದಾಖಲೆಮಾಡಿದೆ.[5] ಪಟ್ಟಣ ಸಮುದಾಯವು ಭೈರಾದೇವಿಯ ಮರಣ ಸ್ಮಾರಕವಾಗಿ ಒಂದು ಶಾಸನವನ್ನು ಮಾಡಿತು.[6]

---

1. Bombay-*Karnatak Inscriptions*, II, No. 257.
2. *EC*, V, Bl. 75.
3. *SII*, IX (ii) No. 411.
4. *EC*, X, Mr. 4.
5. *Ibid.*, Bl. 6.
6. Panchamukhi : *Karnatak Inscriptions*, I vol, No. 39 of 1939-40.

ಪೌರಸಭೆ ಒಂದು ಪ್ರತಿನಿಧಿ ಸಂಸ್ಥೆಯಾಗಿದ್ದು ಸ್ಥಳೀಯ ಜನರ ಹಿತವನ್ನು ರಕ್ಷಿಸುತ್ತಿದ್ದಿತು. ಸರ್ಕಾರದ ಉನ್ನತ ಅಧಿಕಾರಿಗಳು ಸಾಮಾನ್ಯವಾಗಿ ಸಭೆಯ ಹಕ್ಕುಗಳನ್ನು ಚ್ಯುತಿಗೊಳಿಸಲು ತಮ್ಮ ಅಧಿಕಾರವನ್ನು ಚಲಾಯಿಸುತ್ತಿರಲಿಲ್ಲ. ತೆರಿಗೆಗಳ ರಿಯಾಯಿತಿ ಅಥವಾ ಅವುಗಳ ದಾನ ಪೌರಸಭೆಯ ಸಮ್ಮತಿಯಿಂದ ಆಗುತ್ತಿದ್ದಿತು. ಅದರ ಸದಸ್ಯರಲ್ಲಿ ಒಮ್ಮತ ಮನೋಭಾವ ಇದ್ದಿತು.[1] ಅದರ ಸದಸ್ಯರನ್ನು ಅನೇಕ ವೇಳೆ "ನಗರತ್ತಾರ್" ಎಂದು ಕರೆಯಲಾಗುತ್ತಿದ್ದಿತು.[2] "ನಗರ ಕರಣತ್ತೂರ್"[3] (ಲೆಕ್ಕಿಗರು) ಮತ್ತು "ನಗರ ಮಧ್ಯಸ್ತ", ನಗರದ ಅಧಿಕಾರಿಗಳಲ್ಲಿ ಸೇರಿದ್ದರು.[4]

ಆ ಕಾಲದ ತೆಲಗು ದಾಖಲೆಗಳು "ನಗರಮು", "ನಖರಮು", "ನಕರಮು" ಎಂಬ ವರ್ತಕರ ಸಂಸ್ಥೆಗಳನ್ನು ಹೆಸರಿಸಿವೆ. "ನಗರಮು" ಸದಸ್ಯರು ವೈಯುಕ್ತಿಕವಾಗಿ ಮತ್ತು ಸಾಮೂಹಿಕವಾಗಿ "ನಗರೇಶ್ವರ" ಅಥವಾ "ನಕರೇಶ್ವರಪಾದ-ಪದ್ಮಾರಾಧಕುಲು" ಅಂದರೆ, ನಗರೇಶ್ವರ ಅಥವಾ ನಕರೇಶ್ವರ ದೇವರ ಪವಿತ್ರ ಪಾದಗಳನ್ನು ಪೂಜಿಸುವವರು ಎಂದು ಕರೆದುಕೊಳ್ಳುತ್ತಾರೆ.[5] ಕ್ರಿ.ಶ. ೧೪೦೨ರಲ್ಲಿ ಹಲವು ಸೆಟ್ಟಿಗಳು ನಗರೇಶ್ವರ ದೇವರ ಪೂಜೆ, ಉತ್ಸವಗಳು ಮತ್ತು ಎಲ್ಲ ವ್ರತಗಳಿಗೆ ದಾನ ಒಂದನ್ನು ಕೊಡಲು ಒಪ್ಪಿದರು.[6] ಕ್ರಿ.ಶ. ೧೪೩೩ರಲ್ಲಿ ಈಸರಸೆಟ್ಟಿ ಎಂಬುವನು ನಖರೇಶ್ವರ ದೇವರ ಮುಂದೆ ಶಾಶ್ವತವಾದ ಒಂದು ದೀಪಕ್ಕೆ ಮತ್ತು ನಿರ್ದಿಷ್ಟಸಂಖ್ಯೆಯ ಬ್ರಾಹ್ಮಣರಿಗೆ ದೇವಸ್ಥಾನದಲ್ಲಿ ವಿಶೇಷ ದಿನಗಳಲ್ಲಿ ಆಹಾರ ಕೊಡಲು ಭೂದಾನಮಾಡಿದನು.[7] "ನಗರಮು" ಅಥವಾ "ನಖರಮು" ದೇವರ ಪ್ರತಿಷ್ಠಾಪನೆ ಮಾಡುತ್ತಿದ್ದುದರಿಂದ ದೇವರನ್ನು "ನಗರೇಶ್ವರ" ಅಥವಾ "ನಖರೇಶ್ವರ" ಎಂದು ಕರೆಯುತ್ತಿದ್ದರು.

ಭಾಸ್ಕರಾಚಾರ್ಯರ ವೈಶ್ಯಪುರಾಣ ಸುಮಾರು ಕ್ರಿ.ಶ. ೧೫೦೮ರಲ್ಲಿ ಬರೆದ ತೆಲಗು ಕಾವ್ಯ. ಈ ಕೃತಿಯ ಪ್ರಕಾರ "ನಗರ", ಸಂಸ್ಥೆಗಳು ಅನೇಕ ಪಟ್ಟಣಗಳಲ್ಲಿ ಮತ್ತು ನಗರಗಳಲ್ಲಿ ಅಸ್ತಿತ್ವದಲ್ಲಿದ್ದಿತು ಮತ್ತು ರಾಷ್ಟ್ರದಲ್ಲೆಲ್ಲಾ ವ್ಯಾಪಿಸಿದ್ದ ಒಂದು ದೊಡ್ಡ ಸಂಸ್ಥೆಯಾಗಿ ವ್ಯವಸ್ಥಿತವಾಗಿದ್ದಿತು. "ನಗರ" ಸಂಸ್ಥೆಗಳು ೧೮ ಸ್ಥಳಗಳಲ್ಲಿದ್ದುವು. ಅವುಗಳಾವುವೆಂದರೆ: ಧರ್ಮ, ದನದ, ಪಾಂಚಾಲ, ನಿರೆವದ್ಯ, ಜಗನ್ನಾಥ, ಕ್ಷೀರಕಾಸಾರ, ದೆಂದುಲೂರು, ಇಲಾ, ಘಂಟಸಾಲ, ತ್ರಿಗುಣಿತಭೀಮ (ಮೂರು ಭೀಮಾವರಂಗಳು), ವಿಶಾಖ, ಕಳಿಂಗ, ನೃಸಿಂಹ, ವೀರನಾರಾಯಣ, ಆಚಂತ ಮತ್ತು ಪೆನುಗೊಂಡ.[8]

---

1. Mahalingam: *SIP*, p. 394.
2. *SII*, VIII, No. 68.
3. *SII*, XX, No. 592.
4. *Ibid.*, No. 592; *Ibid.*, VII, No. 1031.
5. *Ibid.*, X, No. 429.
6. *EC*, IX, Bn. 96.
7. *SII*, X, No. 429.
8. Bhaskaracharya, Vaisyapuranamu (Madras, 1229), V, Pr. 36, p. 46.

"ನಗರಮು" ಒಂದು "ದೇಶದ" ಒಂದು ವಿಭಾಗವಾಗಿದ್ದಂತೆ ಕಾಣುತ್ತದೆ. "ದೇಶ" ಅಥವಾ "ಜಿಲ್ಲೆ" ಆ ಕಾಲದಲ್ಲಿ ಒಂದು ಪ್ರಾದೇಶಿಕ ವಿಭಾಗವಾಗಿದ್ದಿತು. ಪೆನುಗೊಂಡ ಅವರ ಮುಖ್ಯ ನಗರ ಮತ್ತು ಪ್ರಧಾನ ಕಛೇರಿ ಇದ್ದ ಸ್ಥಳವಾಗಿತ್ತು. ನಮಗೆ ಪೆನುಗೊಂಡದ ವಿವರಣೆ ಸಿಗುತ್ತದೆ.[1] ಇತರ ೧೭ ಸ್ಥಳಗಳು "ಗ್ರಾಸಗ್ರಾಮ" ಅಥವಾ ಬೆಂಬಲಿಗ ಗ್ರಾಮಗಳಾಗಿದ್ದುವು. "ನಗರಮು" ವ್ಯಾಪಾರಶ್ರೇಣಿಗಳ ಸಂಯುಕ್ತ ಸಂಘವಾಗಿದ್ದಿತು.

ನಗರದ ಶಾಖೆಯ ಆಡಳಿತವು ಒಂದು ಮಂಡಲಿಯ ಹತೋಟಿಯಲ್ಲಿದ್ದು ಅದರ ಸದಸ್ಯರನ್ನು "ನಗರ ಸ್ವಾಮುಲು" ಅಥವಾ "ಪಟ್ಟಣ ಸ್ವಾಮುಲು" ಅಥವಾ "ನಗರೇಶ್ವರ" ಎಂದು ಕರೆಯಲಾಗುತ್ತಿತ್ತು.[2] ಮಂಡಲಿಯು "ನಗರೇಶ್ವರನ" ಅರಮನೆಯಲ್ಲಿ ಸೇರುತ್ತಿದ್ದು ಸದಸ್ಯರು ಸರಿಯಾಗಿ ಆಸನಾರೂಢರಾಗುತ್ತಿದ್ದರು.[3] ಸಭಾಂಗಣವನ್ನು "ಮುಖಮಂಟಪ" ಎಂದು ಕರೆಯುತ್ತಿದ್ದರು.[4] ಸಭೆಗೆ ಹಾಜರಿರಲು ೧೮ ಸ್ಥಳಗಳ "ನಗರಸ್ವಾಮಿ"ಗಳಿಗೆ ಆಹ್ವಾನವೀಯಲಾಗುತ್ತಿತ್ತು.[5] ಆಹ್ವಾನಗಳನ್ನು ಗುಪ್ತನಿಯೋಗಿಗಳ ಮುಖಾಂತರ ಕಳುಹಿಸಲಾಗುತ್ತಿತ್ತು.[6] ಮುಖಮಂಟಪಕ್ಕೆ ಬರದಿದ್ದ ಸದಸ್ಯರನ್ನು ಹೊರದೂಡಬಹುದಾಗಿತ್ತು.[7] "ಧರ್ಮ"ದ ವಿಚಾರವಾಗಿ ತೀರ್ಮಾನ ಕೈಗೊಳ್ಳುತ್ತಿದ್ದ ಸಭೆಯನ್ನು "ಧರ್ಮಸಭೆ"ಗಳೆಂದು ಕರೆಯುತ್ತಿದ್ದರು.[8] ಪ್ರಧಾನ ಕಚೇರಿ ಇದ್ದ ನಗರದ "ನಗರಸ್ವಾಮುಲು" ಮಂಡಲಿಯ ನಾಯಕನು ಎಲ್ಲ ನಗರಗಳ ಮಂಡಲಿಗಳ ಅಧ್ಯಕ್ಷನಾಗಿದ್ದನು. ಅವನನ್ನು "ಮಹಿಮಸೆಟ್ಟಿ" ಎಂದು ಕರೆಯುತ್ತಿದ್ದರು. ಅವನಿಗೆ ವೀಳ್ಯವನ್ನು ಸ್ವೀಕರಿಸುವ ಗೌರವದ ಹಕ್ಕಿತ್ತು.[9] ಸಭೆಯಲ್ಲಿ ೧೮ ಸ್ಥಳಗಳಿಗೆ ಸೇರಿದ ೧೫೦ "ನಗರಸ್ವಾಮಿ"ಗಳಿದ್ದರು.[10] ಸಮಯಮಂತ್ರಿಯ ಕರ್ತವ್ಯ ಸಭೆಯ ಏರ್ಪಾಡುಮಾಡುವುದಾಗಿದ್ದಿತು.[11]

**ಬಿದಿರೆ :** ಮೂಡಬಿದಿರೆ ಗ್ರಾಮವು ಮಂಗಳೂರಿನಿಂದ ಈಶಾನ್ಯಕ್ಕೆ ೨೮ ಮೈಲಿಗಳ ದೂರದಲ್ಲಿ ಬೆಟ್ಟಗಳ ಮೇಲಿದೆ. ಶಾಸನಗಳ ಪ್ರಕಾರ ಅದನ್ನು ಬಿದಿರೆ, ನಗರ, ವಂಶಪುರ ಮತ್ತು ವೇಣುಪುರ ಎಂದು ಕರೆಯುತ್ತಿದ್ದು, ಅದು ಮಂಗಳೂರು ರಾಜ್ಯಕ್ಕೆ ಸೇರಿದ್ದಿತು.

1. *Ibd.*, V. 13-71.
2. *Ibid.*, IV. (ii), 79; VIII, V. 108, iii
3. *Ibid.*, VII, V. (iii).
4. *Ibid.*, VIII, V. 12.
5. *Ibid.*, VII. V. 108.
6. *Ibid.*,
7. *Ibid.*, VIII, V. 47.
8. *Ibid.*, I, V. 14.
9. *Ibid.*, VIII, V. 47.
10. *Ibid.*, V. 14.
11. *Ibid.*, VII, V. 108.

ಅದು ಜೈನಮತದ ಒಬ್ಬ ಮುಖ್ಯಪುರೋಹಿತನ ಪೀಠವಾಗಿದೆ ಮತ್ತು ಅಲ್ಲಿ ೧೬ಕ್ಕೆ ಕಡಮೆಯಿಲ್ಲದೆ ಜೈನಬಸ್ತಿಗಳಿವೆ. ಮೂಡಬಿದಿರೆಯಲ್ಲಿ ೮ "ಮನಿಸಸೆಟ್ಟಿಕಾರರು" ಮತ್ತು "ನಾಲ್ಕು ಎಳವೆಗಳು" ಇದ್ದರು.[1] ಕ್ರಿ.ಶ. ೧೪೭೬ರ[2] ಮತ್ತು ೧೫೭೧ರ[3] ಮೂಡಬಿದಿರೆಯ ಶಾಸನಗಳಲ್ಲಿ "ಮನಿಸಸೆಟ್ಟಿಕಾರರು", "ಪ್ರಜೆಸೆಟ್ಟಿಕಾರರು" ಮತ್ತು "ಮಂದಿಸೆಟ್ಟಿಕಾರರು" ಎಂದು ಹೇಳಲಾಗಿದೆ. ಮನಿಸ ಮತ್ತು ಮಂದಿ ಎಂಬ ಮೂರು ಪದಗಳ ಅರ್ಥ ಜನ ಎಂದು. ಅವರು (೮) ಹೊಯ್ಸಳರ ಕಾಲದಿಂದ ವಿಜಯನಗರಕಾಲದ ವರೆಗೆ ಬಿದಿರೆಯ "ಹಲರು" ಅಥವಾ ಸಭೆಯ ಕಾರ್ಯನಿರ್ವಾಹಕರಾಗಿದ್ದರು.

ತಲಕಾಡು : ತಲಕಾಡು ಪಟ್ಟಣದ ಆಡಳಿತವು ಒಬ್ಬ "ಸ್ಥಾನಪತಿಯ" ಹತೋಟಿಯಲ್ಲಿದ್ದಿತು. ಕ್ರಿ.ಶ. ೯೩೩ರಿಂದ ೧೩೩೪ರ ವರೆಗೆ ತಲಕಾಡಿನ ಪೌರವ್ಯವಸ್ಥೆಯಲ್ಲಿ ನಾಲ್ಕು "ಪಟ್ಟಣಸ್ವಾಮಿ"ಗಳು, ೨೫ ಸದಸ್ಯರನ್ನೊಳಗೊಂಡ ಮಂಡಲಿ ಪ್ರಜೆಗೌಡರೂ ಸಭೆಗೆ ಸೇರಿದ "ಮಹಾನಗರ" ಅಥವಾ "ಪೌರಸಭೆ", ಏಳು ಪುರಗಳು ಮತ್ತು ಪಂಚಮಠವನ್ನೊಳಗೊಂಡ ತಲಕಾಡು ಪಟ್ಟಣದ ಅಧಿಕಾರಿ ಒಬ್ಬ "ಸ್ಥಾನಪತಿ" ಸೇರಿದ್ದರು.[4]

ಕ್ರಿ.ಶ. ೧೪೦೬ರಲ್ಲಿ ಕುಂದಾಪುರದಲ್ಲಿ ಇಬ್ಬರು ಧಣಿಗಳು (ನಾಯಕರು) ಇತರರೊಡಗೂಡಿ ಅದೇ ಗ್ರಾಮದ ಒಂದು ನಿವೇಶನವನ್ನು ಕೊಂಡು, ಅದನ್ನು ದಾನ ಮಾಡಿದರು.[5]

ಕ್ರಿ.ಶ. ೧೩೬೬ರಲ್ಲಿ "ನಾಡು", "ನಗರ" ಮತ್ತು "ನಾನಾದೇಶಿ"ಗಳನ್ನೊಳಗೊಂಡ ಬಂಡೆಹಳ್ಳಿ ಮತ್ತು ವೋಡೆಹಳ್ಳಿ ಸಭೆಯನ್ನು ಹಿಂದೆಯೇ ತಿಳಿಸಲಾಗಿದೆ.[6]

ನಮ್ಮ "ನಗರ" ಅಥವಾ ಪೌರಸಭೆಯ ಅಧ್ಯಯನದಿಂದ ಆ ಸಭೆಯು ಈ ಕೆಳಗೆ ಕಂಡವರನ್ನೊಳಗೊಂಡಿತ್ತೆಂದು ತಿಳಿಯಬಹುದು—

(೧) "ನಗರ" ಅಥವಾ ಆ ಸ್ಥಳದ ವಿವಿಧಶ್ರೇಣಿಗಳು, (೨) ಹಲವು ಸಂದರ್ಭಗಳಲ್ಲಿ "ಪ್ರಜೆಗೌಂಡರು", (೩) "ಪುರಗಳು" ಮತ್ತು "ಬ್ರಹ್ಮಪುರಿಗಳು" (೪) ಮಠಗಳು, (೫) ಕಾರ್ಯನಿರ್ವಾಹಕ ಮಂಡಲಿ ಮತ್ತು (೬) ಪೌರಸಭಾಧಿಕಾರಿಗಳು.

### ಪಟ್ಟಣಗಳ ವಿಭಾಗಗಳು : ಕೇರಿಗಳು

ಬಾರಕೂರು : ಬಾರಕೂರು ನಗರವನ್ನು ೧೦ "ಕೇರಿ"ಗಳನ್ನಾಗಿ ವಿಭಾಗಿಸಿದ್ದು

1. *SII*, VII, No. 213.
2. *Ibid*., No. 209.
3. *Ibid*., No. 210.
4. *MAR*, 1911-12, p. 37; *EC*, III, Ml. 83, 99; *MAR*, 1917, p. 47; *Ibid*., 1920, p. 35, *EC*, III, Ml. 104 and 107.
5. *SII*, IX (ii), No. 430.
6. *SII*, IX (ii), No. 411

ದನ್ನು ಆ ಕಾಲದ ಶಾಸನಗಳು ತಿಳಿಸುತ್ತವೆ. ಬಾರಕೂರು ವ್ಯಾಪಾರ ಕೇಂದ್ರವಾಗಿದ್ದು ದಲ್ಲದೆ, ಬಾರಕೂರು ರಾಜ್ಯದ ಪ್ರಾಂತ್ಯಾಧಿಕಾರಿಯ ಪ್ರಧಾನ ಕೇಂದ್ರವಾಗಿತ್ತು. ವಿಜಯ ನಗರ ಕಾಲವಲ್ಲಿ ದಕ್ಷಿಣ ಕನ್ನಡದಲ್ಲಿ ಅತ್ಯಂತ ದೊಡ್ಡ ಪಟ್ಟಣವಾಗಿತ್ತು. ಎರಡನೆ ದೇವರಾಯನ ಕಾಲದ ಬಾರಕೂರಿನ ಕ್ರಿ.ಶ. ೧೪೩೦ರ ಒಂದು ಶಾಸನವು,[1] ಬಾರಕೂರಿನ ಮೂರು ಕೇರಿ ಮತ್ತು ಚೌಳಿಕೇರಿ ವ್ಯಾಪಾರ ಸಮುದಾಯಗಳ ಒಂದು ಒಪ್ಪಂದವನ್ನು ದಾಖಲೆ ಮಾಡಿದೆ. ಅಲ್ಲದೆ ಹೊರಗಿನ ವರ್ತಕರಿಗೆ (" ಪರದೇಶಿ–ಬೆವಹಾರಿಗಳು ") ಒಂದು ನಿರ್ದಿಷ್ಟ ಸ್ಥಳವನ್ನು ಮೀಸಲಾಗಿಟ್ಟಿರಬೇಕೆಂಬ ಒಂದು ಷರತ್ತು ಅದರಲ್ಲಿದೆ. ಈ ಸ್ಥಳದಲ್ಲಿ ಘಟ್ಟದಮೇಲಿನಿಂದ ತಂದ ಸಕ್ಕರೆ ಮೂಟೆಗಳನ್ನು ದಾಸ್ತಾನು ಮಾಡು ತ್ತಿದ್ದರು. ಈ ಶಾಸನದಲ್ಲಿ ಮಣಿಗಾರಕೇರಿ, ಹತ್ತುಕೇರಿ, ಕೋಟಕೇರಿ ಮತ್ತು ಪಡುವ ಕೇರಿಗಳಿಗೆ ಸೂಚನೆಗಳಿವೆ. ಪ್ರತಿ ಕೇರಿಯಲ್ಲೂ " ಸೆಟ್ಟಿಕಾರ ", " ನಖರ " ಮತ್ತು " ನಖರ ಹಂಜಮಾನ " ಎಂದು ಕರೆಯಲ್ಪಡುತ್ತಿದ್ದ ಶ್ರೇಣಿ ಇದ್ದಿತು.

ಬಸರೂರು ಪಡುವಕೇರಿ: ಬಸರೂರು ಮತ್ತೊಂದು ವ್ಯಾಪಾರ ಕೇಂದ್ರ ವಾಗಿದ್ದಿತು. ಅದನ್ನು ಕೇರಿಗಳನ್ನಾಗಿ ವಿಭಾಗಿಸಲಾಗಿತ್ತು. ಅವುಗಳಲ್ಲಿ ಶಾಸನಗಳು " ಪಡುವಕೇರಿ " ಮತ್ತು " ಮೂಡಕೇರಿ "ಗಳನ್ನು ಹೆಸರಿಸುತ್ತವೆ. ಆ ಕೇರಿಗಳಲ್ಲೂ ವ್ಯಾಪಾರಶ್ರೇಣಿಗಳಿದ್ದುವು. ಶಾಸನಗಳು ಬಸರೂರು ಪಡುವಕೇರಿ ವರ್ತಕರ ಚಟುವಟಿಕೆ ಗಳನ್ನು ತಿಳಿಸುತ್ತವೆ.

ಕ್ರಿ.ಶ. ೧೪೩೭ ರಲ್ಲಿ, ಬಳೆಗಾರ ಕೋಮಿನ ಬಲಬಿಜ್ಜಣ ಬೆಮ್ಮಶೆಟ್ಟಿ-ನಾರಣಶೆಟ್ಟಿ, ಬಸರೂರಿನ ಪಡುವಕೇರಿ ಮಠದಲ್ಲಿ ಬ್ರಾಹ್ಮಣರಿಗೆ ಆಹಾರ ಒದಗಿಸಲು ಭೂಮಿಯನ್ನು ದಾನಮಾಡಿದನು.[2] ಕ್ರಿ.ಶ. ೧೪೪೭ ರಲ್ಲಿ, ಕೋಟೆಯಣ್ಣ ಸೆಟ್ಟಿ ಬಸರೂರು ಪಡುವಕೇರಿ ಮಹದೇವ ದೇವರ ಸೇವೆಗೆ " ಹಲರು ಸೆಟ್ಟಿಕಾರರ ಸುಹಸ್ತದ ಒಪ್ಪದಿಂದ ಭೂಮಿಯನ್ನು ದಾನಮಾಡಿದರು.[3] ಕ್ರಿ.ಶ. ೧೪೪೪ ರಲ್ಲಿ ಪಡುವಕೇರಿ ಹಲವು ಸೆಟ್ಟಿಕಾರರು ನಖರೇಶ್ವರ ದೇವಸ್ಥಾನದ ನೈವೇದ್ಯಕ್ಕೆ ಮತ್ತು ಸೇವೆಗೆ ನಾರಣಸೆಟ್ಟಿಗೆ ಭೂಮಿಯನ್ನು ಕೊಟ್ಟರು.[4] ಮತ್ತೊಂದು ಶಾಸನದಿಂದ ಬಸರೂರಿನಲ್ಲಿ ಮೂಡಕೇರಿ ಎಂಬ ಮತ್ತೊಂದು ಕೇರಿಯ ಹೆಸರು ದೊರಕುತ್ತದೆ. ಈ ಶಾಸನವು ಪಡುವ ಮತ್ತು ಮೂಡಕೇರಿಗಳ ಸೆಟ್ಟಿಗಳ ನಡುವೆ ವಿವಾದವೊಂದನ್ನು ಸೌಹಾರ್ದತೆಯಿಂದ ಬಗೆಹರಿಸಿದುದನ್ನು ತಿಳಿಸುತ್ತದೆ. ಕ್ರಿ.ಶ. ೧೪೭೫ರಲ್ಲಿ ಪಡುವಕೇರಿ ಮತ್ತು ಮೂಡಕೇರಿ ಸೆಟ್ಟಿಗಳಲ್ಲಿ ತಾವು ಇರುವ ಸ್ಥಳಗಳ ಗಡಿ ಮತ್ತು ಹಕ್ಕುಗಳ ಸಂಬಂಧವಾಗಿ ಮತ್ತು ಪ್ರತಿಯೊಂದು ಸ್ಥಳದ ಸೆಟ್ಟಿಗಳು ಉತ್ಸವಗಳಲ್ಲಿ ದೇವಿ ದೇವಾಲಯಕ್ಕೆ ಕುರಿಗಳು ಮತ್ತು ಅಡಕೆ ಮರಗಳನ್ನು ತೆಗೆದು

1. *SII*, VII, No. 340.
2. *SII*, IX (ii), No. 446.
3 *Ibid.*, No. 448.
4. *Ibid.*, No- 449.

ಕೊಂಡು ಹೋಗಬೇಕಾದ ಧಾರಿಯ ವಿಚಾರವಾಗಿ ಒಪ್ಪಂದವಾಯಿತು.[1] ಕ್ರಿ.ಶ. ೧೪೬೩ ರ ಒಂದು ಶಾಸನವು ಹಂಜಮಾನ ಕೋಮಿನವರು, ಪಡುವಕೇರಿಯ ಮಹದೇವರ ಸೇವೆಗೆ ಚಂದ್ರಗ್ರಹಣ ಕಾಲದಲ್ಲಿ ಮಾಡಿದ ಸುವರ್ಣದಾನವನ್ನು ದಾಖಲೆಮಾಡಿದೆ.[2] ಕ್ರಿ.ಶ. ೧೪೭೨ ರಲ್ಲಿ ಬಲ್ಲಬಳಿ ದುಗ್ಗಣಸೆಟ್ಟಿ ಮತ್ತು ಅವನ ಸೋದರಳಿಯರು ಬಸರೂರು ಪಡುವಕೇರಿಗೆ ಸೇರಿದ ಸೋವಣಸೆಟ್ಟಿ, ನಾಗಣಸೆಟ್ಟಿ ಮತ್ತು ದೇವು ಸೆಟ್ಟಿ, ಸಿರಿಯಪ್ಪನಿಗೆ ಆತನು ಕಾಶಿಯ ತೀರ್ಥಯಾತ್ರೆಯಿಂದ ಹಿಂದಿರುಗಿದಾಗ ತಂದ ವಿಶ್ವನಾಥ ದೇವರ ಪೂಜೆಗೆ ಭೂಮಿಯನ್ನು ದಾನ ಮಾಡಿದರು.[3] ಮತ್ತೊಂದು ಶಾಸನವು "ಪಡುವಕೇರಿ, ಹಲರು" ಮಾಡಿದ ಭೂದಾನವನ್ನು ತಿಳಿಸುತ್ತದೆ. ಕ್ರಿ.ಶ. ೧೪೮೨ ರಲ್ಲಿ ಬಸರೂರಿನ ಅನೇಕ ನಿವಾಸಿಗಳು ಮತ್ತು ಪಡುವಕೇರಿ "ಹಲರು", ಬಸರೂರು ಪಡುವಕೇರಿ ತಿರುಮಲದೇವರ ಸೇವೆಗೆ ಭೂದಾನ ಮಾಡಿದರು.[4] ಕ್ರಿ.ಶ. ೧೪೮೭ ರಲ್ಲಿ ಸೆಟ್ಟಿಕಾರರ ಗುರು ರುದ್ರಾಕ್ಷಿ ಒಡೆಯ ಬಸರೂರು ಪಡುವಕೇರಿಯಲ್ಲಿ ಒಂದು ಮಠವನ್ನು ಕಟ್ಟಿಸಿದನು. ಮತ್ತು ಸೆಟ್ಟಿಗಳು ಆ ಮಠಕ್ಕೆ ಭೂದಾನ ಮಾಡಿದರು.[5]

ಕ್ರಿ.ಶ. ೧೫೧೦ರಲ್ಲಿ ಮಲ್ಲಪ್ಪನಾಯಕ ಬಸರೂರು ಪಡುವಕೇರಿ ವ್ಯಾಪಾರಿಗಳಿಂದ ಮಹದೇವದೇವರ ನೈವೇದ್ಯ ಮತ್ತು ಇತರ ಸೇವೆಗಳಿಗೆ ಕಾಣಿಕೆಯನ್ನು ಸಂಗ್ರಹಿಸಿದನು.[6] ಕ್ರಿ.ಶ. ೧೫೪೧ರಲ್ಲಿ ನಾರಣಸೆಟ್ಟಿ ಎಂಬುವನ ಪತ್ನಿ ತಿರುಮಕ ಸೆಟ್ಟಿತಿ ಬಸರೂರು ಪಡುವಕೇರಿಯಲ್ಲಿ ಒಂದು ಮಠವನ್ನು ಕಟ್ಟಿಸಿ, ಅದಕ್ಕೆ ಭೂಮಿ ಮತ್ತು ಬಂಗಾರವನ್ನು ದತ್ತಿ ಕೊಟ್ಟನು.[7] ಕ್ರಿ.ಶ. ೧೫೬೦ರಲ್ಲಿ ಶಂಕರಸೆಟ್ಟಿ ಎಂಬುವನು ಸಂತಾನವಿಲ್ಲದ ತನ್ನ ಮೊಮ್ಮಗಳು, ತಿರುಮಕ್ಕ–ರಾವುತಿತಿಗೆ ಸೇರಿದ ಚಿನ್ನದಿಂದ ಒಂದು ಮಠವನ್ನು ಕಟ್ಟಿ ಅದಕ್ಕೆ ಭೂಮಿಯನ್ನು ಕೊಟ್ಟನು. ಅವನು, ನಖರೇಶ್ವರದೇವರ ಸೇವೆಗೂ, ಒಂದು ದಾನ ಮಾಡಿದನು.[8] ಕ್ರಿ.ಶ. ೧೫೭೨ರಲ್ಲಿ ಬಸರೂರು ಪಡುವಕೇರಿಯ ಚನ್ನಾವರದ ನಾರಣಮೂಡಿಲ ಮತ್ತು ಕುಪಣಸೆಟ್ಟಿ ಲಕ್ಷ್ಮೀನಾರಾಯಣ ದೇವರಿಗೆ ಒಂದು ಮಠವನ್ನು ಕಟ್ಟಿಸಿ, ಭೂಮಿ ಮತ್ತು ಅನೇಕರಿಂದ ಬರಬೇಕಾಗಿದ್ದ ಸಾಲದ ಬಡ್ಡಿಯನ್ನು ದತ್ತಿಯಾಗಿ ಕೊಟ್ಟನು.[9] ಕ್ರಿ.ಶ. ೧೫೭೩ರಲ್ಲಿ ಸಂಕಣ್ಣನಾಯಕ ಬಸರೂರು ಪಡುವಕೇರಿ ತಿರುಮಲದೇವರಿಗೆ ಒಂದು ದಾನಮಾಡಿದನು.[10] ಕ್ರಿ.ಶ. ೧೫೫೫ರಲ್ಲಿ ಬಸರೂರು

1. *Ibid.*, No. 457.
2. *Ibid.*, No. 459.
3. *Ibid.*, No. 468.
4. *Ibid.*, No. 471.
5. *Ibid.*, No. 473.
6. *Ibid.*, No. 479.
7. *Ibid.*, No. 511.
8. *Ibid.*, No. 512.
9. *Ibid.*, No. 517.
10. *Ibid.*, No. 555.

ಪಡುವಕೇರಿ ನಿವಾಸಿ ಕೊಟೇಸರಸೆಟ್ಟಿ, ಮಠಕ್ಕೆ ಸೇರಿದ ಸತ್ರವನ್ನು ನಡೆಸಲು ಭೂದಾನ ಮಾಡಿದನು.[1] ಕ್ರಿ.ಶ. ೧೫೬೨ರಲ್ಲಿ ಬಸರೂರು ಪಡುವಕೇರಿಗೆ ಸೇರಿದ ಚಿತುಸೆಟ್ಟಿ, ಒಂದು ಮಠವನ್ನು ಕಟ್ಟಿಸಿ ಕೋಟೇಶ್ವರ ದೇವರ ಸೇವೆಗೆ ಭೂದಾನಮಾಡಿದನು.[2] ಕ್ರಿ.ಶ: ೧೬೦೮ರಲ್ಲಿ ಅಜ್ಜಿನಾರಣಸೆಟ್ಟಿ ಬಸರೂರು ಪಡುವಕೇರಿಯಲ್ಲಿ ಒಂದು ಮಠವನ್ನು ಕಟ್ಟಿಸಿ, ಅದಕ್ಕೆ ಭೂಮಿ ಮತ್ತು ಬಡ್ಡಿ ಬರುವ ಹಣವನ್ನು ದಾನಮಾಡಿದನು.[3] ಶಾಸನಗಳು ಬಸರೂರಿನ ಎರಡು ಕೇರಿಗಳು, ಆರು ಮಠಗಳು ಮತ್ತು ಆರು ದೇವಾಲಯ ಗಳನ್ನು ಹೆಸರಿಸುತ್ತವೆ.

ವಿಜಯನಗರವನ್ನು ಅನೇಕ "ಪಾಳೆಂ" ಅಥವಾ ವಿಭಾಗಗಳನ್ನಾಗಿ ವಿಂಗಡಿಸ ಲಾಗಿತ್ತು. ಪ್ರತಿ ವಿಭಾಗದಲ್ಲೂ ಅನೇಕ ಬೀದಿಗಳಿದ್ದುವು. ಪ್ರತಿಯೊಂದು ವಿಭಾಗವು ಸಹಾಯಕ ವರ್ಗದವರೊಡನೆ ಒಬ್ಬ "ತಳಾರಿ"ಯ ಹತೋಟಿಯಲ್ಲಿದ್ದಿತು.[4] ಪ್ರತಿ ಪಟ್ಟಣದಲ್ಲೂ ಅದರದೇ ಆದ ತಳವಾರರಿದ್ದರು. ಪ್ರತಿಯೊಂದು ಪಟ್ಟಣ ಮತ್ತು ನಗರ ಗಳಲ್ಲಿ ಶಾಂತಿ ಪಾಲನೆಗೆ ಒಬ್ಬ ಮುಖ್ಯಾಧಿಕಾರಿಯ (Prefect) ನೇತೃತ್ವದಲ್ಲಿ ಅನೇಕ ತಳವಾರರಿಗೆ ವಹಿಸಲ್ಪಟ್ಟಿತ್ತು.[5]

## ದಕ್ಷಿಣ ಕನ್ನಡದ ಶ್ರೇಣಿಗಳು

"ಹಂಜಮಾನ" ಮತ್ತು "ನಖರ": ದಕ್ಷಿಣ ಕನ್ನಡದ ವಿಜಯನಗರ ಕಾಲದ ದಾಖಲೆಗಳಲ್ಲಿ "ಹಂಜಮಾನ" ಮತ್ತು "ನಖರ"ಗಳಿಗೆ ಅನೇಕ ಉಲ್ಲೇಖಗಳಿವೆ. "ನಖರ" ಶ್ರೇಣಿಗಳು ಸಾಮಾನ್ಯವಾಗಿ ಶೈವ ಮತದ ಅವಲಂಬಿಯಾಗಿದ್ದು ನಖರೇಶ್ವನಿಗೆ ಅನೇಕ ದೇವಾಲಯಗಳನ್ನು ಕಟ್ಟಿ ಅವುಗಳನ್ನು ನಡೆಸಲು ಅನೇಕ ದಾನಗಳನ್ನು ಮಾಡಿದುವು. ಕ್ರಿ.ಶ. ೧೩೯೯ರ ಬಾರಕೂರಿನ ಒಂದು ಶಾಸನವು ಹತ್ತು ಕೇರಿಯ "ನಖರ-ಹಂಜಮಾನ" ಶ್ರೀ ನಾರಾಯಣ ದೇವರಿಗೆ ಮಾಡಿದ ಒಂದು ದಾನ ವನ್ನು ದಾಖಲೆಮಾಡಿದೆ.[6] ಬಾರಕೂರಿನ ಕ್ರಿ.ಶ. ೧೪೦೫ರ ಮತ್ತೊಂದು ಶಾಸನವು,[7] ಆ ಸ್ಥಳದ ನಿವಾಸಿಗಳು ಅವರಿಗೆ ಅನ್ಯಾಯ ಮಾಡಿದ ಸರ್ಕಾರಿ ಅಧಿಕಾರಿಗಳ ವಿರುದ್ಧ ನಿಸ್ಸಹಾಯಕರಾಗಿರಲಿಲ್ಲವೆಂದು ಸ್ಪಷ್ಟವಾಗಿ ದೃಢೀಕರಿಸುತ್ತದೆ. ಈ ದಾಖಲೆಯಿಂದ ಎರಡನೆ ಹರಿಹರ ಸಾಮ್ರಾಟನಾಗಿದ್ದಾಗ ಬಾರಕೂರು ರಾಜ್ಯದ ಮಹಾಬಲದೇವ ಪ್ರಾಂತ್ಯಾಧಿಕಾರಿಯಾಗಿದ್ದಾಗ, ಆತನು ಬಾರಕೂರು ನಗರದ "ನಖರ-ಹಂಜಮಾನ"ಕ್ಕೆ

1. *Ibid.*, No. 659.
2. *Ibid.*, No. 673.
3. *Ibid.*, No. 694.
4. Venkataramanayya, N: *Studies*, p. 266.
5. *Ibid.*, p. 265.
6. *SII*, VII, No. 350; Ramesh K. V., *Tulunadina Itihasa*, pp. 128-129.
7. *Ibid.*, No. 211.

ಸೇರಿದ, ಹತ್ತು ಕೇರಿ "ಹಲರು ಸೆಟ್ಟಿತನ"ದ ಅಧಿಕಾರ ಮತ್ತು ಕರ್ತವ್ಯಗಳಲ್ಲಿ ಮಧ್ಯೆ ಪ್ರವೇಶಿಸಿದನೆಂದು ತಿಳಿಸುತ್ತದೆ. ಆದ್ದರಿಂದ ಎರಡನೆ ಬುಕ್ಕನಿಗೆ ಮನವಿಮಾಡಿಕೊಳ್ಳಲು ಆತನು ಗೋವೆ (ಅಂದರೆ ಗೋವಾ) ಮಹಾಪ್ರಧಾನ ಬಾಚಣ್ಣನಿಗೆ ವಿವಾದದ ವಿಚಾರಣೆ ನಡೆಸಲು ನಿರ್ದೇಶಿಸಿದನು. ಅದೇ ರೀತಿ ಬಾಚಣ್ಣ ಬಾರಕೂರಿಗೆ ಭೇಟಿಕೊಟ್ಟು ವಿಚಾರಣೆ ಮಾಡಿ ತೊಂದರೆಗೀಡಾದ ಪಕ್ಷಗಳಿಗೆ ಪರಿಹಾರಕ್ಕೆ ಏರ್ಪಾಡು ಮಾಡಿದನು. ಆ ಮನವಿಯನ್ನು ಎರಡನೆ ಬುಕ್ಕನಿಗೆ ಬಾರಕೂರಿನ ಹತ್ತು ಕೇರಿಯ ಸ್ಥಾನಪತಿ ಚಿಕ್ಕಣ್ಣ ಮಾಡಿದ್ದನು. ಈ ಪ್ರಶ್ನೆಯನ್ನು ಬಗೆಹರಿಸಿದ ಬಾಚಣ್ಣನು ಅನಂತರ ಬಾರಕೂರು ರಾಜ್ಯದ ಪ್ರಾಂತ್ಯಾಧಿಕಾರಿಯಾಗಿ ನೇಮಕವಾದುದು ಸ್ವಾರಸ್ಯಕರ ಸಂಗತಿಯಾಗಿದೆ.[1] ಕ್ರಿ.ಶ. ೧೪೪೯ರ ಮೂಡಬಿದಿರೆಯ ಒಂದು ಶಾಸನವು[2] "ಹಂಜಮಾನ-ನಖರ"ಕ್ಕೆ ಪರಿಹಾರ ಕೊಟ್ಟುದನ್ನು ದಾಖಲೆಮಾಡಿದೆ. ಈ ಶಾಸನದ ಪ್ರಕಾರ, ಅವರು ನಿಯಮ ಮತ್ತು ಸಂಪ್ರದಾಯದ ಪ್ರಕಾರ ನಡೆದುಕೊಳ್ಳುತ್ತಿದ್ದಾಗ ತಿಮ್ಮಣ್ಣ ಒಡೆಯ ಯಾವ ಕಾರಣವೂ ಇಲ್ಲದೆ, ತನ್ನ ಸೈನಿಕರೊಡನೆ ಅವರ ಮೇಲೆ ಮುತ್ತಿಗೆ ಹಾಕಿ, ಅವರ ಹತೋಟಿಗೆ ಒಳಪಟ್ಟಿದ್ದ ನಾಲ್ಕೈದು ಗ್ರಾಮಗಳನ್ನು ನಾಶಮಾಡಿದನೆಂದು ತಿಳಿಸುತ್ತದೆ. ಈ ಸಮಾಚಾರವು ಸಾಮ್ರಾಟನಿಗೆ, ಸೇನಾನಿ ಬೈಯಿಚದಣ್ಣಾಯಕನಿಗೆ ತಿಳಿಯಲು ದಣ್ಣಾಯಕನು ಗಾಯಗೊಂಡಿದ್ದ "ಹಂಜಮಾನ"ರಿಗೆ ಪರಿಹಾರ ಕೊಡಲು ತಿಪ್ಪಣ್ಣ ಒಡೆಯನಿಗೆ ಆದೇಶ ನೀಡಿದನು. ತಿಪ್ಪಣ್ಣ ಒಡೆಯ ಈ ಆಜ್ಞೆಯನ್ನು ಪರಿಪಾಲಿಸಿ, ಪ್ರಧಾನಿಗಳು, ಹಲವು ನಾಯಕರು ಮತ್ತು "ಸಮಸ್ತಕಟ್ಟಳೆ"ಯವರ ಸಹಾಯದಿಂದ ವಿಚಾರಣೆ ನಡೆಸಿದನು. ಉಡುಪಿ ತಾಲ್ಲೂಕಿನ ಯೆರ್ಮಾಲದ ಒಂದು ಶಾಸನದ ಪ್ರಕಾರ[3] "ಸಮಸ್ತಹಲರು"ವಿನಲ್ಲಿ "ಸಾವಿರಾಳು" (ಒಂದುಸಾವಿರ ಸೈನಿಕರು) ಗಳಿದ್ದರು. ಇದರಿಂದ ಶ್ರೇಣಿಗಳು ತಮ್ಮ ರಕ್ಷಣೆಗೆ ತಮ್ಮದೇ ಆದ ಸಶಸ್ತ್ರದಳವನ್ನು ಹೊಂದಿದ್ದವೆಂದು ನಾವು ಊಹಿಸಬಹುದು. ಕ್ರಿ.ಶ. ೧೪೭೭ರ ಕೈಕಿನಿ ಶಾಸನದ[4] ಪ್ರಕಾರ "ನಖರ-ಹಂಜಮಾನ"ವು ಪ್ರಾಂತ್ಯಾಧಿಕಾರಿಯ ಅಧಿಕಾರವನ್ನು ಪ್ರತಿಭಟಿಸುವಷ್ಟು ಬಲವಾಗಿದ್ದಿತೆಂದು ಮತ್ತು ಇದರ ಫಲವಾಗಿ ರಾಜನ ಸೈನಿಕರಿಂದ ಆಕ್ರಮಣಕ್ಕೆ ಗುರಿಯಾಯಿತೆಂದೂ ತಿಳಿಯಬಹುದು. ಕ್ರಿ.ಶ. ೧೫೩೭ರ ಮೂಡುಬಿದುರೆಯ ಒಂದು ಶಾಸನ[5]ದಿಂದ ಬಿದುರೆಯ "ನಖರ"ದ ಎಂಟು ಸೆಟ್ಟಿಕಾರರ ಅಪ್ಪಣೆಯಮೇರೆಗೆ ಬಿದುರೆಯ ಚೈತ್ಯಾಲಯದಲ್ಲಿ ಒಂದು ಕಟ್ಟಡನಿರ್ಮಾಣ ಕಾರ್ಯ ಕೈಗೊಳ್ಳಲಾಯಿತೆಂದು ತಿಳಿಯುತ್ತದೆ. ವಿಜಯನಗರಕಾಲದಲ್ಲಿ ಈ ಸಂಸ್ಥೆಗಳು ಬಲವಾಗಿದ್ದು, ಐಶ್ವರ್ಯಯುತವಾಗಿ ಮತ್ತು ಪ್ರಭಾವಯುತವಾಗಿದ್ದುವು.

---

1. *Ibid.*, IX (ii), No. 435.
2. *Ibid.*, VII, No. 182.
3. *ARISE*, 1927-28, No. 396.
4. *Karnatak Inscriptions*, I, No. 48.
5. *SII*, VII, No. 205.

ಎಳಮೆ : "ಎಳಮೆ" ಎಂಬುವುದು ತನ್ನದೇ ಆದ ಕಟ್ಟಡ ನಿರ್ಮಾಣನಿಯಮಗಳನ್ನೊಳಗೊಂಡ ಒಂದು ಶ್ರೇಣಿಯಾಗಿತ್ತೆಂದು ಕಾಣುತ್ತದೆ. ದಕ್ಷಿಣಕನ್ನಡದ ವಿಜಯನಗರಕಾಲದ ಅನೇಕ ಶಾಸನಗಳು, ಆ ಶ್ರೇಣಿಯ ಸದಸ್ಯರನ್ನು ಸೂಚಿಸಲು "ಎಳಮೆ", "ಎಳಮೆಗಳು", "ಎಳಮೆಗಳೊಳಗಾದ", "ಎಳಮೆ ಓಲಗದವರು" (ಎಂದರೆ ಎಳಹುಗೆ ಸೇರಿದವರು) ಎಂಬ ಪದಗಳನ್ನು ಉಪಯೋಗಿಸುತ್ತದೆ. "ಎಳಮೆ"ಗೆ ಒಂದು ಸಂಖ್ಯೆ ಇದ್ದಿತು. ಉದಾಹರಣೆಗೆ, ವಂಶಪುರ ಅಥವಾ ಮೂಡಬಿದಿರೆಯಲ್ಲಿ ೪ ಮತ್ತು ೬೬, ಪೇಣೂರಿನಲ್ಲಿ ೩೬೦ ಮತ್ತು ಬಾರಕೂರು ೧೦ ಕೇರಿಯಲ್ಲಿ ೭೭೦. ಶಾಸನಗಳು ಅದರ ರಚನೆ ಮತ್ತು ಕರ್ತವ್ಯಗಳನ್ನು ತಿಳಿಸುವುದಿಲ್ಲ. ಶಾಸನಗಳಿಂದ ಅವುಗಳ ಚಟುವಟಿಕೆಗಳನ್ನು ವಿವರಿಸಬಹುದು.

ಕ್ರಿ.ಶ. ೧೪೨೯ರಲ್ಲಿ ಮೂಡಬಿದರೆಯ (ವಂಶಪುರ) ವೇಣುಪುರದ ೮ ಸೆಟ್ಟಿಕಾರರು ನಾಲ್ಕು ಎಳಮೆಗಳು ಮತ್ತು ಸಮಸ್ತ ಹಲರು ಚೈತ್ಯಾಲಯಕ್ಕೆ ದಾನಗಳನ್ನು ಕೊಟ್ಟರು ಮತ್ತು ಅದನ್ನು ಕಟ್ಟಲಾಯಿತು.[1] ಅದೇ ವರ್ಷದ ಮೂಡಬಿದರೆಯ ಮತ್ತೊಂದು ಶಾಸನವು[2] ನಾಲ್ಕು ಎಳಮೆಗಳಲ್ಲಿ ಸೇರಿದ್ದ ಎಂಟು ಸೆಟ್ಟಿಕಾರರು ಮತ್ತು ಸಮಸ್ತ ಹಲರು ಆ ಚೈತ್ಯಾಲಯದ ಎರಡನೆ ಮಹಡಿಯನ್ನು ಕಟ್ಟಿಸಿದರೆಂದು ತಿಳಿಸುತ್ತದೆ. ವಂಶಪುರದ ಮತ್ತೊಂದು ಶಾಸನವು ಅದೇ ಮಹನೀಯರು ಆ ಬಸ್ತಿಯ ಮೂರನೆಯ ಮಹಡಿಯನ್ನು ಕಟ್ಟಿಸಿದರೆಂದು ತಿಳಿಸುತ್ತದೆ.[3] ಕ್ರಿ.ಶ. ೧೪೬೦ರಲ್ಲಿ, ಎಂಟು ಪ್ರಜೆ ಸೆಟ್ಟಿಕಾರರು ಮತ್ತು ನಾಲ್ಕು ಎಳಮೆಗಳ ಒಪ್ಪಿಗೆಯಿಂದ ಪಾರ್ಶ್ವನಾಥದೇವರಿಗೆ ಭೂದಾನಮಾಡಲಾಯಿತು.[4] ಕ್ರಿ.ಶ. ೧೪೭೬ರ ಒಂದು ಶಾಸನವು ಅದೇ ಪ್ರಜೆ ಸೆಟ್ಟಿಕಾರರು ಮತ್ತು ಎಳಮೆಗಳಿಂದ ಚೈತ್ಯಾಲಯಕ್ಕೆ ಒಂದು ದಾನವನ್ನು ದಾಖಲೆಮಾಡಿದೆ.[5] ಕ್ರಿ.ಶ. ೧೪೮೯ರಲ್ಲಿ ಕಾಮದೇವಿ ೫೧೬ ಸೆಟ್ಟಿಕಾರರ ಮತ್ತು ೩೦೦ ಎಳಮೆಗಳ ಒಪ್ಪಿಗೆಯಿಂದ ಶಾಂತಿನಾಥ ಸ್ವಾಮಿ ಚೈತ್ಯಾಲಯಕ್ಕೆ ಒಂದು ದಾನಮಾಡಿದರು. ಈ ಸಭೆಯಲ್ಲಿ ಸಮಸ್ತ ಸದಸ್ಯರು ಹಾಜರಿದ್ದ ಹಾಗೆ ಕಾಣುತ್ತದೆ. ಕ್ರಿ.ಶ. ೧೫೧೫ರಲ್ಲಿ ೮ ಸೆಟ್ಟಿಕಾರರು ಮತ್ತು ೪ ಎಳಮೆಗಳು ಭತ್ತವನ್ನು ದಾನಮಾಡಿದ್ದನ್ನು ಕಾಣಬಹುದು.[6] ಕ್ರಿ.ಶ. ೧೫೩೭ರ ಒಂದು ಶಾಸನವು ಪದಿನಾರು ಸೆಟ್ಟಿಕಾರರ ಮತ್ತು ೬೬ ಎಳಮೆಗಳ ಒಪ್ಪಿಗೆಯಿಂದ ಶಾಂತೀಶ್ವರ ಚೈತ್ಯಾಲಯಕ್ಕೆ ಒಂದು ದಾನ ಮತ್ತು ಬಸ್ತಿಯಲ್ಲಿ ೨೪ ತೀರ್ಥಂಕರರ ಪಾಲನೆಗೆ ಅನ್ವಯಿಸುತ್ತದೆ.[7] ಈ ಶಾಸನಗಳಿಂದ "ಸೆಟ್ಟಿಕಾರ" ಶ್ರೇಣಿ ಮತ್ತು "ಎಳಮೆ" ಶ್ರೇಣಿ

1. *SII*, VII, No. 196.
2. *Ibid.*, No. 202.
3. *Ibid.*, No. 209.
4. *Idid.*, No. 198.
5. *Ibid.*, No. 209.
6. *Ibid.*, No. 212.
7. *Ibid.*, No. 256.

ಬಸ್ತಿಗಳ ನಿರ್ಮಾಣವನ್ನು ಕೈಗೊಂಡು ಅವಕ್ಕೆ ದಾನಮಾಡುತ್ತಿದ್ದಿತೆಂಬುದು ಸ್ಪಷ್ಟ ವಾಗುತ್ತದೆ. ಈ ಶಾಸನಗಳಲ್ಲಿ ಉಲ್ಲೇಖಿಸಿರುವ, ಹಲರು ಮತ್ತೊಂದು ಪ್ರತಿನಿಧಿ ಸಂಸ್ಥೆಯಾಗಿದ್ದಿತು.

**ಸಾಲಿಕೆಯ ಬಲ್ಲಾಳುಗಳು :** ಸಾಲಿಕೆಯ ಬಲ್ಲಾಳುಗಳು ೬ ಮಂದಿಯನ್ನೊಳ ಗೊಂಡು ವರ್ತಕರ ಶ್ರೇಣಿಯ ಸದಸ್ಯರೆಂದು ಕಾಣುತ್ತದೆ. ಕ್ರಿ.ಶ. ೧೫೦೮ ರ ಸುಜೇರು ಶಾಸನವು, ತುಳುವರಸ ಚೌತ ಮತ್ತು ವೀರ ನರಸಿಂಹ ಬಂಗರ ನಡುವೆ "ಪರಸ್ಪರ ಬಲ್ಲಾಳು"ಗಳನ್ನು ಸೆರೆ ಹಿಡಿಯುವುದನ್ನು ನಿಷೇಧಿಸಿ ಒಪ್ಪಂದಕ್ಕೆ ಬಂದರೆಂದು ತಿಳಿಸು ತ್ತದೆ.[1] ಈ ಶಾಸನದಲ್ಲಿ ತಿಳಿಸಿರುವ ಬಲ್ಲಾಳುಗಳು ಹೊರಗಿನವರಾಗಿದ್ದರು. ಅವರು "ಸಾಲಿಕೆ"ಗೆ ಸಂಬಂಧಹೊಂದಿದ್ದರು. ಆದರೆ ತುಳುವದ ಹೊರಗಿನಿಂದ ಬಂದವರು. "ಸಾಲಿಕೆಯ ಬಲ್ಲಾಳುಗಳು" ಪ್ರಮುಖ ಪ್ರಜೆಗಳಾಗಿದ್ದಿರಬೇಕು. ಮತ್ತು ಅವರು "ಬಲ್ಲಾಳು" ವರ್ತಕರಿಗೆ ತುಳು ರಾಜ್ಯದ ಹೊರಗಿನಿಂದ ದಾಸ್ತಾನುಗಳನ್ನು ಒದಗಿಸುತ್ತಿದ್ದರು.

ಬಾರಕೂರು, ಬಸರೂರು, ಮೂಡಬಿದಿರೆ ಮತ್ತು ವೇಣೂರು, ದಕ್ಷಿಣ ಕನ್ನಡದಲ್ಲಿ ವಾಣಿಜ್ಯ ಶ್ರೇಣಿಗಳನ್ನು ಹೊಂದಿದ್ದ ಮುಖ್ಯ ಪಟ್ಟಣಗಳಾಗಿದ್ದುವು. ಆ ಶ್ರೇಣಿಗಳ ಅಧಿಕಾರ ಮತ್ತು ಚಟುವಟಿಕೆಗಳು ಜನಜೀವನದ ಹಲವಾರು ಮುಖಗಳಿಗೆ ಸಂಬಂಧಿಸಿತ್ತು.

ಸ್ಥಳೀಯ ವರ್ತಕರು ಹೊರಗಿನಿಂದ ದಾಸ್ತಾನುಗಳನ್ನು ಮಾರಲು ತರುತ್ತಿದ್ದ ವರ್ತಕರೊಡನೆ ಒಪ್ಪಂದ ಮಾಡಿಕೊಳ್ಳುತ್ತಿದ್ದರು ಮತ್ತು ಅವರಿಗೆ ರಕ್ಷಣೆ ನೀಡು ತ್ತಿದ್ದರು. ಎರಡನೆ ದೇವರಾಯನ ಕಾಲದ ಕ್ರಿ.ಶ. ೧೪೩೦ ರ ಬಾರಕೂರಿನ ಒಂದು ಶಾಸನವು, ಬಾರಕೂರಿನ ಮೂರು ಕೇರಿ ಮತ್ತು ಚೌಳಿಕೇರಿ ವರ್ತಕ ಸಮುದಾಯಗಳ ನಡುವೆ ಆದ ಒಪ್ಪಂದವನ್ನು ದಾಖಲೆ ಮಾಡಿದೆ. ಪರದೇಶಿ ವರ್ತಕರಿಗೆ (ಪರದೇಶಿ-ಬೆವ-ಹಾರಿಗಳು) ಅವರು ಘಟ್ಟದ ಮೇಲಿನಿಂದ ತರುತ್ತಿದ್ದ ಸಕ್ಕರೆ ಮೂಟೆಗಳನ್ನು ದಾಸ್ತಾನು ಮಾಡಲು, ಒಂದು ನಿರ್ದಿಷ್ಟ ಸ್ಥಳವನ್ನು (ತಾವು) ಪ್ರತ್ಯೇಕವಾಗಿ ಇಟ್ಟದ್ದ ಒಂದು ಷರತ್ತು ಈ ಒಪ್ಪಂದದಲ್ಲಿದೆ.

**ಸೆಟ್ಟಿಕಾರ :** ದಕ್ಷಿಣ ಕನ್ನಡದ "ಸೆಟ್ಟಿಕಾರ" ಶ್ರೇಣಿಗಳು ಸಾಮಾನ್ಯವಾಗಿ ಜೈನಮತಕ್ಕೆ ಸೇರಿದ್ದವೆಂದು ಕಾಣುತ್ತದೆ. ಅವು ಮೂಡಬಿದಿರೆಯಲ್ಲಿ ಅನೇಕ ಜೈನ ಬಸ್ತಿಗಳನ್ನು ಕಟ್ಟಿಸಿದ ಅಥವಾ ದುರಸ್ತಿ ಮಾಡಿದ ಮತ್ತು ಅವುಗಳನ್ನು ಮುಂದುವರಿಸು ವುದಕ್ಕೆ ಮಾಡಿದ ದಾನಗಳ ಚಟುವಟಿಕೆಗಳನ್ನು ಹಿಂದೆ ತಿಳಿಸಲಾಗಿದೆ. "ಸೆಟ್ಟಿಕಾರ" ಶ್ರೇಣಿಯು ಮೂರು ಕೇರಿ, ಚೌಳಿಯ ಕೇರಿ ಮತ್ತು ಮಣಿಗಾರ ಕೇರಿಗಳಲ್ಲಿ ಮೂವರು ಸದಸ್ಯರು, ಕೋಟಕೇರಿಯಲ್ಲಿ ನಾಲ್ವರು ಸದಸ್ಯರು, ಹತ್ತು ಕೇರಿಯಲ್ಲಿ "ಹದಿನಾರು ಮಂದಿ"ಗಳನ್ನೊಳಗೊಂಡಿತ್ತೆಂದು ಶಾಸನಗಳು ತಿಳಿಸುತ್ತವೆ. ಈ ಶ್ರೇಣಿಯ ಚಟುವಟಿಕೆ

1. *ARISE*, 1930-31, No 336.

ಗಳನ್ನು ಬಸರೂರು ಪಡುವಕೇರಿ ಸೆಟ್ಟಿಗಳ ಚಟುವಟಿಕೆಗಳನ್ನು ಚರ್ಚಿಸುವಾಗ ತಿಳಿಸಲಾಗಿದೆ. ಶಾಸನಗಳು ಈ ಸಂಸ್ಥೆಗಳಲ್ಲಿ ಸೇರಿದ್ದ ಪುರುಷರ ಉತ್ತಮ ಯೋಗ್ಯತೆಯನ್ನು ತಿಳಿಸುತ್ತವೆ. ಮೂಡಬಿದಿರೆಯ ಒಂದು ಶಾಸನವು[1] ಅಲ್ಲಿನ "ಸೆಟ್ಟಿಕಾರ" ಶ್ರೇಣಿ ಮತ್ತು "ಸಮಸ್ತ ಹಲರು" ಎಲ್ಲ ಶಾಸ್ತ್ರಗಳಲ್ಲಿ ಪರಿಜ್ಞಾನ ಪಡೆದವರೆಂದು, ಹೊಸ ಮತ್ತು ಹಳೆಯ ಚೈತ್ಯಗಳನ್ನು ಕಟ್ಟುವುದರಲ್ಲಿ ಅಥವಾ ದುರಸ್ತಿ ಮಾಡುವುದರಲ್ಲಿ ಪರಿಣತರೆಂದು ಮತ್ತು ಉನ್ನತ ಶೀಲ ಸ್ವಭಾವದವರೆಂದು ತಿಳಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಶ್ರೇಣಿಗಳ ಬಗ್ಗೆ ಈ ಚರ್ಚೆಯನ್ನು ಅಂತ್ಯಗೊಳಿಸುವ ಮೊದಲು ದಕ್ಷಿಣ ಕನ್ನಡದಲ್ಲಿ "ನಾಡು", "ಊರು" ಮತ್ತು "ಮಹಾಜನರು" ಮೊದಲಾದ ಪ್ರಾತಿನಿಧ್ಯ ಸಭೆಗಳು ಇದ್ದುವೆಂದು ತಿಳಿಸುವುದು ಆವಶ್ಯಕವಾಗಿದೆ. ಸಾಮಾನ್ಯ ಪ್ರಜೆಗಳ ಸಭೆಗಳಾಗಿದ್ದ "ಒಕ್ಕಲು", "ಜಗತ್ತು" ಮತ್ತು "ಜನನಿ" ಅಥವಾ "ಜನ್ನಿ" ಇವುಗಳನ್ನು ಚರ್ಚಿಸಲಾಗಿದೆ. ಅವುಗಳ ಸದಸ್ಯರನ್ನು ಯೋಗ್ಯತಾನುಸಾರವಾಗಿ ಆರಿಸಲಾಗುತ್ತಿತ್ತು. ಮೂಡಬಿದಿರೆಯ ಒಂದು ಶಾಸನವು[2] ಆ ಪಟ್ಟಣದ "ಮಹಾಜನ" ರಿಗೆ "ಪರಪುರುಷಾರ್ಥ–ಕಾರಿಗಲ್", "ದಾನ ಶೀಲರ್", "ಗುರು ಜನ ಭಕ್ತರ್," "ಕವಿಜನ ಸ್ತುತರ್''. "ಪರಮುದಯಾಪರರ್" ಮುಂತಾದ ಗುಣವಾಚಕಗಳನ್ನು ಉಪಯೋಗಿಸಿದೆ. ಆಡಳಿತ ರಂಗದಲ್ಲಿ ಈ ವ್ಯಾಪಾರ ಮತ್ತು ಪ್ರಜೆಗಳ ಶ್ರೇಣಿಗಳು ಮತ್ತು ಅವುಗಳ ಅಧಿಕಾರಿಗಳನ್ನು ಸಾಮೂಹಿಕವಾಗಿ "ಕಟ್ಟಲೆಯವರು" ಅಥವಾ "ಸಮಸ್ತ ಕಟ್ಟಲೆಯವರು" ಎಂದು ಸಂಬೋಧಿಸಲಾಗಿದೆ. ಕ್ರಿ.ಶ. ೧೪೩೦ರಲ್ಲಿ ಬಾರಕೂರು ಹತ್ತು ಕೇರಿ "ಸಮಸ್ತ ಕಟ್ಟಲೆಯವರು" ಪ್ರಾಂತ್ಯಾಧಿಕಾರಿ ಅಣ್ಣಪ್ಪ ಒಡೆಯ ಮತ್ತು ಸಿವಳ್ಳಿ ನಿವಾಸಿಗಳ ನಡುವೆ ಒಂದು ಉಗ್ರ ವಿವಾದದಲ್ಲಿ ಮಧ್ಯಸ್ಥಿಕೆದಾರರಾಗಿದ್ದರು. ಇದರಿಂದ ಅವರು ಪ್ರಾಂತ್ಯಾಧಿಕಾರಿಗೆ ಆಡಳಿತ ವಿಷಯಗಳಲ್ಲಿ ಸಹಾಯಕರಾಗಿದ್ದರೆಂದು ತಿಳಿಯಬಹುದು. ಸಾಮ್ರಾಜ್ಯದ ಅಧಿಕಾರಿಗಳು ಈಸಂಸ್ಥೆಗಳ ಪ್ರಾಮುಖ್ಯವನ್ನು ಮತ್ತು ಸ್ಥಳೀಯ ಸಂಪ್ರದಾಯವು ಅವಕ್ಕೆ ಮನ್ನಣೆಕೊಟ್ಟದ್ದನ್ನೂ ಅರ್ಥ ಮಾಡಿಕೊಂಡು, ಅದನ್ನು ಗೌರವಿಸುತ್ತಿದ್ದರು. ಕ್ರಿ.ಶ. ೧೪೦೮ರ ಬಾರಕೂರಿನ ಒಂದು ಶಾಸನವು[3] ಸಾಮ್ರಾಟ ಎರಡನೆ ಬುಕ್ಕ ಬಾರಕೂರಿನ ಹತ್ತು ಕೇರಿಯ "ನಖರ–ಹಂಜಮಾನ" ಒಳಗೊಂಡ "ಸಮಸ್ತ ಹಲರು"ವಿಗೆ, ಪ್ರಾಂತ್ಯಾಧಿಕಾರಿ ಮಹಾಬಲದೇವ ತೆಗೆದುಹಾಕಿದ್ದ ಸಮಸ್ತ ಹಕ್ಕುಗಳನ್ನು ನೀಡಿದನೆಂದು ತಿಳಿಸುತ್ತದೆ.

**ಇತರ ಹಲವು ಶ್ರೇಣಿಗಳು:** ಶ್ರೇಣಿಗಳ ಪ್ರಾತಿನಿಧ್ಯ ಲಕ್ಷಣ ಮತ್ತು ಸಂಸ್ಥಾರೂಪವನ್ನು ಅರಿಯಲು ಹಲವು ಇತರ ವ್ಯಾಪಾರ ಮತ್ತು ವೃತ್ತಿ ಶ್ರೇಣಿಗಳನ್ನು ಪರಿಶೀಲಿಸಬಹುದು.

---

1. *Ibid.*, No. 196.
2. *Ibid.*, No. 202.
3. *Ibid.*, No. 349.

ಐಯ್ಯಾವೊಳೆ : ದಕ್ಷಿಣ ಭಾರತದ ಜನ ಜೀವನದಲ್ಲಿ "ಐಯ್ಯಾವೊಳೆ" ಎಂಬ ವ್ಯಾಪಾರ ಶ್ರೇಣಿಯು ಪ್ರಮುಖ ಪಾತ್ರ ವಹಿಸಿದ್ದಿತು.[1] ಕ್ರಿ.ಶ. ೮ ನೆ ಶತಮಾನದಿಂದ ೧೭ ನೆ ಶತಮಾನದವರೆಗಿನ ದಖನ್ ಮತ್ತು ದಕ್ಷಿಣ ಭಾರತದ ಶಾಸನಗಳು ಈ ಶ್ರೇಣಿ ವಿವರಗಳನ್ನು ತಿಳಿಸುತ್ತವೆ.[2] ಅವರು ತಮ್ಮ ಚೀಲಗಳಲ್ಲಿ ಬೆಲೆಯುಳ್ಳ ಸರಕುಗಳನ್ನು ಹೊಂದಿ ಎಲ್ಲ ರಾಷ್ಟ್ರಗಳು, ಗ್ರಾಮಗಳು, ನಗರಗಳು, ಕೆದಗಳು, ಪಟ್ಟಣಗಳನ್ನು ಸುತ್ತಾಡುತ್ತಿದ್ದ ವರ್ತಕರಾಗಿದ್ದರು.[3] ಆ ಶ್ರೇಣಿಗೆ ಒಂದು ನಿರ್ದಿಷ್ಟ ವ್ಯವಸ್ಥೆ ಮತ್ತು ಚರಿತ್ರೆ ಇದ್ದಿತು. ಸಾಮಾನ್ಯವಾಗಿ ರಾಜ ಅಥವಾ ಅವನ ಸರ್ಕಾರ, ಅವರಲ್ಲಿ ಮನಸ್ತಾಪ ಅಥವಾ ಜಗಳಗಳಿಂದ ಸರ್ಕಾರದ ಪ್ರವೇಶ ಆವಶ್ಯಕವಾಗಿರದಿದ್ದರೆ, ಅವುಗಳ ಕೆಲಸದಲ್ಲಿ ಪ್ರವೇಶಿಸುತ್ತಿರಲಿಲ್ಲ. ಐಯ್ಯಾವೊಳೆ ತನ್ನದೇ ಆದ ನಿಯಮಗಳನ್ನು ಹೊಂದಿದ್ದಿತು. ಅವರು "ವೀರ ಬಳಂಜ" ಮತದ ರಕ್ಷಣೆಮಾಡುವವರೆಂದು ಹೇಳುತ್ತಿದ್ದರು. ಅದರ ಸದಸ್ಯರು ಭಗವತಿದೇವತೆಯ ಆರಾಧಕರಾಗಿದ್ದರು. ಆ ಶ್ರೇಣಿಯಲ್ಲಿ "ಸಾವಿರ ಜಿಲ್ಲೆಗಳ", ಮೂವತ್ತೆರಡು ಉಚ್ಚಾಶ್ರಯ ಸ್ಥಿತಿಯಲ್ಲಿದ್ದ ತೀರಪ್ರದೇಶದ ನಗರಗಳು, ಹದಿನೆಂಟು ಪಟ್ಟಣಗಳು ಮತ್ತು ೬೪ ವ್ಯಾಪಾರ ಸಭೆಗಳು, ಇವೇ ಮುಂತಾದ ವಿಭಾಗಗಳಿದ್ದುವು. ಅದರ ಸದಸ್ಯರು ಅನೇಕ ರಾಷ್ಟ್ರಗಳನ್ನು ಸುತ್ತಿ, ಭೂಜಲಮಾರ್ಗಗಳಿಂದ ೬ ರಾಷ್ಟ್ರಗಳಿಗೂ ಹೋಗಿದ್ದರೆಂದು ಹೇಳುತ್ತಿದ್ದರು.[4] ಶಿಕಾರಿಪುರದ ಒಂದು ಶಾಸನವು[5] ಈ ವರ್ತಕರ ಉದ್ಭವಾದ ಪ್ರಶಂಸೆಯನ್ನು ಕೊಡುತ್ತದೆ. ಅವರು ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಐಹೊಳೆಯಲ್ಲಿ ಕೇಂದ್ರ ಕಚೇರಿ ಹೊಂದಿದ್ದರು. ಕೋಲಾರದ ಒಂದು ಶಾಸನವು, ಅವರು ತಮ್ಮನ್ನು "ಐಯ್ಯಾವೊಳಪುರ-ಪರಮೇಶ್ವರಿಯ ಮಕ್ಕಲ್ ಮತ್ತು ಭಾಗವತಿಯ ಮಕ್ಕಲ್" ಎಂದು ಹೇಳಿಕೊಳ್ಳುತ್ತಿದ್ದರೆಂದು ತಿಳಿಸುತ್ತದೆ.[6]

ಅವರು ಕೂಡ "ಪಟ್ಟಣಸ್ವಾಮಿ" ಎಂಬ ನಾಯಕನನ್ನು ಹೊಂದಿದ್ದರೆಂದು ಕಾಣುತ್ತದೆ.[7] ಈ ಶ್ರೇಣಿಯ ಸಂವಿಧಾನವನ್ನು ತಿಳಿಯಲಾಗುವುದಿಲ್ಲ. ಅದರ "ಸ್ವಾಮಿ"ಗಳು ಯಾವಾಗಲೂ ೫೦೦. ಅದು ೫೦೦ ಸದಸ್ಯರನ್ನೊಳಗೊಂಡ ಕಾರ್ಯನಿರ್ವಾಹಕ ಸಮಿತಿಯಾಗಿದ್ದಿತು. ಆ ಶ್ರೇಣಿಯು ತನ್ನಲ್ಲಿ ಗವರರು, ಗತ್ರಿಗರು, ಶೆಟ್ಟಿಗಳು, ಶೆಟ್ಟಿಗುಟ್ಟರು, ಅಂಕಕರರು, ಶೆಟ್ಟಿಪುತ್ರರು, ಬೀರವಣಿಗರು, ನಾನಾದೇಶಿಗಳು, ನಾಡು, ನಗರ ಮತ್ತು ಇತರರನ್ನೊಳಗೊಂಡಿದ್ದಿತು.[8] ಚಂದ್ರಶೇಖರಶಾಸ್ತ್ರಿಯವರ

1. Fleet : *Sanskrit and old Canarese Inscriptions, Ind. Ant.* VI, p. 138.
2. *ARSIE*, 1918, Copper plate, 18.
3. *EC*, Ak. 22-1188 A.D.
4. *EC*, I, No. 4 ; *EC*, V, Ak. 13-1288 A.D.
5. *EC*, VII, Sk. 118-1054 A.D.
6. *EC*, X, Kl. 170.
7. *EC*, VII, Sk. 94-1094 A.D. ; Fleet, *op.cit.*, V, p. 342.
8. 256 of 1912 ; 342 of 1912 ; *ARSIE*, 1913 (ii), para 25.

ಪ್ರಕಾರ ಐಯ್ಯಾವೊಳೆ ವರ್ತಕ ಶ್ರೇಣಿಗಳ ಒಂದು ಸಮಗ್ರ ಸಂಘವಾಗಿರಬಹುದು.[1] ವಿಜಯನಗರ ಕಾಲದ ಶಾಸನಗಳು "ಐಯ್ಯಾವೊಳೆ"ಯ ಅಸ್ತಿತ್ವವನ್ನು ಮತ್ತು ಚಟುವಟಿಕೆಗಳನ್ನು ದಾಖಲೆಮಾಡಿದೆ. ಮೈಸೂರು ಜಿಲ್ಲೆಯ ಚಾಮರಾಜನಗರದ ಕ್ರಿ.ಶ. ೧೪೦೩ ರ ಒಂದು ಶಾಸನವು[2] ಆಲೂರು ಐಯ್ಯಾವೊಳೆಯೂರೆಂದು ಕರೆಯಲ್ಪಡುತ್ತಿದ್ದಿತೆಂದು ದಾಖಲೆಮಾಡಿದೆ. ಕ್ರಿ.ಶ. ೧೪೦೫ ರ ಗುಂಟೂರಿನ ಒಂದು ಶಾಸನವು ವಲ್ಲಭಸೆಟ್ಟಿಯನ್ನು ಐಯ್ಯಾವೊಳೆಪುರದ ಸ್ವಾಮಿಯೆಂದು ದಾಖಲೆಮಾಡಿದೆ.[3] ಕ್ರಿ.ಶ. ೧೪೫೧ ರ ಅನಂತಪುರದ "ಐಯ್ಯಾವೊಳೆ"ಗೆ ನೀಡಿದ ಹಲವು ಹಕ್ಕುಗಳನ್ನು ತಿಳಿಸುತ್ತದೆ.[4] ಕ್ರಿ.ಶ. ೧೫೦೨ ರ ತುಮಕೂರಿನ ಒಂದು ಶಾಸನವು "ಐಯ್ಯಾವೊಳೆ"ಯನ್ನು ತಿಳಿಸುತ್ತದೆ.[5] ಕಡೆಯದಾಗಿ, ಕ್ರಿ.ಶ. ೧೫೩೮ ರ ಅನಂತಪುರದ ಒಂದು ಶಾಸನವು "ಐಯ್ಯಾವೊಳೆ"ಗೆ ಸುಂಕಗಳನ್ನು ದಾನಮಾಡಿದ್ದನ್ನು ದಾಖಲೆಮಾಡಿದೆ.[6] ಅವರು ಸಾಮೂಹಿಕವಾಗಿ ಕೊಡುಗೆಗಳನ್ನು ನೀಡುತ್ತಿದ್ದರು. ಡಾ. ಅಪ್ಪಾದೊರೈ ಪ್ರಕಾರ ಶ್ರೇಣಿಗಳಲ್ಲೆಲ್ಲಾ "ಐಯ್ಯಾವೊಳೆ" ಆ ಕಾಲದ ದಾಖಲೆಗಳಲ್ಲಿ ಪ್ರಮುಖಸ್ಥಾನವನ್ನು ಹೊಂದಿದೆ.[7]

**ವೀರಬನಜಿಗೆ :** ಕರ್ನಾಟಕ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ವಿಜಯನಗರ ಕಾಲದಲ್ಲಿ ವೀರಬನಜಿಗರು ವಿಶೇಷ ಪ್ರಭಾವವನ್ನು ಹೊಂದಿದ್ದರು. ಬಲ್ಲಿಗ್ರಾಮ ಅವರ ಬಲವಾದ ಒಂದು ನೆಲೆಯಾಗಿದ್ದಿತು. ತಮ್ಮ ಹಕ್ಕುಗಳನ್ನು ಮತ್ತು ಬಿರುದುಗಳನ್ನು ಅತ್ಯಭಿಮಾನವಾಗಿ ಅವರು ರಕ್ಷಿಸಿಕೊಳ್ಳುತ್ತಿದ್ದರು. ಕ್ರಿ.ಶ. ೧೧೮೨ರ ಒಂದು ಶಾಸನದಲ್ಲಿ[8] ಅವರು ತಮ್ಮ ವಿಚಾರವಾಗಿ ಪ್ರಶಂಸನಾಪದಗಳನ್ನು ಉಪಯೋಗಿಸಿದ್ದಾರೆ. ಅದೇ ಶಾಸನವು ೧೨ನೆ ಶತಮಾನದಲ್ಲಿ ಅವರ ಕೇಂದ್ರಗಳನ್ನು ತಿಳಿಸುತ್ತವೆ. ಅವು ವಿಜಯನಗರ, ಹಸ್ತಿನಾವತಿ, ದೋರಸಮುದ್ರ, ಗುತ್ತಿ, ಪೆನುಗೊಂಡ, ಅದವನಿ, ಉದಯಗಿರಿ, ಚಂದ್ರಗಿರಿ, ಮುಲವಾಯಿ, ಕಾಂಚಿ, ಪಡೈವೀಡು ಚಮ್ಮಂಗಪಟ್ಟಣ, ಮಂಗಳೂರು, ಹೊನ್ನಾವೂರು, ಚಂದವೂರು, ಆರಗ, ಚಂದ್ರಗುತ್ತಿ, ಅನ್ನಿಗೆರೆ, ಹುಲಿಗೆರೆ, ನಿಡುಗಲ್ಲು, ಚಿನತನಕಲ್ಲು, ಕರಿಯಕಲ್ಲು, ಅನೆರಿದ್ದ, ಸರಿ, ಕಲ್ಹಿಯ, ತೆರಕಣಾಂಬಿ ಮತ್ತು ಶ್ರೀರಂಗಪಟ್ಟಣ.

---

1. Chandrasekhara Sastri S., *Economic Conditions under the Hoysalas*, *HJMU*, II, p. 223.
2. *EC*, IV, Ch. 45.
3. 202 of 1915.
4. 818 of 1917.
5. *EC*, XII, Mi. 35.
6. 70 of 1912, *ARSIE*, 1912 (ii), para 56.
7. Appadorai : *op.cit.*, I, p. 391.
8. *EC*, V, Bl. 75.

ಅವರ ಇತರ ಕೇಂದ್ರಗಳು ಗುತ್ತಿಯಲ್ಲಿ ಎಡೆನಾಡು, ನಗರಖಂಡದಲ್ಲಿ ಕೊಂಡರದ, ಹಸುಗಲ್, ಚಿಕ್ಕಜಿಗಲಿಗೆ, ಹಿರಿಯಜಿಗಲಿಗೆ ನಾನೂರು, ಬಲಚಂಗಲೆನಾಡು, ಹೊಸ ನಾಡು, ಕಬುರಲಿಗೆ, ಐದವಲಿಗೆ, ಹಿರಿಯಮಹಲಿಗೆ, ಚಿಕ್ಕಮಹಲಿಗೆ ಜಂಬೆಯ, ಹಲಿನಾಡು, ಹೆದನಾಡು, ಕಾಂಚಿನಾಡು, ಹೊನ್ನತ್ತಿನಾಡು, ಹಲಸಿಗೆ, ಹೊಸಲೆ, ಇಮ್‌ಗುಂಡಿ ಮತ್ತು ಇತರ ಸ್ಥಳಗಳು.[1] ಅವರ ಶಾಸನಗಳು ೧೩ನೆ ಶತಮಾನದಿಂದ ವಿಜಯನಗರ ಸಾಮ್ರಾಜ್ಯದ ಪತನದವರೆಗೆ ನಾಲ್ಕು ಶತಮಾನಗಳ ಕಾಲ ಹರಡಿವೆ. ಈ ವರ್ತಕರು ರಾಷ್ಟ್ರದ ವ್ಯಾಪಾರ ಮತ್ತು ವಾಣಿಜ್ಯ ಹತೋಟಿಹೊಂದಿದ್ದರೆಂದು ಸುಂದರಂ ಹೇಳಿರುವುದು ನಿಜ.[2]

ಚೆಟ್ಟಿಗಳು ಅಥವಾ ಸೆಟ್ಟಿಗಳು : ವ್ಯಾಪಾರ ಕೈಗೊಂಡಿದ್ದ ಮುಖ್ಯ ಕೋಮುಗಳು ಮಹಮ್ಮದೀಯರಲ್ಲದೆ, ನಾಲ್ಕೆಂದು ಡಾ. ಅಪ್ಪಾದೊರೈ ತಿಳಿಸಿದ್ದಾರೆ. ಅವು ಚೆಟ್ಟಿಗಳು, ಬಣಜಿಗಳು, ಕೋಮಟಿಗಳು ಮತ್ತು ಬ್ರಾಹ್ಮಣರು.[3] ಚೆಟ್ಟಿಗಳ ಪೂರ್ವಿಕರು ಪ್ರಾಚೀನ ಭಾರತಸಮಾಜದ ವೈಶ್ಯಕೋಮಿಗೆ ಸೇರಿದವರು. ವ್ಯಾಪಾರ ಮತ್ತು ಹಣಕಾಸು ವ್ಯವಹಾರ ಅವರ ಮುಖ್ಯ ಕರ್ತವ್ಯಗಳಾಗಿದ್ದುವು. ಮಧ್ಯಯುಗದಲ್ಲಿ, ರಾಷ್ಟ್ರದಲ್ಲೆಲ್ಲ ಚೆಟ್ಟಿಗಳು ಮುಖ್ಯ ವ್ಯಾಪಾರಿಗಳಾಗಿದ್ದರು. ಮಹುಅನ್‌ಪ್ರಕಾರ ಸಮಸ್ತ ವ್ಯವಹಾರ ಗಳನ್ನು ಅವರು ನಡೆಸುತ್ತಿದ್ದರು. ರೈತರಿಂದ ಮೆಣಸನ್ನು ಕೊಂಡು ವಿದೇಶೀ ಹಡಗುಗಳು ಹಾದುಹೋಗುತ್ತಿದ್ದಾಗ ಮಾರುತ್ತಿದ್ದರು. ಅವರು ಬೆಲೆಬಾಳುವ ಅಮೂಲ್ಯರತ್ನಗಳನ್ನು ಮತ್ತು ಬೆಲೆಬಾಳುವ ಪದಾರ್ಥಗಳನ್ನು ಕೊಂಡು ಸಂಗ್ರಹಿಸುತ್ತಿದ್ದರು.[4]

ಈ ಕೋಮಿನವರು ತಮ್ಮನ್ನು "ನಗರತ್ತರ್, ವೀರಕೊದಿಯರ್, ಪೆರುನಗರತ್ತರ್[5] ವೈಶ್ಯ–ವಾನಿಯನಗರತ್ತರ್[6] ಅಥವಾ ನಾಲು–ನಗರತ್ತರ್[7]" (ನಾಲ್ಕು ವ್ಯಾಪಾರ ವರ್ಗದವರು) ಎಂದು ಕರೆದುಕೊಳ್ಳುತ್ತಿದ್ದರು. ಒಂದೇ ಸ್ಥಳಕ್ಕೆ ಸೇರಿದ ಸದಸ್ಯರನ್ನೊಳ ಗೊಂಡ ಶ್ರೇಣಿಗಳಿದ್ದುವು. ಉದಾಹರಣೆಗೆ, ಮುಲುವಾಗಿಲು ಪಟ್ಟಣದ ಬಣಜಿಗರು.[8] ನಾವು ಒಂದು ಸಡಿಲವಾದ ಶ್ರೇಣಿಯನ್ನು ಕಾಣುತ್ತೇವೆ. ಕ್ರಿ.ಶ. ೧೪೯೦ರ ಶಿಕಾರಿಪುರದ ಒಂದು ಶಾಸನದ ಪ್ರಕಾರ ಒಂದು ಶ್ರೇಣಿ ನಾನಾದೇಶಿಗಳ ಎರಡು ಕೋಮಿನವರು ಮತ್ತು ೫೬ ರಾಷ್ಟ್ರದವರನ್ನೊಳಗೊಂಡಿತ್ತೆಂದು ತಿಳಿಸುತ್ತದೆ.[9]

---

1. *EC*, VIII, Sb. 428.
2. Sundram K., *The Balanja Merchant Community of Medieval Andhra, JOR* XXX, p. 15.
3. Appadorai : *op.cit.*, I, p. 379.
4. *JRAS*, Mahuan's Account of Cochin, Calicut and Aden, by Geo. Phillips, 1896, p. 344.
5. 82 of 1911 ; 11 of 1910 ; *ARSIE*, 1910, II, para 51 ; 222 of 1911.
6. 405 of 1912.
7. 130 of 1916.
8. *MAR*, 1925, p. 89, A.D. 1466.
9. *EC*, VII, Sk. 313.

ವಿಜಯನಗರಕಾಲದಲ್ಲಿ ಶೆಟ್ಟಿಗಳು ವಿಶೇಷ ಪ್ರಭಾವ ಬೀರುತ್ತಿದ್ದರು. ಅವರು ತಮ್ಮದೇ ಕೋಮಿನ ಮುಖಂಡನನ್ನು ಹೊಂದಿದ್ದರು. ಸಾಮಂತರು ಅನೇಕವೇಳೆ ಸ್ಥಳೀಯ ದೇವಾಲಯಗಳಿಗೆ ತೆರಿಗೆಗಳನ್ನು ದಾನಮಾಡಲು, ಅಥವಾ ಇತರ ದಾನಗಳನ್ನು ಕೊಡಲು ಅವರಿಗೆ ಅರ್ಜಿಹಾಕಿಕೊಳ್ಳಬೇಕಾಗಿತ್ತು. ಉದಾಹರಣೆಗೆ, ಕ್ರಿ.ಶ. ೧೪೦೬ರಲ್ಲಿ[1] ವೀರಶೈವ ವೀರಪ್ರತಾಪ ಚೋಳರಾಜ ಹಲವು ಶೆಟ್ಟಿಗಳ ಕೋಮಿನ ಮುಖ್ಯಸ್ಥರಿಗೆ ಅರಿಕೆಮಾಡಿಕೊಳ್ಳಲು ಅವರು ಗೊತ್ತಾದ ಹಣವನ್ನು ರಕ್ಷಿಸಲು ಮತ್ತು ಕೆಲವು ನಿರ್ದಿಷ್ಟ ತೆರಿಗೆಗಳನ್ನು ಹಾಕಲು ಒಪ್ಪಿದರು. ಅವರು, ಪ್ರತಿ ಮನೆಗೆ ವರ್ಷಕ್ಕೆ ಒಂದು "ಹಣ" ಮತ್ತು ವಿವಾಹಕ್ಕೆ ಎರಡು "ಹಣ" ಕೊಡಲು ಒಪ್ಪಿದರು. ಅವರ ಈ ನಿರ್ಧಾರ ಮುಂದೆ ತಿಳಿಸಿರುವ ಸ್ಥಳಗಳಿಗೆ ಅನ್ವಯಿಸುತ್ತಿದ್ದಿತು. ಅವು, ಬೆಂಗಳೂರು, ಕೋಲಾಲ, ತ್ಯಾಕಲು, ಬಂದಿಗುಟ್ಟ, ಕಂಗೋದಿದುರ್ಗ, ವೆಂಕಟಗಿರಿಕೋಟೆ, ಮೆಕನಯು ಕನಪಾಳ್ಯ, ಮಾಸ್ತಿ, ಬಗಲೂರು, ಹೊಸೂರು, ಆನೇಕಲ್ಲು, ಡೆಂಕನಿಕೋಟೆ, ರಥಗಿರಿ, ಕಾವೇರಿಪಟ್ಟಣ, ಅಂದೂರು, ಪೆರಂದೂರು, ಪೆನ್ನಗರ್ವ, ಸಳ್ಯ, ಧರ್ಮಪುರಿ, ಅಜ್ಜಿಪುರ, ಕುರುಬರಹಳ್ಳಿ, ಶ್ರೀರಂಗಪಟ್ಟಣ ಮತ್ತು ಅದರ ಸರಹದ್ದಿನಲ್ಲಿದ್ದ ಎಲ್ಲಾ ಗ್ರಾಮಗಳು.

**ಕರ್ತವ್ಯಗಳು:** ಅವರು ರಥೋತ್ಸವದ ತೇರುಗಳನ್ನು ಕಟ್ಟಿಸಿಕೊಡುವುದು,[2] ದೇವಾಲಯಗಳಿಗೆ ದೀಪಗಳನ್ನು ಒದಗಿಸುವುದು[3] ಮತ್ತು ದೇವಾಲಯಗಳನ್ನು ನಡೆಸುವುದೇ[4] ಮುಂತಾದ ದಾನಶೀಲಕೆಲಸಗಳನ್ನು ಕೈಗೊಳ್ಳುತ್ತಿದ್ದರು ಅಥವಾ ಅದಕ್ಕೆ ನೆರವಾಗುತ್ತಿದ್ದರು. ಕ್ರಿ.ಶ. ೧೪೦೬ರಲ್ಲಿ ತಮ್ಮ ಕೋಮಿನವರಿಗೆ ಆಹಾರ ಒದಗಿಸಲು ಒಂದು ದಾನಮಾಡಿದರು.[5]

ವಿಜಯನಗರ ಕಾಲದಲ್ಲಿ ಒಬ್ಬ ಪ್ರಜೆಗೆ ಜಿಲ್ಲೆಯ ಸ್ಥಳೀಯ ಕಂದಾಯಗಳ ಮೇಲಿನ ಹಕ್ಕನ್ನು ಕೊಡುವ ಪದ್ಧತಿಯಿದ್ದಿತೆಂದು ಕಾಣುತ್ತದೆ. ಕ್ರಿ.ಶ. ೧೫೦೮ರಲ್ಲಿ ಗೌಡರು ಮತ್ತು ಸೆಟ್ಟಿಗಳು, ಪ್ರಾಂತ್ಯಾಧಿಕಾರಿಗೆ ತಮ್ಮ ನಾಡಿನ ಕಂದಾಯಗಳನ್ನು ದಾನಮಾಡಿದರು. ಈ ಶಾಸನದ ಪ್ರಕಾರ ಸದಲಿನಾಡಿನ ಗೌಡರು, ಸೆರೆಯ ನಾಲ್ವರು ಸೆಟ್ಟಿಗಳು ಮತ್ತು "ಸಾಲುಮಾಲೆ"ಯ ಸಮಸ್ತ ಹಿರಿಯರು ಕೆಲವು ನಿಯಮಗಳನ್ನು ಮಾಡಿದರು. ಇದರ ಪ್ರಕಾರ ಸಂತೆಗೆ ಬರುತ್ತಿದ್ದ ಸಗಟು ಧಾನ್ಯ ಒಂದು ವರ್ಷ ಸಮಸ್ತ ತೆರಿಗೆಗಳಿಂದ ಮಾಫಿ ಹೊಂದಿತ್ತು. ನಂತರ ಸಾದಾಳಿಯ ಸಂಪ್ರದಾಯದ ಪ್ರಕಾರ ಪ್ರಾಂತ್ಯಾಧಿಕಾರಿ ದೇವಣ್ಣ ಒಡೆಯ ಶಾಶ್ವತವಾಗಿ ವಸೂಲು ಮಾಡಬಹುದಾಗಿತ್ತು.[6]

---

1. *EC*, IX, Bn. 96.
2. 61 of 1916.
3. 52 of 1927.
4. 82 of 1911.
5. *EC*, IV, Ch. 45.
6. *ARSIE*, 1923, p. 120 ; 679 of Ap. B. 1922.

ವಿಜಯನಗರ ಸರ್ಕಾರವು ವ್ಯಾಪಾರಿಗಳ ಶ್ರೇಣಿಗಳೇ ಮುಂತಾದ ಮುಖ್ಯ ಸಂಸ್ಥೆಗಳ ಅಸ್ತಿತ್ವವನ್ನು ಮತ್ತು ಅಧಿಕಾರವನ್ನು ಅಂಗೀಕರಿಸಿದ್ದಿತು. ಅಚ್ಯುತರಾಯನ ಅಧಿಕಾರಿ ಕಂಪದೇವರಸ ನಾನಾದೇಶಿಗಳ ಸಮ್ಮತಿಯಿಂದ ತಿರುಮಲದೇವಿಯಮ್ಮನವರ ಪಟ್ಟಣದ ಗೌರೇಶ್ವರ ದೇವಸ್ಥಾನಕ್ಕೆ ಬೆಳೆಗಳ ಮೇಲಿನ ಹಲವು ಕಂದಾಯಗಳು ಮತ್ತು ವಿವಾಹ ತೆರಿಗೆಯನ್ನು ದಾನಮಾಡಿದನು.[1] ಇದರಿಂದ ನಾವು ಮೊದಲನೆಯದಾಗಿ, ಕೇಂದ್ರ ಸರ್ಕಾರದ ಅಧಿಕಾರಿಗಳು ಶ್ರೇಣಿಗಳ ಸಮ್ಮತಿಯಿಂದ ತೆರಿಗೆಗಳ ಮಾಫಿ ಮತ್ತು ದಾನಗಳನ್ನು ಮಾಡುತ್ತಿದ್ದರೆಂದೂ, ಮತ್ತು ಎರಡನೆಯದಾಗಿ, ಈ ಸಂಘಗಳು, ವ್ಯಕ್ತಿಗಳು ಮತ್ತು ರಾಜ್ಯದ ನಡುವೆ ಮಧ್ಯಸ್ಥ ಸಂಸ್ಥೆಗಳಾಗಿ ಪ್ರಜಾಸತ್ತಾತ್ಮಕ ಸತ್ವವನ್ನು ಕಾಪಾಡುವುದಕ್ಕೆ ನೆರವಾಗುತ್ತಿತ್ತೆಂದೂ ತಿಳಿಯಬಹುದು.

ಶ್ರೇಣಿಗಳ ಮುಂದಾಳುಗಳು ರಾಜನ ಆಸ್ಥಾನದಲ್ಲಿ ಸ್ವಲ್ಪ ಪ್ರಭಾವ ಹೊಂದಿದ್ದರೆಂದು ಕಾಣುತ್ತದೆ. ಉದಾಹರಣೆಗೆ, ಕ್ರಿ.ಶ. ೧೩೫೫ರಲ್ಲಿ "ಉಭಯ ನಾನಾದೇಶಿ"ಗಳ ಮುಖಂಡ ವಯಿಜಣ್ಣ ಮಹಾಮಂಡಲೇಶ್ವರ ಹರಿಹರ ಒಡೆಯರ ಗೃಹವರ್ತಕನಾಗಿದ್ದನು.[7] ಅವರು ಸರ್ಕಾರದಿಂದ ತೆರಿಗೆಗಳ ಮಾಫಿ ಹೊಂದಬಹುದಾಗಿತ್ತು. ಕ್ರಿ.ಶ. ೧೩೮೦ರಲ್ಲಿ ಎರಡನೆ ಹರಿಹರರಾಯನ ಆಳ್ವಿಕೆಯಲ್ಲಿ ಮಾಂಬಳ್ಳಿ, ಅಥವಾ ಹರಿಹರರಾಯಪಟ್ಟಣದ ನಾನಾದೇಶಿಗಳಿಗೆ ಹಲವು ತೆರಿಗೆಗಳನ್ನು ಮಾಫಿಮಾಡಿದರು.[2]

ವಿವಾಹಸಮಾರಂಭಗಳಲ್ಲಿ ಗೌರವಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಪ್ರಾಂತ್ಯ ಸರ್ಕಾರ ತೀರ್ಮಾನಿಸಿದ ಒಂದು ನಿದರ್ಶನವಿದೆ. ಕ್ರಿ.ಶ. ೧೫೩೩ರಲ್ಲಿ ದೀಕ್ಷಿತಸ್ವಾಮಿ ಅಂದರೆ, ಅಚ್ಯುತನಾಯಕ ಮತ್ತು ರಘುನಾಥನಾಯಕರ ಪ್ರಸಿದ್ಧ ಮಂತ್ರಿ ಗೋವಿಂದ ದೀಕ್ಷಿತ ಪಟ್ಟೇಶ್ವರಂ ನೇಯ್ಗೆಯವರು ಮತ್ತು ಸೆಟ್ಟಿಗಳ ನಡುವೆ ಉಂಟಾದ ವಿವಾದದ ವಿಚಾರವಾಗಿ ಒಂದು ಅರ್ಜಿ ಸಲ್ಲಿಸಿದರು. ಈ ವಿವಾದವು ವಿವಾಹಗಳಲ್ಲಿ ವೀಳ್ಯ ಮತ್ತು ಅಡಿಕೆಯನ್ನು ಸ್ವೀಕರಿಸುವ ವಿಧಾನಕ್ಕೆ ಸೇರಿದ್ದಿತು. ಇದರಿಂದ ಗಲಭೆಯುಂಟಾದ ಸಂದರ್ಭಗಳಲ್ಲಿ ಸ್ಥಳೀಯ ದೇವಾಲಯದ ದೇವತೆಗೆ ೩೦ ಅಡಿಕೆ ಮತ್ತು ೧೦೦ ಎಲೆಗಳೊಡನೆ ೫ ಪಣ ಮತ್ತು ಹೊಸ ವಸ್ತ್ರವನ್ನು ಸಲ್ಲಿಸಬೇಕೆಂದು ತೀರ್ಮಾನಿಸಲಾಯಿತು.[3]

ವಾಣಿಜ್ಯಸಂಸ್ಥೆಗಳ ಮುಖಂಡರು ತಮ್ಮದೇ ಅಲ್ಲದ ಇತರ ಕ್ಷೇತ್ರಗಳಲ್ಲೂ ಕೆಲಸ ಮಾಡುತ್ತಿದ್ದರು, ಸರ್ಕಾರ ಮತ್ತು ಪ್ರಜೆಗಳು ಇದಕ್ಕೋಸ್ಕರ ಅವರಿಗೆ ಬಿರುದುಗಳನ್ನು ಕೊಟ್ಟು ಗೌರವಿಸುತ್ತಿದ್ದರು. ಕ್ರಿ.ಶ. ೧೩೬೮ರಲ್ಲಿ ಉಂಟಾದ ಜೈನ ಶ್ರೀವೈಷ್ಣವ ವಾದವು ಸೌಹಾರ್ದವಾಗಿ ಕೊನೆಗೊಂಡಿತು. ಶಾಸನದ ಪ್ರಕಾರ ಕಲ್ಲೆಯದ ಹರ್ಪಿಸೆಟ್ಟಿಯ ಮಗ ಸುಪುತ್ರ ಬಸವಿಶೆಟ್ಟಿ ಬುಕ್ಕರಾಯನಿಗೆ ಅರ್ಜಿಸಲ್ಲಿಸಲು, ಬುಕ್ಕರಾಯನು ತಿರುಮಲದ ತಾತಯ್ಯನಿಗೆ ಹೇಳಿಕಳುಹಿಸಿ ಶಾಸನವನ್ನು ಬರೆಸಿದನು. ಎರಡು "ಸಮಯ"ಗಳೂ

---

1. *MAR*, 1919, p. 33.
2. *Ibid.*, 1917, p. 48.
3. 257 of 1927 : *ARSIE*, 1927, p. 117.

(ಕೋಮುಗಳು) ಒಂದಾಗಿ ಬಸವಿಶೆಟ್ಟಿಗೆ ಸಂಘನಾಯಕ ಎಂಬ ಗೌರವವನ್ನು ದಯಪಾಲಿಸಿತು.[1]

ಶೆಟ್ಟಿಗಳು ಇತರರೊಡನೆ ಒಮ್ಮತದಿಂದ ಸ್ಥಳೀಯ ದೇವರುಗಳಿಗೆ ಭೂದಾನ ಕೊಟ್ಟು ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಿದ್ದರು. ಉದಾಹರಣೆಗೆ, ಕ್ರಿ.ಶ. ೧೩೯೮ರಲ್ಲಿ ಎನ್ನೆನಾಡಿನ ಸಮಸ್ತ ಪಾಂಚಾಲರು ಅನಿತೇಶ್ವರ ದೇವರಿಗೆ ಅನೇಕ ಗ್ರಾಮಗಳಲ್ಲಿ, ಪ್ರತಿ ಗ್ರಾಮದಿಂದ ಒಂದು "ಹಣ"ವನ್ನು ದೇವರ ಸೇವೆಗೆ ಒದಗಿಸಿದರು.[2] ಮತ್ತೊಂದು ಶಾಸನದ ಪ್ರಕಾರ ಶೆಟ್ಟಿಗಳು ಅನೆಗನಕೆರೆಯ ಚೆನ್ನಕೇಶವದೇವರಿಗೆ ಶಾಶ್ವತವಾಗಿ ದೀಪ ಒದಗಿಸಲು, ದಾನಗಳನ್ನು ಮಾಡಿದರು.[3] ಹಲವು ಶೆಟ್ಟಿಗಳು ವಿಷ್ಣುಸಮುದ್ರ ಅಗ್ರಹಾರದಲ್ಲಿದ್ದ ಬ್ರಾಹ್ಮಣರೊಡಗೂಡಿ ಜನಾರ್ಧನದೇವರ ದೇವಸ್ಥಾನದ ಮುಂದೆ ಭೋಗ ಮಂಟಪವನ್ನು ನಿರ್ಮಿಸಲು ತರೀಜಮೀನನ್ನು ದಾನಮಾಡಿದರು.[4] ಕ್ರಿ.ಶ. ೧೫೨೨ರಲ್ಲಿ ಮಚಗೌಡ ಮತ್ತು ಇತರ ಗೌಡರು ಪ್ರಮುಖ ನಾನಾದೇಶಿ ಶೆಟ್ಟಿಗಳೊಡನೆ, ಮಹೇಶ್ವರ ದೇವರಿಗೆ ಹೊಳಲ್ಕೆರೆ ವೃತ್ತಿಯಲ್ಲಿ ಭೂಮಿ ಮತ್ತು ಸಂತೆಯ ಅನೇಕ ಸರಕುಗಳ ಮೇಲಿನ ತೆರಿಗೆಗಳನ್ನು ದಾನಮಾಡಿದರು.[5]

ವರ್ತಕರು ರಥೋತ್ಸವಗಳನ್ನು ಪ್ರಾರಂಭಿಸುತ್ತಿದ್ದರು. ಕ್ರಿ.ಶ. ೧೫೯೨ರಲ್ಲಿ ತಿನ್ನವೆಲ್ಲಿ ಜಿಲ್ಲೆಯ ಶ್ರೀವೈಕುಂಠಂ ತಾಲ್ಲೂಕಿನ ಕಕೋಳನಾಥ ದೇವಸ್ಥಾನದ ಪವಿತ್ರ ರಥಕ್ಕೆ ಜಖಂ ಆಗಲು ಇಲ್ಲೈಯತ್ತಕೂದಿ ವರ್ತಕರು ಹೊಸ ರಥವನ್ನು ಮಾಡಿಸಿದರು ಮತ್ತು ಪ್ರತಿ ವರ್ಷ ರಥೋತ್ಸವದ ವೆಚ್ಚಕ್ಕೆ ಪೆರನಲ್ಲೂರ್ ಗ್ರಾಮದ ವರಮಾನವನ್ನು (ಐವತ್ತು "ಪೊನ್") ಮತ್ತು ಐವತ್ತು "ಕಲಂ" ಬತ್ತವನ್ನು ಕೊಡುವುದಕ್ಕೆ ಏರ್ಪಾಡು ಮಾಡಿದರು.[6]

ಆ ಕಾಲದ ಪ್ರಸಿದ್ಧ ಪೋರ್ಚುಗೀಸ್ ಬರಹಗಾರ ಬಾರ್ಬೋಸ ಕ್ರಿ.ಶ. ೧೫೦೪ ರಿಂದ ೧೫೧೪ರ ವರೆಗೆ ವಿಜಯನಗರಕ್ಕೆ ಭೇಟಿ ಕೊಟ್ಟ ಸಂದರ್ಭದಲ್ಲಿ "ಚಟ್ಟಿ"ಗಳ ವಿಚಾರವಾಗಿ ಬರೆದಿದ್ದಾನೆ. ಬಾರ್ಬೋಸ ಪ್ರಕಾರ "ಚಟ್ಟಿ"ಗಳು ಮಲಬಾರ್‌ನಲ್ಲಿ ವಾಸಿಸುತ್ತಿದ್ದರು. ಅವರು ಕಂದುಬಣ್ಣದವರು, ಮತ್ತು ಬೊಜ್ಜು ಮೈಯುಳ್ಳವರು. ಅವರಲ್ಲಿ ಹೆಚ್ಚಿನವರು ದೊಡ್ಡ ವ್ಯಾಪಾರಿಗಳಾಗಿದ್ದು ಅಮೂಲ್ಯ ರತ್ನಗಳು, ಮುತ್ತುಗಳು, ಹವಳಗಳು ಮತ್ತು ಇತರ ಬೆಲೆಬಾಳುವ ವಸ್ತುಗಳನ್ನು ವ್ಯಾಪಾರ ಮಾಡುತ್ತಿದ್ದರು. ಚಿನ್ನ ಮತ್ತು ಬೆಳ್ಳಿ ವ್ಯಾಪಾರವನ್ನು ಮಾಡುತ್ತಿದ್ದರು. ಅವರು ಐಶ್ವರ್ಯವಂತರು ಮತ್ತು

1. *EC*, II, No. 344.
2. *EC*, IV, Ch. 119.
3. *EC*, V, Cn. 175.
4. *EC*, VI, Kd. 91.
5. *EC*, XI, Hk. 34.
6. 45 of 1916.

ಗೌರವಸ್ಥರು. ಅವರು ಸ್ವಚ್ಛವಾದ ಜೀವನವನ್ನು ನಡೆಸುತ್ತಿದ್ದರು. ತಮ್ಮದೇ ಆದ ಬೀದಿಗಳಲ್ಲಿ ವಿಶಾಲವಾದ ಮನೆಗಳನ್ನು ಹೊಂದಿದ್ದರು. ಅವರಿಗೆ ತಮ್ಮದೇ ಆದ ಪೂಜಾ ಮಂದಿರಗಳಿದ್ದವು ಮತ್ತು ಅವರು ಪೂಜಿಸುವ ಪ್ರತಿಮೆಗಳು ಬೇರೆಯದಾಗಿದ್ದುವು. ಅವರು ಸೊಂಟದಿಂದ ಮೇಲಕ್ಕೆ ನಗ್ನರಾಗಿರುತ್ತಿದ್ದರು. ಅವರು ಹೆಚ್ಚಿನ ಬಡ್ಡಿದರವನ್ನು ತೆಗೆದುಕೊಳ್ಳುತ್ತಿದ್ದರು. ಅವರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳುತ್ತಿದ್ದುದರಿಂದ ರಾಜರು ಅವರ ತಪ್ಪುಗಳನ್ನು ವಿಚಾರಿಸುತ್ತಿರಲಿಲ್ಲ. ರಾಜನು, ಅವರು ತಮ್ಮತಮ್ಮಲ್ಲೇ ನ್ಯಾಯವಿತರಣೆ ಮಾಡುತ್ತಿದ್ದುದರಿಂದ ತೃಪ್ತಿಹೊಂದಿದ್ದನು.[1]

**ವೀರಪಾಂಚಾಲರು :** ವೀರಪಾಂಚಾಲರಲ್ಲಿ ಅಕ್ಕಸಾಲಿಗರು, ಕಮ್ಮಟದಆಚಾರಿಗಳು, ಕಮ್ಮಾರರು, ಮರಗೆಲಸದವರು ಮತ್ತು ಕಲ್ಲುಕೆಲಸದವರು ಸೇರಿದ್ದರು.[2] ವೀರಪಾಂಚಾಲ ಶ್ರೇಣಿಯನ್ನು ಸೂಚಿಸಲು ಶಾಸನಗಳಲ್ಲಿ "ಪಂಚಹಣಂವರು", "ಪಂಚನಾನಂದರು", "ಪಂಚನುಲು", "ಪಾಂಚಾಲರು" ಎಂಬ ಪದಗಳನ್ನು ಉಪಯೋಗಿಸಲಾಗಿದೆ.

ವೀರಪಾಂಚಾಲರು ಸರ್ಕಾರದಿಂದ ತೆರಿಗೆಗಳ ಮಾಫಿ ಪಡೆದಿದ್ದರು. ಕ್ರಿ.ಶ. ೧೪೧೪ರ ಒಂದು ಶಾಸನವು ಹರಿಹರ ಮಹಾರಾಯ, ಅವರಿಗೆ ಆಸ್ಥಾನದಲ್ಲಿ ಸಿಂಹಾಸನವನ್ನು ತಯಾರುಮಾಡಿದುದಕ್ಕೆ ಪ್ರತಿಫಲವಾಗಿ, ಎತ್ತುಗಳು, ಎಮ್ಮೆಗಳು, ಗಾಡಿಗಳು, ಆಭರಣಗಳು ಮುಂತಾದುವುಗಳ ಮೇಲೆ ಮಾಡಿದ್ದ ತೆರಿಗೆಗಳ ಮಾಫಿಯನ್ನು ದೇವರಾಯನು ಸ್ಥಿರಕಾಯಮಾಡಿದನೆಂದು ತಿಳಿಸುತ್ತದೆ.[3]

ವೇತನಕ್ಕೆ ಸಂಬಂಧಿಸಿದ ಒಂದು ವಿಷಯವನ್ನು ಸಾಮೂಹಿಕ ಒಪ್ಪಂದದಿಂದ ತೀರ್ಮಾನಿಸಲಾಯಿತು.[4] ವೀರಪಾಂಚಾಲರು ತಮ್ಮ ಪ್ರಾಚೀನತೆಯಲ್ಲಿ ಹೆಮ್ಮೆಪಡುತ್ತಿದ್ದರು. ಕ್ರಿ.ಶ. ೧೩೭೨ರ ಒಂದು ಶಾಸನವು, ಸಮಸ್ತ ವೀರಪಾಂಚಾಲರು ಮನುವಂಶದ ಮೊದಲಿಗರು ಮತ್ತು ಹೋಲಿಸಲಸಾಧ್ಯವಾದಂತಹ ಗುಣವುಳ್ಳವರು, ಎಂದು ಮುಂತಾಗಿ ತೆರಕಣಾಂಬಿಯ ವೀರಪಾಂಚಾಲರ ವಿಷಯವಾಗಿ ತಿಳಿಸುತ್ತದೆ.[5]

ಅಧಿಕಾರಿಗಳು ಕೋಮುಗಳ ನಡುವೆ ಉದ್ಭವಿಸಿದ ಪ್ರಶ್ನೆಗಳನ್ನು ತೀರ್ಮಾನಿಸುತ್ತಿದ್ದ ಹಾಗೆ ಕಾಣಿಸುತ್ತದೆ. ಸದಾಶಿವರಾಯನ ಆಳ್ವಿಕೆಯಲ್ಲಿ ಆ ಕಾಲದ ಮುಖ್ಯ ಪಟ್ಟಣಗಳಲ್ಲೊಂದಾದ ಬೇಲೂರಿನಲ್ಲಿ ರೈತರು ಮತ್ತು ಪಾಂಚಾಲರ ನಡುವೆ ಒಂದು ವಿವಾದ ಉಂಟಾಯಿತು. ಈ ಶಾಸನದ ಪ್ರಕಾರ, ಸರ್ವಾಧಿಕಾರಿ ವೇದಾಂತಿ–ರಾಮರಾಜಯಪ್ಪ,೮೦ ಶ್ರೀವೈಷ್ಣವಬ್ರಾಹ್ಮಣರು, ರಾಮರಾಜಯ್ಯ ತಿರುಮಲರಾಜಯ್ಯನ

1. Barbosa, Duarte : A Portuguese, *A Discription of the Courts of East Africa and Malabar in the beginning of the Sixteenth Century*, Translated by Longworth Dames (2 vols.), London, 1918, II, pp. 70–73.
2. *EC*, IV, Ch. 119; *EC*, IX, Bn. 12.
3. *SII*, IX (ii), No. 437.
4. *EC*, IX, Kn. 110.
5. *EC*, IV, Gu. 34.

ನಿಯೋಗಿ ಬಾನದರಸಯ್ಯ ಮತ್ತು ರಾಮಪ್ಪಯ್ಯನ ನಿಯೋಗಿ ಸೇನಬೋವಸೆಟ್ಟಿ ಇವರೊಡಗೂಡಿ ಒಪ್ಪಂದವನ್ನು ಏರ್ಪಡಿಸಿದುದನ್ನು ದಾಖಲೆಮಾಡಿದೆ. ಈ ತೀರ್ಮಾನದ ಪ್ರಕಾರ, ಬೇಲೂರಿನ ದಕ್ಷಿಣದ ಬೀದಿಯಲ್ಲಿ ಪಾಂಚಾಲರು ಮನೆಗಳನ್ನು ಕಟ್ಟಲು, ಕೋಮಿನ ವಿಧಿಗಳನ್ನು ಆಚರಿಸಲು ಮತ್ತು ಆಭರಣಗಳನ್ನು ಮಾಡಲು, ವಿದ್ಯಾನಗರದ ರಥೋತ್ಸವಕಾಲದಲ್ಲಿ ಪಾಂಚಾಲರಿಗೆ ಕೊಟ್ಟದ್ದ ಹಕ್ಕುಗಳನ್ನು ಮತ್ತು ಸ್ಥಾನಗಳನ್ನು ಚನ್ನಿಗರಾಯದೇವಸ್ಥಾನದಲ್ಲೂ ಅನುಭವಿಸಬಹುದೆಂದು ತೀರ್ಮಾನಿಸಲಾಯಿತು.[1]

ಈ ಶ್ರೇಣಿಯು ಅವರ ಸಂಘದ ತೀರ್ಮಾನಗಳನ್ನು ಉಲ್ಲಂಘಿಸಿದರೆ ದಂಡವನ್ನು ವಿಧಿಸುವ ಅಧಿಕಾರವನ್ನು ಹೊಂದಿದ್ದಿತು. ತೆರಕಣಾಂಬಿ ವೀರಪಾಂಚಾಲರು, ಅವರ ದಾನಗಳನ್ನು ನಾಶಮಾಡಿದವರನ್ನು ಪಾಂಚಾಲರ ಕೋಮಿನಿಂದ, ಅವರ ವ್ಯಾಪಾರದಿಂದ, ಅವರ ಸಭೆಯಿಂದ ಮತ್ತು "ನಾಡು"ವಿನಿಂದ ಹೊರಹಾಕುವುದಾಗಿ ನಿಯಮ ಮಾಡಿದರು.[2] ಹೀಗೆ ಶ್ರೇಣಿಯ ಅಧಿಕಾರ ಅದರ ಸದಸ್ಯರ ಮೇಲೆ ಸಂಪೂರ್ಣವಾಗಿದ್ದಿತು.

ವೀರ ಪಾಂಚಾಲರ ಶ್ರೇಣಿಯು ತನ್ನ ಸದಸ್ಯರ ಮೇಲೆ ಮತೀಯ ಉದ್ದೇಶಕ್ಕೆ ತೆರಿಗೆ ವಿಧಿಸುವಷ್ಟು ಬಲವಾಗಿದ್ದಿತು. ಉದಾಹರಣೆಗೆ, ಕ್ರಿ.ಶ. ೧೪೫೮ರಲ್ಲಿ, ಎಣ್ಣೆ ನಾಡಿನ ಸಮಸ್ತ ಪಾಂಚಾಲರು, ಅನಿಲೇಶ್ವರ ದೇವರಿಗೆ ಗಂಧ, ಕಸ್ತೂರಿ, ಕುಂಕುಮ, ಕರ್ಪೂರ ಮತ್ತು ಮಳೆ ನೀರನ್ನು ಒದಗಿಸಲು ತಮ್ಮ ಹಲವು ಗ್ರಾಮಗಳಿಂದ, ತಲಾ ಒಂದು "ಹಣ"ದಂತೆ ಸಲ್ಲಿಸಿದರು.[3]

ಕಸಬು ವರ್ಗದವರು ದೇವಸ್ಥಾನಕ್ಕೆ ಸೇರಿದ ನಾಟ್ಯಗಾರ್ತಿಯರ ಅವಶ್ಯಗಳನ್ನು ಪೂರೈಸಲು ಸಾಮೂಹಿಕವಾಗಿ ವರ್ತಿಸುತ್ತಿದ್ದರು. ಕ್ರಿ.ಶ. ೧೫೭೨ರಲ್ಲಿ ತೆರಕಣಾಂಬಿ ಮತ್ತು ಅನೇಕ ಇತರ ಸ್ಥಳಗಳ ಸಮಸ್ತ ಪಾಂಚಾಲರು, ಇತರ ನಾಲ್ಕು ಸ್ಥಳಗಳ ಕಮ್ಮಾರರೊಡಗೂಡಿ ದೇವಸ್ಥಾನದ ನಾಟ್ಯಗಾರ್ತಿಯರಿಗೆ, ತಮ್ಮಲ್ಲಿ ಒಪ್ಪಿ ಒಂದು ದಾನಮಾಡಿದರು. ರಾಮಣ್ಣನ ಮಗಳು ನಾಗವ್ವೆ ದೇವಸ್ಥಾನಕ್ಕೆ ದಾನವಾಗಿ ಕೊಟ್ಟ ಕೇತವ್ವೆ ಎಂಬ ನಾಟ್ಯಗಾರ್ತಿಗೆ ತಮ್ಮ ದಯೆಯನ್ನು ತೋರಿಸಿದರು. ಈ ದಾನವನ್ನು ನಾಶಮಾಡಿದವರಿಗೆ ಪಾಂಚಾಲರು ಒಂದು ದಂಡವನ್ನು ವಿಧಿಸಿದರು.[4]

ವಿಜಯನಗರದ ಕೊನೆಗಾಲದಲ್ಲಿ ಪಾಂಚಾಲರ ಮೇಲೆ ಹಲವು ನಿರ್ಬಂಧಗಳನ್ನು ವಿಧಿಸಿದ ಹಾಗೆ ಕಾಣುತ್ತದೆ. ಉದಾಹರಣೆಗೆ, ಕ್ರಿ.ಶ. ೧೬೩೨ರ ಒಂದು ಶಾಸನದ ಪ್ರಕಾರ ಪಾಂಚಾಲದೇವರ ಅವಲಂಬಿಗಳಿಗೆ ಅವರ ಗಡಿಯೊಳಗೆ ತಮ್ಮ ಉತ್ಸವಗಳನ್ನು ಮತ್ತು ವಿವಾಹ ಮೆರವಣಿಗೆಗಳನ್ನು ನಡೆಸಬಹುದೆಂದು ನಿಯಮ ಮಾಡಲಾಯಿತು.[5]

---

1. *EC*, V, Bl. 5.
2. *EC*, IV, Gu. 34.
3. *Ibid*.. Ch. 119.
4. *EC*, IV, Gu. 34.
5. *EC*, IX, Hr. 46.

ಕೈಕೋಳರು : ನೇಯ್ಗೆಯವರು ಸಾಮಾನ್ಯವಾಗಿ ಕೈಕೋಳರೆಂದು ಕರೆಯಲ್ಪಟ್ಟು ಅವರು ಒಂದು ಪ್ರಮುಖವಾದ ಮತ್ತು ಪ್ರಭಾವವುಳ್ಳವರ್ಗವಾಗಿದ್ದರು. ಅವರು ಜನರಿಗೆ ಆವಶ್ಯಕವಾದ ಉಡಿಗೆಗಳನ್ನು ಒದಗಿಸುತ್ತಿದ್ದರು. ಅವರು ದೇವಸ್ಥಾನದ ಆಡಳಿತದಲ್ಲಿ ಮತ್ತು ಸ್ಥಳೀಯ ತೆರಿಗೆಗಳನ್ನು ವಿಧಿಸುವುದರಲ್ಲಿ ಸ್ವಲ್ಪ ಹಕ್ಕನ್ನು ಹೊಂದಿದ್ದರು. ಅವರು ಸಮಸ್ತ ಶುಭ ಮತ್ತು ಅಶುಭ ಸಂದರ್ಭಗಳಲ್ಲಿ ಶಂಖ ಮತ್ತು ಪಲ್ಲಕ್ಕಿಯನ್ನು ಉಪಯೋಗಿಸುವ ಹಲವು ನಿರ್ದಿಷ್ಟ ಹಕ್ಕುಗಳನ್ನು ಹೊಂದಿದ್ದರು. ತುಳುವ ಸೇನಾನಿಯ ನಿಯೋಗಿಯೊಬ್ಬ ನೇಯ್ಗೆಯವರಿಗೆ ಪೆನ್ನೈನದಿಯ ದಂಡೆಯ ಮೇಲೆ ವಾಸಿಸುತ್ತಿದ್ದ ನೇಯ್ಗೆಯವರು ಹೊಂದಿದ್ದ ಹಕ್ಕುಗಳನ್ನು ಕೊಟ್ಟನು.[1] ಕಾಂಚಿಯ ಕೈಕೋಳರು ಹೊಂದಿದ್ದ "ದಂಡು" (ಪಲ್ಲಕ್ಕಿ) ಮತ್ತು "ಸಂಗು" (ಶಂಖ)ಗಳನ್ನು ತಮ್ಮ ಲಾಂಛನವಾಗಿ ಉಪಯೋಗಿಸುತ್ತಿದ್ದ ಹಕ್ಕುಗಳನ್ನು ಬ್ರಹ್ಮದೇಶದ ಕೈಕೋಳರಿಗೆಲ್ಲ ಕೊಡಲಾಯಿತು.[2]

ಅವರು ಆರ್ಥಿಕವಿಷಯಗಳಲ್ಲಿ ಕೆಲವು ಹಕ್ಕುಗಳನ್ನು ಪಡೆದಿದ್ದರು. ಕ್ರಿ. ಶ. ೧೩೭೦ರಲ್ಲಿ ಒಬ್ಬ ಮಹಾಮಂಡಲೇಶ್ವರನಿಂದ ಅವರು ಕಳ್ಳತನ ಕಿರುಕುಳ, ವ್ಯಭಿಚಾರ ಮುಂತಾದುವುಗಳಿಗೆ ತೆರಬೇಕಾಗಿದ್ದ ದಂಡಗಳನ್ನು ಮನ್ನಮಾಡಿದ ಒಂದು ಶಾಸನವನ್ನು ಪಡೆದರು. ಅಲ್ಲದೆ ದನಗಳನ್ನು ಹೊಂದಿದ್ದವರು ಮತ್ತು ಮುಫತ್ತಾಗಿ ಮೇಯಲು ಅರ್ಧ "ಗದ್ಯಾನ" ಕೊಡಬೇಕೆಂದು ನಿಯಮಮಾಡಲಾಯಿತು.[3]

ಕ್ರಿ.ಶ. ೧೩೭೦ರಲ್ಲಿ ಬುಕ್ಕರಾಯನ ಮಗ ಪ್ರಾಂತ್ಯಾಧಿಕಾರಿ ಚಿಕ್ಕಕಂಪಣ ಒಡೆಯರು ಹಾಕಿದ್ದ ತೆರಿಗೆಗಳಿಂದ, ಹತ್ತಲಕೋಟೆಯ ಕೈಕೋಳರು ಮಾಫಿ ಪಡೆದರು.[4] ತಿರುಕ್ಕಲಿಕುಂಡ್ರಂನಲ್ಲಿ ವಾಸಿಸುತ್ತಿದ್ದ ಕೈಕೋಳರು ಕಂಪಣ ಒಡೆಯರಿಂದ ಕೆಲವು ತೆರಿಗೆಗಳ ರಿಯಾಯಿತಿ ಪಡೆದರು.[5] ಈ ಕೈಕೋಳ ನೇಯ್ಗೆಯವರು ಆ ಕಾಲದ ಕಂದಾಯದ ಚರಿತ್ರೆಯಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತಾರೆ. ಕ್ರಿ.ಶ. ೧೪೫೦ರಲ್ಲಿ ಮಲ್ಲಣ್ಣ ಒಡೆಯರು ಪಡಿತಿರುವಲ್ಲಿದಯಂ ಗ್ರಾಮದ ಹದಿನೆಂಟು ಜಾತಿಗಳಲ್ಲಿ ಸೇರಿದ್ದ ಶೆಟ್ಟಿಗಳು, ಕೈಕೋಳರು ಮತ್ತು ವನಿಗರು ಹಲವು ತೆರಿಗೆಗಳನ್ನು ಕೊಡಬೇಕೆಂದು ಆಜ್ಞೆಯನ್ನು ಹೊರಡಿಸಿದನು. ಈ ಶಾಸನದ ಪ್ರಕಾರ, ಇದನ್ನು ವಿರೋಧಿಸಿದವರು, ಆ ಅಪರಾಧಕ್ಕೆ ಸೆಲಿಯಂಗನಲ್ಲೂರಿನಲ್ಲಿ ಕೊರೆದಿದ್ದ ಶಾಸನದ ಪ್ರಕಾರ ಶಿಕ್ಷೆ ಅನುಭವಿಸಬೇಕೆಂದು ತಿಳಿಸುತ್ತದೆ.[6]

---

1. 368 of 1917 ; *ARSIE*, 1918 (ii), para. 70
2. 162 of 1918 *ARSIE* 1918 (ii), para 68 ; 473 of 1921 ; 41 of 1922 ; 186 of 1910.
3. *EC*, IV, Ch. 97.
4. *Ibid* ,
5. 170 of 1933.
6. *ARSIE*, 1918, p. 166.

ಕೈಕೋಳರು ದೇವಾಲಯಗಳನ್ನು ಕಟ್ಟಿಸುವಷ್ಟು ಶ್ರೀಮಂತರಾಗಿದ್ದರು. ಕ್ರಿ.ಶ. ೧೫೧೭-೧೮ರಲ್ಲಿ ಅಂಬಸಮುದ್ರಂನಲ್ಲಿ ಲಕ್ಷ್ಮೀನಾರಾಯಣಪೆರುಮಾಳ್ ದೇವಸ್ಥಾನದ ಸುತ್ತ ವಾಸಿಸುತ್ತಿದ್ದ ಕೈಕೋಳರು, ಲಕ್ಷ್ಮೀನಾರಾಯಣದೇವರು ಮತ್ತು ಆತನ ಪುತ್ರ ಭೂತಾಲವೀರರಾಮನಿಗೆ ಒಂದು ದೇವಾಲಯವನ್ನು ಕಟ್ಟಿಸಿ, ದೇವಾಲಯದ ಅಡಿಗೆ ಮನೆಯ ಆವಶ್ಯಕತೆಗಳಿಗೆ ಏರ್ಪಾಡುಮಾಡಿ, ಕೈಕೋಳರು ದೇವಸ್ಥಾನದಲ್ಲಿ ಇತರ ಹಕ್ಕು ಗಳೊಡನೆ ಒಂದು ಹಾರವನ್ನು ವಂಶಪಾರಂಪರ್ಯವಾಗಿ ಹೊಂದಿರಬೇಕೆಂದು ಏರ್ಪಾಡು ಮಾಡಲಾಯಿತು.[1]

ಕೈಕೋಳರು ಹಲವು ಹಕ್ಕುಗಳನ್ನು ಅನುಭವಿಸುತ್ತಿದ್ದುದರಲ್ಲಿ ಯಾವ ಅನುಮಾನವೂ ಇಲ್ಲ. ಕ್ರಿ.ಶ. ೧೫೪೭ರಲ್ಲಿ ಸದಾಶಿವರಾಯನ ಆಳ್ವಿಕೆಯಲ್ಲಿ ರಾಜನ ನಿಯೋಗಿ ಮತ್ತು ತಿರುವಡಿರಾಜ್ಯದ ಪ್ರಾಂತ್ಯಾಧಿಕಾರಿ ಸೂರಪ್ಪನಾಯಕ "ಕೈಕೋಳ"ರಿಗೆ ಸಂಬಂಧಿಸಿದ ಒಂದು ಶಾಸನದ ಪ್ರಕಾರ, ಆ ಸ್ಥಳದಲ್ಲಿ ಕೈಕೋಳರಿಗೆ ಹಲವು ಹಕ್ಕುಗಳನ್ನು ಕೊಡಲಾಯಿತು.[2]

**ಗಾಣಿಗರು :** ಕಾಂಚಿ ಮತ್ತು ಅದರ ಉಪನಗರಗಳ ಮತ್ತು ಇತರ ನಗರಗಳ ಗಾಣಿಗರು ಒಂದು ದೇವಸ್ಥಾನದಲ್ಲಿ ಸಭೆ ಸೇರಿ ತಮ್ಮ ವಿಚಾರವಿನಿಮಯಮಾಡಿಕೊಳ್ಳು ತ್ತಿದ್ದರೆಂದು ಒಂದು ಶಾಸನದಿಂದ ತಿಳಿಯುತ್ತದೆ. ಕಾಂಚಿಪುರದಲ್ಲಿ ಮತ್ತು ಸುತ್ತಮುತ್ತಲಲ್ಲಿ ಗಾಣಿಗರ ಶ್ರೇಣಿಯು ಇದ್ದಿತು. ಅವರು ದೇವಸ್ಥಾನಕ್ಕೆ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ದಾನಮಾಡುವುದಕ್ಕೆ ಸಾಮೂಹಿಕವಾಗಿ ವರ್ತಿಸುತ್ತಿದ್ದರು. ಕಾಂಚಿಯ ಗಾಣಿಗರು ಆ ದೇವಸ್ಥಾನದ ಸೇವೆಗೆ ಧನ ಸಹಾಯಮಾಡುತ್ತಿದ್ದರು.[3] ಪ್ರತಿ ವ್ಯಕ್ತಿ ಕೊಡಬೇಕಾಗಿದ್ದ ಪಾಲನ್ನು ನಿರ್ಧರಿಸಬಹುದಾಗಿತ್ತು.[4]

**ಉಪ್ಪುಗಾರರು :** ಉಪ್ಪುಗಾರರ ಶ್ರೇಣಿ ಅಸ್ತಿತ್ವದಲ್ಲಿದ್ದುದನ್ನು, ಅವರು ಸರ್ಕಾರ ದಿಂದ ಪಡೆದುಕೊಂಡ ದಾನಗಳಿಂದ ತಿಳಿದುಕೊಳ್ಳಬಹುದು. ಕ್ರಿ.ಶ. ೧೫೫೫ರಲ್ಲಿ ಸದಾಶಿವರಾಯನ ಕಾಲದಲ್ಲಿ ಗೆನಬೂರು ಐರಿಯ ಕೋನಾಯದೇವ ಮಹಾ ಅರಸು ಮೊಳಕಾಲ್ಮೂರು ತಾಲ್ಲೂಕು ಉಪ್ಪುಗಾರರಿಗೆ ಕಂದಾಯ ಮಾಫಿ ಮಾಡಿದ ಭೂಮಿ ಯನ್ನು ದಾನಮಾಡಿದನು. ಇದನ್ನು ಹನ್ಯ ಹೆಬ್ಬಾರ್ ಬೊಲವಪ್ಪ ಅದೇ ವರ್ಷ ಗೌಡ ಪ್ರಜೆಗಳೊಡನೆ ಸ್ಥಿರಪಡಿಸಿದನು.[5]

**ಕುಂಬಾರರು :** ಕುಂಬಾರರು ತಮ್ಮದೇ ಆದ ಶ್ರೇಣಿಗಳನ್ನು ಹೊಂದಿದ್ದರೆಂದು ಶಾಸನಗಳಿಂದ ತಿಳಿಯಬಹುದು. ಸದಾಶಿವರಾಯ ಸಾಮ್ರಾಟನಾಗಿದ್ದ ಕಾಲದ ಒಂದು

---

1. 312 of 1916.
2. 41 of 1922.
3. 261 of 1909.
4. *EC*, IV, Ch. 119-1398 A.D.
5. *EC*, XI, Mk. 8.

ಶಾಸನವು, ರಾಮರಾಜನಾಯಕ " ಕುಂಬಾರ ಸ್ವಾಮಿ "ಗಳಿಗೆ ಕೊಟ್ಟ ಶಾಸನವೊಂದನ್ನು ದಾಖಲೆಮಾಡಿದೆ.[1] ಕ್ರಿ.ಶ. ೧೫೮೦ರಲ್ಲಿ " ಕುಂಬಾರಸ್ವಾಮಿ "ಗಳು ಸರ್ಕಾರದಿಂದ ಒಂದು ಶಾಸನವನ್ನು ಪಡೆದರು.[2]

ಈ ರೀತಿ ಶ್ರೇಣಿಗಳು, ಮುಖ್ಯ ವಿಷಯಗಳನ್ನು ತೀರ್ಮಾನಿಸುವುದರಲ್ಲಿ ವಿಶೇಷ ಪ್ರಭಾವ ಹೊಂದಿದ್ದುವು ಮತ್ತು ಅವು ಸಾಮೂಹಿಕವಾಗಿ ವರ್ತಿಸುತ್ತಿದ್ದುವು. "ಮಿತಾಕ್ಷರ", ಶ್ರೇಣಿಗಳಿಗೆ ನ್ಯಾಯಬದ್ಧ ಸ್ಥಾನವನ್ನು ಕೊಡುತ್ತದೆ. ಅವು ಮೊಕದ್ದಮೆಗಳನ್ನು ತೀರ್ಮಾನಿಸಲು, ನ್ಯಾಯಾಲಯಗಳಾಗಿ ವರ್ತಿಸಬಹುದಾಗಿತ್ತು. ಅವು "ಕುಲ"ಗಳಿಂದ ಮೊರೆಯಾಗಿ ಬಂದ ಮೊಕದ್ದಮೆಗಳನ್ನು ತೀರ್ಮಾನಿಸಬಹುದಾಗಿತ್ತು.[3] ಶ್ರೇಣಿಗಳಿಗೆ ಸಂಬಂಧಿಸಿದ ನಿಯಮಗಳನ್ನು ಲಿಖಿತವಾಗಿಡಬೇಕಾಗಿದ್ದಿತು.[4] ರಾಜನು ಶ್ರೇಣಿಗಳ ವಿಶೇಷ ಲಕ್ಷಣಗಳನ್ನು ಕಾಪಾಡಿ ಅವುಗಳ ಪ್ರಾಚೀನ ನಿಯಮಗಳನ್ನು ಪಾಲಿಸಬೇಕಾಗಿದ್ದಿತು.[5]

ಡಾ. ಮಹಾಲಿಂಗಂರವರು, ಈಗಿನ ಕಾಲದಲ್ಲಿ ನಾವು ಸಾಮೂಹಿಕ ಜೀವನದ ಕಾರ್ಮಿಕ ಸಂಘಗಳ, ವೃತ್ತಿ ಸಂಘಗಳ, ಪ್ರಜೆಗಳ ಸಂಘಗಳ ಮುಂತಾದ ಅಧಿಕಾರ, ಪ್ರಾಮುಖ್ಯತೆ ಮತ್ತು ಪ್ರಭಾವವನ್ನು ಕಾಣುತ್ತಿರುವೆವೆಂದು ತಿಳಿಸುತ್ತಾರೆ. ಈ ರೀತಿಯ ಸಂಸ್ಥೆಗಳು ಒಂದಲ್ಲ ಒಂದು ವಿಧದಲ್ಲಿ ಪ್ರಾಚೀನ ಮತ್ತು ಮಧ್ಯ ಯುಗ ಭಾರತದಲ್ಲಿ ಸ್ಥಳೀಯ ವಿಷಯಗಳಲ್ಲಿ ಅಧಿಕಾರ ಹೊಂದಿದ ಸಂಸ್ಥೆಗಳಾಗಿದ್ದುವೆಂದು ತಿಳಿಸುತ್ತಾರೆ. ಅವುಗಳಲ್ಲಿ " ನಾನಾ ದೇಶಿಗಳು ", " ನಾಡು " " ಐಯ್ಯಾವೊಳೆ ", " ವೃತ್ತಿಶ್ರೇಣಿಗಳು," " ಸಭಾ ", " ಊರ್ " ಅಥವಾ " ಊರು " ಮುಂತಾದುವು ಸೇರಿದ್ದುವು.[6] ವಿಜಯನಗರ ಕಾಲದಲ್ಲಿ, ಆಡಳಿತದಲ್ಲಿ ಶ್ರೇಣಿಗಳು ಮುಖ್ಯ ಪಾತ್ರ ವಹಿಸಿದ್ದುವು. ಅವು ಜನರ ಅನುಕೂಲತೆಗಳನ್ನು ಹೆಚ್ಚಿಸಿ, ಸರ್ಕಾರದ ಕೆಲಸವನ್ನು ಅನುಬಂಧಿಸುತ್ತಿದ್ದಿತು. ಶ್ರೇಣಿಗಳು ತಮ್ಮ ಕರ್ತವ್ಯಗಳನ್ನು ಸಂಸ್ಥಾರೂಪವಾಗಿ ನೆರವೇರಿಸುತ್ತಿದ್ದುವು. ಶ್ರೇಣಿಗಳು ಪ್ರಭಾವ ಹೊಂದಿಲ್ಲದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳಾವುವೂ ಇರಲಿಲ್ಲ. ಶ್ರೇಣಿಗಳ ಚಟುವಟಿಕೆಗಳು ವಿಜಯನಗರ ಸಾಮ್ರಾಜ್ಯದಲ್ಲಿ ವಿವಿಧ ವ್ಯವಸ್ಥಿತ ಸಮೂಹಗಳಲ್ಲಿದ್ದ ಒಗ್ಗಟ್ಟು ಮತ್ತು ಸಹಕಾರ ಪ್ರವೃತ್ತಿಗೆ ಸಾಕ್ಷ್ಯವಾಗಿವೆ.

---

1. *EC*, IV, Yl. 2.
2. *Ibid.*,
3. Vijnanesvara: *op.cit.*, V. 30.
4. *Ibid.*, V. 22.
5. *Ibid.*, V. 192.
6. Mahalingam: *SIP*, p. 21.

## ಅಧ್ಯಾಯ ೬

# ಉ ಪ ಸ ಂ ಹಾ ರ

ನಾವು ವಿಜಯನಗರ ಸಾಮ್ರಾಜ್ಯದ ಸ್ಥಳೀಯ ಸಂಸ್ಥೆಗಳ ವಿವರಣೆ, ಅವುಗಳ ವ್ಯವಸ್ಥೆ ಮತ್ತು ಅಧಿಕಾರಗಳನ್ನು ಪರಿಶೀಲಿಸಿದ್ದೇವೆ. ಈ ಕೃತಿಯನ್ನು ಮುಕ್ತಾಯ ಗೊಳಿಸುವ ಮುಂಚೆ ನಮ್ಮ ಅಧ್ಯಯನದ ಕೆಲವು ಫಲಿತಾಂಶಗಳನ್ನು ಸೂಚಿಸಬಹುದು.

ವಿಜಯನಗರ ಕಾಲದ ಸ್ಥಳೀಯ ಸಂಸ್ಥೆಗಳ ಮೊದಲನೆಯ ಲಕ್ಷಣ ಅವುಗಳ ವೈವಿಧ್ಯತೆ. "ಗ್ರಾಮ ಸಭೆ," "ಮಹಾಜನ" ಸಭೆ, "ಮಹಾನಾಡು" ಮತ್ತು "ನಾಡು" ಸಭೆಗಳು, ಪೌರಸಭೆ ಮತ್ತು ಅನೇಕ ಶ್ರೇಣಿ ವ್ಯವಸ್ಥೆಗಳು ಇದ್ದುವು.

ಎರಡನೆಯದಾಗಿ, ನಮ್ಮ ಸಮೀಕ್ಷೆಯಿಂದ ವಿಜಯನಗರ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳು ಅಳಿದು ಹೋಗಿರಲಿಲ್ಲವೆಂದೂ ಮತ್ತು ಸ್ವಾಯತ್ತೆಯನ್ನು ಹೊಂದಿತ್ತೆಂಬುದು ಸ್ಪಷ್ಟವಾಗಿದೆ. ಇದು ಅವುಗಳು ಪ್ರಜೆಗಳ ಸಾಮಾನ್ಯ ಅನುಕೂಲತೆಗಳನ್ನು ಹೆಚ್ಚಿಸುವ ಅನೇಕ ಉಪಯುಕ್ತ ಚಟುವಟಿಕೆಗಳಿಂದ ಸ್ಪಷ್ಟವಾಗುತ್ತವೆ. ಈ ಸಂಸ್ಥೆಗಳು ಆಧುನಿಕ ಸರ್ಕಾರಗಳು ನೆರವೇರಿಸುವ ಕಾನೂನು, ಕಾರ್ಯನಿರ್ವಾಹಕ ಮತ್ತು ನ್ಯಾಯ ವಿತರಣೆ ಅಧಿಕಾರಗಳನ್ನು ಚಲಾಯಿಸುತ್ತಿದ್ದುವು. ಗ್ರಾಮಸಭೆಯು "ಊರು", "ಒಕ್ಕಲು", "ಪ್ರಜೆ", "ಹಲರು", "ಜನನಿ", "ಜಗತ್ತು", "ಗಾಂಕಾರಿಯ", ಅಗ್ರಹಾರದಲ್ಲಿ "ಮಹಾಜನ ಸಭೆ" ಮತ್ತು ನಾಡಿನಲ್ಲಿ "ನಾಡು, ಸಭೆ", ನಾವು ತಿಳಿದಿರುವ ಹಾಗೆ ದಾನದ ಉದ್ದಿಶ್ಯದಿಂದ ಅಥವಾ ಸಾರ್ವಜನಿಕ ಉಪಯೋಗದ ಉದ್ದೇಶಗಳಿಗೆ ಭೂಮಿ ಯನ್ನು ವಿಕ್ರಯಿಸುತ್ತಿದ್ದುವು ಅಥವಾ ಪಡೆಯುತ್ತಿದ್ದುವು. ಅವು ತೆರಿಗೆಗಳನ್ನು ವಸೂಲು ಮಾಡುತ್ತಿದ್ದುವು ಅಥವಾ ಮಾಫಿಮಾಡುತ್ತಿದ್ದುವು, ಹೊಸ ತೆರಿಗೆಗಳನ್ನು ಹೇರುತ್ತಿದ್ದುವು, ಹಲವು ಸಂದರ್ಭಗಳಲ್ಲಿ ನ್ಯಾಯ ವಿತರಣೆ ಮಾಡುತ್ತಿದ್ದುವು, ಅವುಗಳ ಎಲ್ಲೆಯೊಳಗಿನ ದೇವಸ್ಥಾನಗಳ ಹತೋಟಿ ಹೊಂದಿದ್ದುವು ಮತ್ತು ಇನ್ನೂ ಅನೇಕ ಸಾರ್ವಜನಿಕ ಕರ್ತವ್ಯಗಳನ್ನು ಮಾಡುತ್ತಿದ್ದುವು. ಅವು, ಜನಜೀವನದ, ಆರ್ಥಿಕ ಮತ್ತು ಸಾಮಾಜಿಕ ಮತ್ತು ಧಾರ್ಮಿಕ ಜೀವನಕ್ಕೆ ಸಂಬಂಧಪಟ್ಟ ನಿಯಮಗಳನ್ನು ಮಾಡಿ ಮೇಲ್ವಿಚಾರಣೆ ನಡೆಸುತ್ತಿದ್ದುವು. ಪೌರ ಕರ್ತವ್ಯಗಳನ್ನು ಮಾಡಿ, ಸಾಮಾನ್ಯ ಆಡಳಿತಕ್ಕೆ ನೆರವಾಗುತ್ತಿದ್ದುವು. "ಮಹಾನಾಡು" ಮತ್ತು ಇತರ ದೊಡ್ಡ ಸಭೆಗಳು ಸಮಾಜದ ಏಳಿಗೆಗೆ ಕಂಕಣಬದ್ಧವಾಗಿದ್ದುವು: "ನಗರ" ಅಥವಾ ಪೌರಸಭೆಗಳಲ್ಲಿ ಶ್ರೇಣಿ ಪ್ರಮುಖ ಪಾತ್ರವಹಿಸಿ ಪೌರ ಕರ್ತವ್ಯಗಳನ್ನು ಮಾಡಿ, ಪೌರ ಜೀವನವನ್ನು ನಿಯಮಬದ್ಧಮಾಡಿದ್ದಿತು. ಈ ಸ್ಥಳೀಯ ಸಂಸ್ಥೆಗಳ ಬಹುಮುಖ ಚಟುವಟಿಕೆಗಳು, ಅವು ತಮ್ಮ ಪ್ರಾದೇಶಿಕ ಆಡಳಿತ ವಿಭಾಗಗಳಲ್ಲಿ ಹೊಂದಿದ್ದ ಸ್ವಾಯತ್ತ ಅಧಿಕಾರಕ್ಕೆ ಸಾಕ್ಷ್ಯವಾಗಿವೆ.

ಮೂರನೆಯದಾಗಿ, ಈ ಸ್ಥಳೀಯ ಸಂಸ್ಥೆಗಳು ಪ್ರಾತಿನಿಧ್ಯ ಗುಣ ಹೊಂದಿದ್ದುದರಿಂದ, ಜನಪ್ರಿಯವಾಗಿದ್ದಿರಬೇಕು. ಗ್ರಾಮ ಸಭೆಯು "ಗ್ರಾಮದ ಗೌಡಗಳು" ಅಥವಾ "ಒಕ್ಕಲು" "ಸಮಸ್ತಪ್ರಜೆಗಳು" ಅಥವಾ "ಹಲರು" ಇವರುಗಳನ್ನೊಳಗೊಂಡಿತ್ತು. "ಗೌಡಿಕೆ" ಅಥವಾ ಗ್ರಾಮಮುಖ್ಯಸ್ಥನ ಹುದ್ದೆಯು ಬಯಸತಕ್ಕದ್ದಾಗಿತ್ತು. ಅವನು ಗ್ರಾಮಸಭೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿದ್ದನು. "ಮಹಾಜನ" ಸಭೆಯಲ್ಲಿ ಅಗ್ರಹಾರದ ಪಾಲುದಾರರು ಸದಸ್ಯರಾಗಿದ್ದರು ಮತ್ತು ಅವು "ಬುದ್ಧಿವಂತರು", "ಗ್ರಾಮಹೆಬ್ಬಾರುವ", "ಪ್ರಭು", "ಒಡೆಯ", "ಮೂಲಿಗರು" ಮುಂತಾದ ಜನಪ್ರಿಯನಾಯಕರನ್ನು ಹೊಂದಿದ್ದುವು. "ನಾಡು" ಸಭೆಯಲ್ಲಿ ಗ್ರಾಮಗಳನ್ನು ಪ್ರತಿನಿಧಿಸುವ ಗ್ರಾಮಮುಖ್ಯಸ್ಥರು, ನಾಡಿನ ನಿವಾಸಿಗಳ ಪ್ರತಿನಿಧಿಗಳು ಮತ್ತು ಅನೇಕಸಲ ವ್ಯಾಪಾರಶ್ರೇಣಿಗಳು ಮತ್ತು ಅಗ್ರಹಾರಗಳ ಪ್ರತಿನಿಧಿಗಳು ಇದ್ದರು. ಸಾಮೂಹಿಕ ಹಿತಗಳು ಶ್ರೇಣಿಗಳ ವ್ಯವಸ್ಥೆಗೆ ಕಾರಣವಾಯಿತು. ಅವು ಒಂದೇ ಕಸಬನ್ನು ನಡೆಸುವ ತಮ್ಮ ಸದಸ್ಯರ ಹಿತರಕ್ಷಣೆಮಾಡುತ್ತಿತ್ತು. ಶ್ರೇಣಿ ವ್ಯವಸ್ಥೆಯು ಪೌರಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುವು. ಅದರ ಅಧ್ಯಕ್ಷ "ಪಟ್ಟಣಸ್ವಾಮಿ", ಅನೇಕವೇಳೆ ಪೌರಾಧ್ಯಕ್ಷನಾಗಿದ್ದನು. ಪೌರಸಭೆಯು "ಪ್ರಜೆಗಾವುಂಡರು" "ಪುರಗಳ", "ಮಠಗಳ" ಮತ್ತು ಪೌರಾಡಳಿತ ಅಧಿಕಾರಿಗಳ ಪ್ರತಿನಿಧಿಗಳನ್ನು ಒಳಗೊಂಡಿದ್ದಿತು. ಹೀಗೆ ಈ ಎಲ್ಲ ಸ್ಥಳೀಯ ಸಂಸ್ಥೆಗಳು, ಪ್ರಜೆಗಳ ಪ್ರತಿನಿಧಿಗಳನ್ನೊಳಗೊಂಡಿತ್ತು ಮತ್ತು ಅವುಗಳ ಪ್ರಾತಿನಿಧ್ಯಲಕ್ಷಣ ಮೆಚ್ಚತಕ್ಕದ್ದು.

ನಾಲ್ಕನೆಯದಾಗಿ, ಈ ಸ್ಥಳೀಯ ಸಂಸ್ಥೆಗಳಲ್ಲಿ ಸಾಮೂಹಿಕವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರು. ಅದರ ಸಂಸ್ಥಾಗುಣ ಮೆಚ್ಚತಕ್ಕದ್ದು. ಅವರು ಚರ್ಚೆಮಾಡಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದುದರಿಂದ ಈ ವಿಷಯ ಸ್ಪಷ್ಟವಾಗಿದೆ. ತೀರ್ಮಾನವನ್ನು ಒಮ್ಮತವಾಗಿ ತೆಗೆದುಕೊಂಡುದಕ್ಕೆ ಶಾಸನಗಳಲ್ಲಿ "ಒಪ್ಪಿ", "ಸರ್ವೈಕಮತ್ಯವಾಗಿ", "ಐಕಸ್ವಾಮ್ಯವಾಗಿ", "ಒಡಂಬಟ್ಟು" ಮುಂತಾದ ಪದಗಳನ್ನು ಉಪಯೋಗಿಸಲಾಗಿದೆ. ಚರ್ಚೆಯಿಂದ ಒಮ್ಮತದ ನಿರ್ಧಾರವಾಗಿರಬೇಕು. ಪಟ್ಟಣಗಳಲ್ಲಿದ್ದ ನಗರ ವ್ಯವಸ್ಥೆ ಮತ್ತು ಮುಖ್ಯವಾಗಿ ಪೆನುಗೊಂಡೆ ಪೌರಾಡಳಿತ, ಪೌರಸಭೆ ಕೆಲಸಮಾಡುವುದರಲ್ಲಿ ಅನುಸರಿಸುತ್ತಿದ್ದ ಪ್ರಜಾಸತ್ತಾತ್ಮಕಗುಣವನ್ನು ತೋರಿಸುತ್ತದೆ. ಹೀಗೆ ಸಾರ್ವಜನಿಕ ಅಭಿಪ್ರಾಯ ಅವುಗಳ ಸಮಾಲೋಚನೆಗಳಲ್ಲಿ ಪ್ರಭಾವ ಬೀರಿ ಆ ಸಂಸ್ಥೆಗಳು ಜನಪ್ರಿಯವಾಗಿದ್ದುವು.

ಕೊನೆಯದಾಗಿ, ಸ್ಥಳೀಯ ಸಂಸ್ಥೆಗಳ ಸ್ವಾಯತ್ತೆಯನ್ನು ತುಳಿದುಹಾಕಲು ವಿಜಯನಗರ ಸಾಮ್ರಾಟರು ಯಾವ ಕ್ರಮವನ್ನೂ ಕೈಗೊಂಡಂತೆ ಕಾಣುವುದಿಲ್ಲ. ಆದರೆ, ರಾಜ್ಯದ ಉತ್ತರಗಡಿಯಲ್ಲಿ ಎಡೆಬಿಡದೆ ಯುದ್ಧನಡೆಯುತ್ತಿದ್ದುದರಿಂದ ಆ ಭಾಗದಲ್ಲಿ ಈ ಸಂಸ್ಥೆಗಳು ಬಲಹೀನವಾಗಿದ್ದುವು. ಕೃಷ್ಣದೇವರಾಯನ ಆಳ್ವಿಕೆಯನಂತರ ಸಾಮಂತರು ಬಲಗೊಂಡರು. ಇದು ರಕ್ಕಸತಂಗಡಿ (ತಾಳೀಕೋಟೆ) ಕದನಾನಂತರ

ಸ್ವಾಯತ್ತಸಂಸ್ಥೆಗಳ ಅವನತಿಗೆ ಕಾರಣವಾಯಿತು. ಅಲ್ಲದೆ ವಿಜಯನಗರಪತನದನಂತರ ವ್ಯಾಪಾರ ಕುಗ್ಗಿದುದರಿಂದ ಶ್ರೇಣಿಗಳ ಅವನತಿ ಉಂಟಾಯಿತು. ವಿಜಯನಗರ ಸಾಮ್ರಾಟರು ಸ್ಥಳೀಯ ಸಂಸ್ಥೆಗಳಿಗೆ ವಿರೋಧವಾಗಿರಲಿಲ್ಲ. ಸ್ಥಳೀಯ ಸಂಸ್ಥೆಗಳಲ್ಲಿ ಸಹಾನುಭೂತಿಹೊಂದಿ, ಅವು ಮುಂದುವರಿಯುವುದಕ್ಕೆ ಅವಕಾಶಕೊಟ್ಟರು. ಆದರೆ, ತಾಳೀಕೋಟೆ ಕದನಾನಂತರ, ಮೇಲೆ ತಿಳಿಸಿದ ಸಂದರ್ಭಗಳು ಸ್ಥಳೀಯ ಸಂಸ್ಥೆಗಳ ಮುಂದುವರಿಕೆಗೆ ಅನುಕೂಲವಾಗಿರಲಿಲ್ಲ.

## ಪುರವಣಿ

# ದೇವಸ್ಥಾನಗಳು ಮತ್ತು ಮಠಗಳು

### ಪೀಠಿಕೆ

ಮಧ್ಯಯುಗದ ದಕ್ಷಿಣ ಭಾರತದ ರಾಜ್ಯಾಡಳಿತ ಕ್ರಮದಲ್ಲಿ ದೇವಸ್ಥಾನದ ಆಡಳಿತ, ಸ್ಥಳೀಯ ಸರ್ಕಾರದ ಒಂದು ಮುಖ್ಯ ಅಂಗವಾಗಿತ್ತು. ದೇವಸ್ಥಾನವು ಸ್ಥಳೀಯ ಪ್ರದೇಶದಲ್ಲಿ ಮತೀಯ ಜೀವನದ ಒಂದು ಮುಖ್ಯ ಕೇಂದ್ರವಾಗಿದ್ದುದಲ್ಲದೆ, ಅದು ಸಾಮಾಜಿಕ ಸಂಸ್ಥೆಯೂ ಆಗಿದ್ದಿತು. ಅದು ಪಟ್ಟಣದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನ ಚಟುವಟಿಕೆಗಳಲ್ಲಿ ಮುಖ್ಯಪಾತ್ರ ವಹಿಸುತ್ತಿದ್ದಿತು.[1] ಪ್ರಸ್ತುತದಲ್ಲಿ ಸ್ಥಳೀಯ ಆಡಳಿತದಲ್ಲಿ ದೇವಸ್ಥಾನಗಳು ವಹಿಸಿದ್ದ ಪಾತ್ರವನ್ನು ಅರಿಯಲು ತಿರುಪತಿ ದೇವಸ್ಥಾನದ ಆಡಳಿತವನ್ನು ದೃಷ್ಟಾಂತವಾಗಿ ಅಧ್ಯಯನಮಾಡಬಹುದು. ಆ ಪ್ರಸಿದ್ಧ ದೇವಸ್ಥಾನದ ಜ್ಞಾನ ಮತ್ತು ಆಡಳಿತವನ್ನು ತಿರುವಲ್ಲೈ-ತಿರುಪತಿ ದೇವಸ್ಥಾನ ಶಾಸನಗಳಿಂದ ತಿಳಿಯಬಹುದು.

**ರಾಜರ ಕೊಡುಗೆಗಳು :** ತಿರುಪತಿ ದೇವಸ್ಥಾನವು ರಾಜರ ಕೊಡುಗೆ ಮತ್ತು ಸಾರ್ವಜನಿಕ ಪ್ರೋತ್ಸಾಹದಿಂದ ನಡೆಯುತ್ತಿದ್ದಿತು. ರಾಜರ ಕೊಡುಗೆ ವಿವಿಧರೂಪಗಳನ್ನು ತೆಗೆದುಕೊಂಡಿದ್ದಿತು. ರಾಜರು ಗ್ರಾಮಗಳನ್ನು ಮತ್ತು ಜಮೀನುಗಳನ್ನು ದಾನಮಾಡುತ್ತಿದ್ದರು. ಸರ್ಕಾರಕ್ಕೆ ಬರಬೇಕಾಗಿದ್ದ ತೆರಿಗೆಗಳನ್ನು ದೇವಸ್ಥಾನಕ್ಕೆ ವರ್ಗಾಯಿಸುತ್ತಿದ್ದರು ಮತ್ತು ನಗದು ಹಣವನ್ನು ಕೊಡುತ್ತಿದ್ದರು. ಇದನ್ನು ದೇವಸ್ಥಾನದ ವಿವಿಧ ಸೇವೆಗಳಿಗೆ ಮತ್ತು ಉತ್ಸವಗಳಿಗೆ ಉಪಯೋಗಿಸಬೇಕಾಗಿತ್ತು. ಈ ಕೊಡುಗೆಗಳನ್ನು ದೇವಸ್ಥಾನದ "ಸ್ಥಾನತ್ತಾರ್" ಅಂದರೆ ಧರ್ಮದರ್ಶಿಗಳು ಸ್ವೀಕರಿಸುತ್ತಿದ್ದರು. ದಾನಿ ಮತ್ತು "ಸ್ಥಾನತ್ತಾರ್" ನಡುವೆ ಒಂದು ಒಪ್ಪಂದವಾಗಿ ಅದರ ಪ್ರಕಾರ "ಸ್ಥಾನತ್ತಾರ್" ಆ ಧರ್ಮವನ್ನು ಕಾಪಾಡಲು ಭರವಸೆ ಕೊಡುತ್ತಿದ್ದರು. ಈ ಒಡಂಬಡಿಕೆಯನ್ನು ಆ

1. Mahalingam: *SIP*, p. 372.

ಸ್ಥಳದ ಶ್ರೀ ವೈಷ್ಣವರು ಅಥವಾ "ಸ್ಥಳ"ದವರು ಅಥವಾ "ಸ್ಥಾನತ್ತಾರ್" ಅವರ ಆಜ್ಞೆಯ ಮೇಲೆ ದೇವಸ್ಥಾನದ ಲೆಕ್ಕಿಗ ಬರೆಯುತ್ತಿದ್ದನು. ಈ ದಾಖಲೆಗಳು ಸಾಮಾನ್ಯವಾಗಿ "ಸ್ಥಾನತ್ತಾರ್" ಮತ್ತು ದಾನಿಯ ನಡುವೆ ಆದ ಒಡಂಬಡಿಕೆ. ಆದರೆ ದಾನಿಯು ರಾಜನಾಗಿದ್ದರೆ, ಆತನ ಹೆಸರು ಮೊದಲು ಬಂದು, ನಂತರ ದೇವಸ್ಥಾನಧ "ಸ್ಥಾನತ್ತಾರ್" ಹೆಸರುಗಳು ಬರುತ್ತವೆ. ದೇವಸ್ಥಾನಗಳು ಈ ದಾಖಲೆಗಳನ್ನು ಇಟ್ಟುಕೊಳ್ಳುವ ಜವಾಬ್ದಾರಿ ಹೊಂದಿದ್ದವು. ಒಡಂಬಡಿಕೆಗಳನ್ನು ದೇವಸ್ಥಾನದ ಗೋಡೆಗಳು, ಕಂಬಗಳು ಮತ್ತು ದ್ವಾರಗಳ ಮೇಲೆ ಕೊರೆಯುತ್ತಿದ್ದುದು ಇದೇ ಕಾರಣದಿಂದಿರಬೇಕು.

ಮೇಲೆ ಹೇಳಿರುವುದನ್ನು ಸ್ಥಿರಪಡಿಸಲು ರಾಜರ ಕೊಡುಗೆಯ ಕೆಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೪೨೯ ರಲ್ಲಿ, ಎರಡನೆ ದೇವರಾಯ ರಾಜಭಂಡಾರದ ವರಮಾನದಿಂದ ೧೨೦೦೦ "ಹೊನ್ನು"ಗಳನ್ನು ದೇವಸ್ಥಾನದ ಖಜಾನೆಗೆ ದಾನಮಾಡಿದನು. ಅಲ್ಲದೆ, ಆತನು ಒಂದು ಉತ್ಸವವನ್ನು ನಡೆಸಲು ವಿಕ್ರಮಾದಿತ್ಯ, ಮಂಗಳ ಇಲಮಂದಿಯ ಮತ್ತು ಕಲರುವಿದ್ದಲೆ ಗ್ರಾಮಗಳನ್ನು ತೆರಿಗೆ ಮಾಫಿ ಮಾಡಿ ದಾನಮಾಡಿದನು.[1] ಈ ಶಾಸನವನ್ನು "ಸ್ಥಾನತ್ತಾರ್" ಅಪ್ಪಣೆಯ ಮೇಲೆ ದೇವಸ್ಥಾನದ ಲೆಕ್ಕಿಗ ಬರೆದನು.

(೨) ಕ್ರಿ.ಶ. ೧೪೫೦ ರ ಒಂದು ಶಾಸನದ ಪ್ರಕಾರ, ಸಾಳುವ ನರಸಿಂಗದೇವ ಮಹಾರಾಜ ಶ್ರೀವೆಂಕಟೇಶನನ್ನು ಪೂಜಿಸಲು, ಚಂದ್ರಗಿರಿ ರಾಜ್ಯದ ಅಲಿಪುರಂ ಗ್ರಾಮವನ್ನು "ಸರ್ವಮಾನ್ಯ"ವಾಗಿ (ತೆರಿಗೆ ಮಾಫಿ) ದಾನಮಾಡಿದನು ಮತ್ತು ಇದಕ್ಕಾಗಿ "ಸ್ಥಾನತ್ತಾರ್" ಅವರೊಡನೆ ಮಾಡಿಕೊಂಡ ಒಪ್ಪಂದವನ್ನು ದೇವಸ್ಥಾನದ ಲೆಕ್ಕಿಗ ಬರೆದನು.[2]

ದೇವಸ್ಥಾನದ ಶಾಸನಗಳ ಪ್ರಕಾರ ಕೃಷ್ಣದೇವರಾಯ, ತಿರುಮಲೈ ಶ್ರೀವೆಂಕಟೇಶ ದೇವಸ್ಥಾನಕ್ಕೆ ಏಳು ಸಲ ಭೇಟಿಕೊಟ್ಟನು. ತೆಲಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ, ಎಂಟು ಶಾಸನಗಳು ೧೫೧೩ ರಲ್ಲಿ ಪ್ರಥಮ ಭೇಟಿಯ ಕಾಲದಲ್ಲಿ ಆತನು ದಾನಮಾಡಿದ "ರತ್ನಕಿರೀಟ"ವನ್ನು ಮತ್ತು ಆತನ ರಾಣಿಯರು ಚಿನ್ನಾಜಿದೇವಿ ಮತ್ತು ತಿರುಮಲದೇವಿ ಅವರು ಮಾಡಿದ ದಾನಗಳನ್ನು ದಾಖಲೆ ಮಾಡಿವೆ.[3] ಅವನ ಇಬ್ಬರು ರಾಣಿಯರು ಶ್ರೀವೆಂಕಟೇಶನಿಗೆ ಚಿನ್ನದ ಲೋಟಗಳನ್ನು ದಾನಮಾಡಿದರು.[4] ಅದೇ ವರ್ಷ ಕೃಷ್ಣದೇವರಾಯನ ಎರಡನೆ ಭೇಟಿ ರಾಣಿಯರು ಜೊತೆಯಲ್ಲಿಲ್ಲದೆ ನಡೆಯಿತು. ಆಗ

1. *T. T. D. S.*, I, No. 192.
2. *Ibid.*, II, No. 4.
3. *Ibid.*, III, Nos. 32 to 39.
4. *Ibid.*, Nos. 40 and 50.

ಆತನು ಅನೇಕ ಆಭರಣಗಳನ್ನು ದಾನಮಾಡಿದನು.[1] ಅದೇ ವರ್ಷ ಮೂರನೆ ಬಾರಿ ಭೇಟಿ ನೀಡಿದಾಗ ದೇವಸ್ಥಾನಕ್ಕೆ ಚಿತ್ರವಾದಿ, ತುರೂರು ಮತ್ತು ಕರಿಕಂಬುದು ಎಂಬ ಮೂರು ಗ್ರಾಮಗಳನ್ನು ದಾನಮಾಡಿದನು.[2] ಕ್ರಿ.ಶ. ೧೫೧೫ರಲ್ಲಿ ನಾಲ್ಕನೆ ಸಲ ಭೇಟಿ ನೀಡಿದಾಗ ಆಭರಣಗಳನ್ನೂ ಮತ್ತು ತಳಿಲ್‌ಪಾಕ್ಕಂ ಗ್ರಾಮವನ್ನು ದಾನಮಾಡಿದನು.[3] ಆತನ ಐದನೆ ಭೇಟಿಯು ೧೫೧೭ರಲ್ಲಿ ನಡೆಯಿತು. ಆಗ ಹತ್ತು ಸಾವಿರ ವರಹಗಳನ್ನು ಮತ್ತು ವಿಶೇಷ ಬೆಲೆಯುಳ್ಳ ಪದಕವನ್ನೂ ದಾನಮಾಡಿದನು.[4] ಆತನ ಆರನೆಯ ಭೇಟಿಯನ್ನು ಶಾಸನಗಳು ನಿರ್ದಿಷ್ಟವಾಗಿ ತಿಳಿಸುವುದಿಲ್ಲವಾದರೂ, ಅಕ್ಟೋಬರ್ ೧೬, ೧೫೧೮ರಲ್ಲಿ ತನ್ನ ಪ್ರಧಾನ ರಾಣಿ ತಿರುಮಲದೇವಿಯೊಡನೆ ಆರನೆ ಭೇಟಿಯನ್ನು ನೀಡಿದನೆಂದು ನಂಬಲಾಗಿದೆ.[5] ಕ್ರಿ.ಶ. ೧೫೨೧ರಲ್ಲಿ ಏಳನೆಸಾರಿ ಭೇಟಿ ನೀಡಿದಾಗ ಇತರ ವಸ್ತುಗಳೊಡನೆ ಒಂದುಸಾವಿರ ಚಿನ್ನದ ವರಹಗಳನ್ನು ದಾನಮಾಡಿದನು.[6] ಹೀಗೆ ಶ್ರೀವೆಂಕಟೇಶದೇವಸ್ಥಾನಕ್ಕೆ ಭೇಟಿ ನೀಡಿದ ಪ್ರತಿ ಸಂದರ್ಭದಲ್ಲೂ ಐದು ಗ್ರಾಮಗಳೂ ಸೇರಿದಂತೆ ಅನೇಕ ಅಮೂಲ್ಯ ದಾನಗಳನ್ನು ಮಾಡಿದನು.[7] ಕೃಷ್ಣದೇವರಾಯ ತಾನು ಬರೆದ ತೆಲುಗು ಪ್ರಬಂಧ "ಆಮುಕ್ತಮಾಲ್ಯದ"ವನ್ನು ಶ್ರೀವೆಂಕಟೇಶನಿಗೆ ನಿವೇದಿಸಿದನು. ಶ್ರೀವೆಂಕಟೇಶ ಆತನ ಪೋಷಕದೇವರಾಗಿರಬೇಕು.

ಕ್ರಿ.ಶ. ೧೫೩೧ರಲ್ಲಿ ತಿರುಪತಿಯಲ್ಲಿರುವ ಪವಿತ್ರ ಚಕ್ರತೀರ್ಥಕ್ಕೆ ಅಚ್ಯುತರಾಯ ಬೆಣಚುಕಲ್ಲಿನ ಹಂತಗಳನ್ನು ಮಾಡಿಸಿದನು.[8] ಕ್ರಿ.ಶ. ೧೫೩೪ರಲ್ಲಿ ಕೊಂಡವೀಡು ಜಿಲ್ಲೆಯಲ್ಲಿದ್ದ ಗ್ರಾಮಗಳಿಂದ ೩೦೦ "ರೇಖೈಪೊನ್" (ಚಿನ್ನದ ನಾಣ್ಯ) ಗಳನ್ನು ಒಂದು ಉತ್ಸವಕ್ಕೆ ದಾನಮಾಡಿದನು.[9] ಅದೇ ವರ್ಷ ಕೊಂಡವೀಡು ಪ್ರಾಂತ್ಯದ ಗ್ರಾಮಸ್ಥರಿಂದ ಪ್ರತಿ ತಿಂಗಳೂ ಒಂದು ಉತ್ಸವ ನಡೆಸಲು ೬೦ "ರೇಖೈಪೊನ್"ಗಳ ದತ್ತಿಯನ್ನು ಕೊಟ್ಟನು.[10]

ಕ್ರಿ.ಶ. ೧೫೫೪ರ ಒಂದು ಶಾಸನವು ಸದಾಶಿವರಾಯ ತಿರುಪತಿಯಲ್ಲಿ ಹಲವು ದಾನಗಳನ್ನು ನೆರವೇರಿಸಲು ೧೬ ಪ್ರಾಂತ್ಯಗಳಲ್ಲಿ ಕೆಲವು ತೆರಿಗೆಗಳನ್ನು ದಾನಮಾಡಿದನೆಂದು ದಾಖಲೆಮಾಡಿದೆ.[11]

---

1. *Ibid.*, Nos. 60 to 63.
2. *Ibid.*, No. 60.
3. *Ibid.*, Nos. 66 to 68.
4. *Ibid.*, No. 80.
5. 697 of 1922.
6. *TTDI*, III, No. 83.
7. *Ibid.*, p. 124.
8. *Ibid.*, IV, No. 8.
9. *Ibid.*, No. 54.
10. *Ibid.*, No. 58.
11. *Ibid.*, No. 164.

ರಾಣಿಯರು, ರಾಜ ಪ್ರತಿನಿಧಿಗಳು (ಪ್ರಾಂತ್ಯಾಧಿಕಾರಿ), ಮಂತ್ರಿಗಳು, ಸೇನಾನಾಯಕರು, ಅರಮನೆ ಅಧಿಕಾರಿಗಳು, ರಾಜನ ಅಧಿಕಾರಿಗಳು, ರಾಜ ಪುರೋಹಿತ, ಕೆಳದರ್ಜೆಯ ಅಧಿಕಾರಿಗಳು ಮತ್ತು ಸಾಮಂತರು ದೇವಸ್ಥಾನಕ್ಕೆ ಕೊಡುಗೆಗಳನ್ನು ಕೊಡುತ್ತಿದ್ದರು. ಇವೆಲ್ಲವನ್ನೂ "ಸ್ಥಾನಾತ್ತಾರ್" ರವರಿಗೆ ಮಾಡುತ್ತಿದ್ದರು. ಮಂತ್ರಿಗಳು ಮಾಡಿದ ಹಲವು ಕೊಡುಗೆಗಳನ್ನು ತಿಳಿಸಬಹುದು—

(೧) ಕ್ರಿ.ಶ. ೧೪೦೮ ರಲ್ಲಿ ತಿರುಮಲೈ "ಸ್ಥಾನಾತ್ತಾರ್" ಕಲ್ಲಿನಮೇಲೆ ಶ್ರೀ ಮಾಧವದಾಸರ್ ಅಥವಾ ಮಲ್ಲಣಗಳ್‌ರವರ ಪರವಾಗಿ ಒಂದು ದಾಖಲೆಯನ್ನು ಮಾಡಿಸಿದರು. ಶ್ರೀ ಮಾಧವದಾಸರು ಅವರ ಸ್ವಂತ ವೆಚ್ಚದಲ್ಲಿ ಮುದರಿ ನದಿಯಿಂದ ಅವಿಲಾಲ ಕೆರೆಯವರೆಗೆ ಇದ್ದ ಹಳೆಯ ಕಾಲುವೆಯನ್ನು ಊರ್ಜಿತಗೊಳಿಸಿದರು. ಇದರ ಫಲವಾಗಿ ೫ ಸಾವಿರ "ಕುಳಿ" ಭೂಮಿ ಸಾಗುವಳಿಗೆ ಯೋಗ್ಯವಾಯಿತು. "ಸ್ಥಾನತ್ತಾರ್" ಅವರ ಹೆಸರಿನಲ್ಲಿ ಪ್ರತಿನಿತ್ಯವೂ ನೈವೇದ್ಯಕ್ಕೋಸ್ಕರ ೪ "ನಾಳಿ" ಅಕ್ಕಿ ಮತ್ತು ಅದಕ್ಕೆ ಬೇಕಾದ ಉಪ್ಪು, ಬೇಳೆ, ಮೆಣಸು ಮತ್ತು ಮೊಸರನ್ನು ಸರಬರಾಜು ಮಾಡಲು ಒಪ್ಪಿದರು.[1] (೨) ಅಮಾತ್ಯ ಶೇಖರ ಮಲ್ಲಣ ಶ್ರೀ ವೆಂಕಟೇಶನಿಗೆ ನೈವೇದ್ಯವನ್ನು ಮತ್ತು ನಿತ್ಯ ದೀಪವನ್ನು ಏರ್ಪಾಡು ಮಾಡಿದನು.[2] (೩) ಕ್ರಿ.ಶ. ೧೫೧೧ ರಲ್ಲಿ "ಸ್ಥಾನತ್ತಾರ್," ಸಾಳುವ ತಿಮ್ಮರಸಯರ್ ದೇವಸ್ಥಾನಕ್ಕೆ ಪರಂತಲೂರ್ ಗ್ರಾಮವನ್ನು ದಾನಮಾಡಿದುದಕ್ಕೆ ಕಲ್ಲಿನಮೇಲೆ ಒಂದು ಶಾಸನವನ್ನು ಬರೆಸಿದರು.[3] (೪) ಕ್ರಿ.ಶ. ೧೫೩೫ರಲ್ಲಿ ರಾಮರಾಜಯ ಶ್ರೀ ವೆಂಕಟೇಶ ಮತ್ತು ಶ್ರೀ ಗೋವಿಂದರಾಜನಿಗೆ ಒಂದು ಉತ್ಸವವನ್ನು ನಡೆಸಲು ನಿತ್ಯ ಪೂಜೆಗೆ ಮತ್ತು ಇತರ ಸೇವೆಗಳಿಗೆ ವರ್ಷಕ್ಕೆ ೨೦೦ "ರೇಖೈಪೊನ್" ವರಮಾನವು ಬರುತ್ತಿದ್ದ ಪದುಪಟ್ಟು ಗ್ರಾಮವನ್ನು ದಾನ ಮಾಡಿದರು. "ಸ್ಥಾನತ್ತಾರ್" ಶಾಸನವನ್ನು ಬರೆಸಿದರು.[4] (೫) ಕ್ರಿ.ಶ. ೧೫೪೭ರ ಒಂದು ಶಾಸನದ ಪ್ರಕಾರ, ರಾಮಾನುಜ ಪ್ರೊದತ್ತೂರ್ ಗ್ರಾಮದಲ್ಲಿ ೧೦ ಸಾವಿರ "ಕುಳಿ" ಭೂಮಿಯನ್ನು ದಾನಮಾಡಿದನು.[5] (೬) ಕ್ರಿ.ಶ. ೧೫೫೪ರಲ್ಲಿ ಆತನು ಶ್ರೀ ವೆಂಕಟೇಶನಿಗೆ ಪ್ರತಿನಿತ್ಯವೂ ೨೦೦ "ತಿರುಪ್ಪೋನಕಂ" (ನೈವೇದ್ಯ) ಒದಗಿಸಲು ವರ್ಷಕ್ಕೆ ನಾಲ್ಕು ಸಾವಿರ "ರೇಖೈಪೊನ್" ವರಮಾನ ಬರುವ ೪ ಗ್ರಾಮಗಳನ್ನು ದಾನ ಮಾಡಿದನು.[6]

ಮುಂದೆ ತಿಳಿಸಿರುವ ಹಲವು ಶಾಸನಗಳು "ಸ್ಥಾನತ್ತಾರ್" ಮತ್ತು ಪ್ರಾಂತ್ಯಾಧಿಕಾರಿಗಳ ಮತ್ತು ಸಾಮಂತರ ನಡುವೆ ಆದ ಒಪ್ಪಂದಗಳನ್ನು ತಿಳಿಸುತ್ತವೆ.

---

1. *Ibid.*, I, 194.
2. *Ibid* , 195.
3. *Ibid.*, III, Nos. 21 and 22.
4 *Ibid.*,
5. *Ibid.*, V. No. 29.
6. *Ibid.*, No. 155.

**ಪ್ರಾಂತ್ಯಾಧಿಕಾರಿಗಳು :**

(೧) ಕ್ರಿ.ಶ. ೧೫೩೩ರಲ್ಲಿ ಚಂದ್ರಗಿರಿಯ ರಾಮಭಟ್ಟ ರಘುನಾಥದೇವರ ಪ್ರತಿಮೆ ಯನ್ನು ತಯಾರಿಸಿ ಪ್ರತಿಷ್ಠೆಮಾಡಿದನು. ಇದನ್ನು ತನ್ನ ಸ್ವಂತ ವೆಚ್ಚದಲ್ಲಿ ತನ್ನ ಅಗ್ರಹಾರ ತಿರುವೆಂಕಟಪುರದಲ್ಲಿ (ತಿರುಪತಿಗೆ ಪಶ್ಚಿಮದಲ್ಲಿರುವ ಒಂದು ಉಪನಗರ), ನಿತ್ಯ ಸೇವೆಗೆ ಏರ್ಪಾಡುಗಳನ್ನು ಮಾಡಿದನು.[1]

(೨) ಕ್ರಿ.ಶ. ೧೫೪೧ರಲ್ಲಿ ಆತನು ದೇವಸ್ಥಾನದ ಖಜಾನೆಗೆ ಹಲವು ಸೇವೆಗಳಿಗೆ ೩೬೦೦ "ನರ್‌ಪಣಂ" (ಹಣ) ಅನ್ನು ಕೊಟ್ಟನು. ಅಲ್ಲದೆ ಶ್ರೀ ವೆಂಕಟೇಶನ ಹಲವು ಸೇವೆಗಳಿಗೆ ವರ್ಷಕ್ಕೆ ೧೫೦ "ರೇಖೈಪೊನ್" ವರಮಾನ ತರುವ ಅಲಂಬಕ್ಕಂ ಗ್ರಾಮವನ್ನು ಕೊಡುಗೆಯಾಗಿ ಕೊಟ್ಟನು.[2]

**ಸಾಮಂತರು :**

(೧) ಕ್ರಿ.ಶ. ೧೫೧೪ರಲ್ಲಿ ಬಹೂರ್ ಮಲ್ಲರಸಯ್ಯರ್ ದೇವಸ್ಥಾನದ ಗ್ರಾಮಗಳಲ್ಲಿ ನೀರಾವರಿ ಕಾಲುವೆಗಳನ್ನು ತೋಡಲು ೩೬೦ "ಪಣಂ"ಗಳನ್ನು ಕೊಟ್ಟರು. ಇದರಿಂದ ಬರುವ ವರಮಾನದಿಂದ, "ಸ್ಥಾನತ್ತಾರ್" ಶ್ರೀ ವೆಂಕಟೇಶನಿಗೆ ಹಲವು ನೈವೇದ್ಯಗಳನ್ನು ತಯಾರಿಸಲು ಸಾಮಗ್ರಿಗಳನ್ನು ಒದಗಿಸಬೇಕಾಯಿತು.[3] (೨) ಕ್ರಿ.ಶ. ೧೫೨೯ರಲ್ಲಿ ಲಕ್ಕನಾಯಕ್ಕರ್ ದೇವಸ್ಥಾನದ ಖಜಾನೆಗೆ ೧೫೦೦ "ಪಣಂ"ಗಳನ್ನು ಕೊಟ್ಟರು.[4] (೩) ಕ್ರಿ.ಶ. ೧೫೨೯ರಲ್ಲಿ ಸುಬುದ್ಧಿರಾಮದಾಸರ್ ತಂದಲಂ ಮತ್ತು ಅಂಬಿಕ ಮುಡುಸಿಲ ತದಪಲಂ ಗ್ರಾಮಗಳನ್ನು ದಾನಮಾಡಿದರು.[5] (೪) ಕ್ರಿ.ಶ. ೧೫೩೩ರ ಒಂದು ಶಾಸನವು, ಮಹಾಮಂಡಲೇಶ್ವರ ತಿಮ್ಮರಾಜ–ಸಲಕರಾಜ ತಿರುಮಲೈ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಕಟ್ಟಿಸಿದ್ದ ಮಂಟಪದಲ್ಲಿ ನೀರನ್ನು ಒದಗಿಸಲು ದಾನಮಾಡಿದ ೬೦೦೦ "ಪಣಂ"ಗಳನ್ನು "ಸ್ಥಾನತ್ತಾರ್" ದಾಖಲೆ ಮಾಡಿದರು.[6] (೫) ಕ್ರಿ.ಶ. ೧೫೪೬ರಲ್ಲಿ ಶ್ರೀಪತಿ ಓಬಲೇಶ್ವರರಾಜ ಶ್ರೀ ವೆಂಕಟೇಶನ ಸೇವೆಗೆ ವರ್ಷಕ್ಕೆ ೩೦೦ "ಗಟ್ಟಿವರಹ" (ಚಿನ್ನದ ನಾಣ್ಯ) ವರಮಾನ ತರುತ್ತಿದ್ದ ಪೆರೂರ್‌ಗ್ರಾಮವನ್ನು ದಾನಮಾಡಿದನು.[7]

**ಸಾರ್ವಜನಿಕ ಪ್ರೋತ್ಸಾಹ :** ಅನೇಕ ಶಾಸನಗಳು ಖಾಸಗಿ ವ್ಯಕ್ತಿಗಳು ಮಾಡಿದ ದಾನಗಳನ್ನು ದಾಖಲೆ ಮಾಡಿದೆ. ರಾಜರ ಕೊಡುಗೆಗಳ ಹಾಗೆ ಈ ಕೊಡುಗೆಗಳನ್ನೂ "ಸ್ಥಾನತ್ತಾರ್" ದಾಖಲೆ ಮಾಡುತ್ತಿದ್ದರು. ಖಾಸಗಿ ದಾನಗಳ ಹಲವು ಉದಾಹರಣೆ ಗಳನ್ನು ಕೊಡಬಹುದು—

1. *Ibid.*, IV, No. 61.
2. *Ibid.*, No. 154.
3. *Ibid.*, III, No. 127.
4. *Ibid.*, No. 137.
5. *Ibid.*, No. 147.
6. *Ibid.*, IV, No. 25.
7. *Ibid.*, V, No. 25.

(೧) ಕ್ರಿ.ಶ. ೧೪೭೫ರಲ್ಲಿ ತಿರುಪತಿಯ ಶ್ರೀ ವೈಷ್ಣವರಲ್ಲೊಬ್ಬನಾದ ಶಠಕೋಪ ದಾಸರ್ ನರಸಿಂಹರಾಯ ಮೊದಲಿಯಾರ್ ಶ್ರೀ ವೆಂಕಟೇಶನ ಹಲವು ಸೇವೆಗಳಿಗೆ ಮತ್ತು ದೇವಸ್ಥಾನದ ಖಜಾನೆಗೆ ೨೦೦ "ಪಣಂ"ಗಳನ್ನು ಬಂಡವಾಳವಾಗಿ ಕೊಟ್ಟನು.[1] (೨) ಕ್ರಿ.ಶ. ೧೪೯೪ರಲ್ಲಿ ತಿರುಪತಿಯ ವ್ಯಾಪಾರಿಯೊಬ್ಬನಾಗಿದ್ದ ಕುಳತ್ತುಳಾರ್ ಪುದೊಲಿಯಲ್‌ವರ್ ವೆಂಕಟಶೆಟ್ಟಿ ನಾರಾಯನ್ ಒಂದು ಮಂಟಪವನ್ನು ಕಟ್ಟಿಸಿ ಶ್ರೀ ವೆಂಕಟೇಶನ ಹಲವು ಸೇವೆಗಳಿಗೆ ಏರ್ಪಾಡುಮಾಡಿದನು.[2] (೩) ಕ್ರಿ.ಶ. ೧೫೧೩ರಲ್ಲಿ ತಿರುವೆಂಕಟ ಮುದ್ಯೈಯಾರ್ ಮಾಡಿದ ಒಂದು ದಾನವನ್ನು ತಿರುಪತಿಯ "ಸ್ಥಾನತ್ತಾರ್" ದಾಖಲೆ ಮಾಡಿದರು. ಆತನು ಹಲವು ಸೇವೆಗಳಿಗೆ ೧೫೦ "ನರ್‌ಪಣಂ"ಗಳನ್ನು ಕೊಟ್ಟನು.[3] (೪) ಕ್ರಿ.ಶ. ೧೫೨೪ರಲ್ಲಿ ಪೆವುಲ ಮನ್ನಪ್ಪಯರ್ ದೇವಸ್ಥಾನದ ಖಜಾನೆಗೆ ಸಲ್ಲಿಸಿದ ೩೦೦೦ "ಪಣಂ"ಗಳನ್ನು ದಾಖಲೆ ಮಾಡಿಕೊಂಡರು. ಈ ಹಣವನ್ನು ದೇವಸ್ಥಾನದ ಗ್ರಾಮಗಳಲ್ಲಿ ನೀರಾವರಿ ಕೆರೆಗಳನ್ನು ಮತ್ತು ಕಾಲುವೆಗಳನ್ನು ತೋಡಲು ಉಪಯೋಗಿಸಬೇಕಾಗಿತ್ತು. ಇದರಿಂದ ಬಂದ ಫಸಲನ್ನು ಶ್ರೀ ವೆಂಕಟೇಶನ ಹಲವು ಸೇವೆಗಳಿಗೆ ಉಪಯೋಗಿಸಬೇಕೆಂದು ಏರ್ಪಾಡು ಮಾಡಲಾಯಿತು.[4] (೫) ಕ್ರಿ.ಶ. ೧೫೩೦ರಲ್ಲಿ ತಿರುಮಲೈ ಮತ್ತು ತಿರುಪತಿಯಲ್ಲಿ "ರಾಮಾನುಜಕೂಟಗಳ" ಮೇಲ್ವಿಚಾರಕ ಮತ್ತು ತಿರುಮಲೈ ದೇವಸ್ಥಾನದ ಚಿನ್ನದ ಖಜಾನೆಯ ಪಾಲಕ, ಕುಮಾರ ರಾಮಾನುಜ ಅಯ್ಯಂಗಾರ್ ತಿರುಪತಿ ಶ್ರೀರಾಮನಿಗೆ ಒಂದು ಮರದ ರಥವನ್ನು ಕಟ್ಟಿಸಿದನು.[5] (೬) ಕ್ರಿ.ಶ. ೧೫೪೭ರಲ್ಲಿ ಉದಯಗಿರಿ ದೇವರಾಜಭಟ್ಟರ್ ಪ್ರತಿವರ್ಷವೂ ತಿರುಪತಿಯ ವರ್ತಕರಿಂದ ದೇವಸ್ಥಾನದ ಹಲವು ವೆಚ್ಚಗಳಿಗೆ ೫೨ "ರೇಖೈಪೊನ್"ಗಳನ್ನು ವಸೂಲು ಮಾಡಲು ಏರ್ಪಾಡುಮಾಡಿದರು.[6]

**ದೇವಸ್ಥಾನದ ಆಡಳಿತ:** ಶಾಸನಗಳಿಂದ ದೇವಸ್ಥಾನದ ಮೇಲ್ವಿಚಾರಣೆಯು "ಸ್ಥಾನತ್ತಾರ್"ರವರ ಹತೋಟಿಯಲ್ಲಿದ್ದಿತೆಂದು ಸ್ಪಷ್ಟವಾಗಿದೆ. ಅವರು ದಾನಿಗಳು ಮಾಡಿದ ದಾನಗಳನ್ನು ದಾಖಲೆಮಾಡಿ ಅವನ್ನು ರಕ್ಷಿಸಲು ವಾಗ್ದಾನಮಾಡುತ್ತಿದ್ದರು. "ಸ್ಥಾನತ್ತಾರ್" ಸ್ಥಳದವರಾಗಿದ್ದರು. ಶಾಸನಗಳು ಅನೇಕ ದೇವಸ್ಥಾನದ ಅಧಿಕಾರಿಗಳನ್ನು ಸೂಚಿಸುತ್ತವೆ. ಈಗಾಗಲೇ ದೇವಸ್ಥಾನದ ದಾಖಲೆಗಳನ್ನು ಬರೆಯುತ್ತಿದ್ದ ಮತ್ತು ಲೆಕ್ಕಗಳನ್ನು ಇಡುತ್ತಿದ್ದ ದೇವಸ್ಥಾನದ ಲೆಕ್ಕಿಗನನ್ನು ತಿಳಿಸಲಾಗಿದೆ. ಕೃಷ್ಣದೇವರಾಯನಕಾಲದಲ್ಲಿ ಮುಂದೆ ಸೂಚಿಸಿರುವವರು, ಈ ಹುದ್ದೆ ಹೊಂದಿದ್ದರು—

---

1. *Ibid.*, II, No. 63.
2. *Ibid.*, No. 112.
3. *Ibid.*, III, No. 31.
4. *Ibid.*, 176.
5. *Ibid.*, IV, No. 1.
6. *Ibid.*, V, No. 100.

(೧) ತಿರುನಿನ್ರಾರು ಡೈಯಾರ್‌ಗಳ್.[1] (೨) ಕುಪ್ಪವೆಂಕಟಟ್ಟರಸು.[2] (೩) ಅಪ್ಪ ಕೊಂಡಾರ್.[3] (೪) ಶ್ರೀನಿವಾಸನ್.[4] (೫) ಕುಪ್ಪಯಂ.[5] (೬) ವಿಲ್ಲಿಯರ್.[6]

ಕ್ರಿ.ಶ. ೧೫೦೫ರ ಒಂದು ಶಾಸನವು[7] ಕೆಳಗೆ ತಿಳಿಸಿರುವ ದೇವಸ್ಥಾನದ ಅಧಿಕಾರಿಗಳನ್ನು ತಿಳಿಸುತ್ತದೆ—

(೧) ಸ್ಥಾನತ್ತಾರ್. (೨) ನಂಬಿಮಾರರು (ದೇವಸ್ಥಾನದ ಅರ್ಚಕರು). (೩) ಅನುಸಂಧಾನಂ (ವೇದಗಳು ಮತ್ತು ಪ್ರಬಂಧಗಳನ್ನು ಹೇಳುವವರು). (೪) ತೇವೈ (ದೇವಸ್ಥಾನದ ಪರಿಚಾರಕರು). (೫) ಕಂಗಾಣಿಪ್ಪಾನ್ (ಮೇಲ್ವಿಚಾರಕ). (೬) ತಿರುಪ್ಪಣಿಪಿಳ್ಳೈ (ದೇವಸ್ಥಾನದಲ್ಲಿ ರಿಪೇರಿ ಮಾಡುವವರು). (೭) ಅಧಿಕಾರಿ. (೮) ಕೈಕೋಳರು (ಸೇವಕರು). (೯) ಶಿಪ್ಪಿಯಾರ್ (ಕಲ್ಲುಕಟ್ಟಡ ಕಟ್ಟುವವನು). (೧೦) ಮಂಟಪಕೊಟ್ಟರ್ (ಮಂಟಪವನ್ನು ರಿಪೇರಿ ಮಾಡುವವರು). (೧೧) ತಿರುವಿಧಿಶಾನಿ (ದೇವಸ್ಥಾನದ ನಾಟ್ಯಗಾರ್ತಿಯರು).

ಶಾಸನಗಳು ತಿರುವಲ್ಲೈ ಮತ್ತು ತಿರುಪತಿಯಲ್ಲಿ ರಾಮಾನುಜಕೂಟಗಳ (ಉಚಿತವಾಗಿ ಆಹಾರಕೊಡುವ ಮನೆ) ಮೇಲ್ವಿಚಾರಕ,[8] ಚಿನ್ನದ ಖಜಾನೆಯ ಪಾಲಕ[9] ಮತ್ತು ಹೂತೋಟದ ಮೇಲ್ವಿಚಾರಕ[10] ಇವರನ್ನು ತಿಳಿಸುತ್ತವೆ. ದೇವಸ್ಥಾನವು ಚರ ಮತ್ತು ಸ್ಥಿರ ಆಸ್ತಿಹೊಂದಿದ್ದ ಐಶ್ವರ್ಯಯುತ ಸಂಸ್ಥೆಯಾಗಿದ್ದಿತು. ಅದು ದೇವಸ್ಥಾನದ ನಿಧಿಯಿಂದ ದೇವಸ್ಥಾನದ ಸೇವಕರನ್ನು ನೇಮಿಸುವ ಮತ್ತು ಸಲಹುವ ದೊಡ್ಡ ಧಣಿಯಾಗಿದ್ದಿತು.

## ದೇವಸ್ಥಾನ ಮಾಡುತ್ತಿದ್ದ ಕರ್ತವ್ಯಗಳು

**ವ್ಯವಸಾಯಕ್ಕೆ ಪ್ರೋತ್ಸಾಹ :** ದೇವಸ್ಥಾನದ ಅಧಿಕಾರ ವರ್ಗವು ಒಂದು ದೊಡ್ಡ ಜಮೀನ್ದಾರಿಕೆ ಹೊಂದಿದ್ದು ವ್ಯವಸಾಯದ ಹಿತವನ್ನು ಸಂರಕ್ಷಿಸುತ್ತಿತ್ತು. ಅದು ಭೂಮಿಯನ್ನು ಸಾಗುವಳಿ ಮಾಡುತ್ತಿದ್ದುದಲ್ಲದೆ, ಸಾಗುವಳಿ ಮಾಡದ ಭೂಮಿಯನ್ನು ವ್ಯವಸಾಯಕ್ಕೆ ಯೋಗ್ಯವನ್ನಾಗಿ ಮಾಡುತ್ತಿದ್ದಿತು. ಅನೇಕ ಶಾಸನಗಳು ಹೊಸ

1. *Ibid.*, III, Nos. 121 and 134.
2. *Ibid.*, Nos. 138, 141 and 149.
3. *Ibid.*, No. 151.
4. *Ibid.*. Nos. 160 and 161.
5. *Ibid.*, No. 179.
6. *Ibid.*, No. 181.
7. *Ibid.*, No. 105.
8. *Ibid.*, II, No. 38.
9. *Ibid.*, IV, No. 1.
10. *Ibid.*, I, No. 187.

ಕಾಲುವೆಗಳನ್ನು ತೋಡುವುದಕ್ಕೆ ಮಾಡುತ್ತಿದ್ದ ವೆಚ್ಚ, ಭೂಮಿಯನ್ನು ಸಮಮಾಡಿ ಸಾಗುವಳಿಮಾಡಿ, ಫಸಲನ್ನು ಹೆಚ್ಚಿಸುತ್ತಿದ್ದ ವಿವರಗಳನ್ನು ಕೊಡುತ್ತದೆ. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೪೪೪ರಲ್ಲಿ ಮಲ್ಲಣ್ಣೊಡೆಯಾರ್ ಭೂಮಿಗೆ ನೀರಾವರಿ ಸೌಕರ್ಯವನ್ನು ಒದಗಿಸಲು ನರಿಯಾರು ನದಿಗೆ ಒಂದು ಕಾಲುವೆಯನ್ನು ನಿರ್ಮಿಸಿದನು. ಅವನ ಹೆಸರಿನಲ್ಲಿ ಶ್ರೀ ವೆಂಕಟೇಶನಿಗೆ ಪೂಜೆ ಸಲ್ಲಿಸಲು "ಸ್ಥಾನತ್ತಾರ್" ಒಂದು ಶಾಸನವನ್ನು ದಾಖಲೆಮಾಡಿದರು.[1] (೨) ಕ್ರಿ.ಶ. ೧೪೫೭ರಲ್ಲಿ ಕೋಯಿಲ್-ಕೇಳ್ವಿ ಎಂಪೆರುಮಾನಾರ್-ಜೀಯರ್ ಕೊಟ್ಟ ೫ ಸಾವಿರ "ನಾರ್‌ಪಣಂ"ಗಳನ್ನು ಅವಿಲಾಲಿ ಗ್ರಾಮದಲ್ಲಿ ಒಂದು ಕೆರೆಯನ್ನು ನಿರ್ಮಿಸಲು "ಸ್ಥಾನತ್ತಾರ್" ಒಂದು ಶಾಸನವನ್ನು ಬರೆಸಿದರು.[2] (೩) ಕ್ರಿ.ಶ. ೧೪೭೭ರಲ್ಲಿ ಸಾಳುವ ನರಸಿಂಹನ ರಾಣಿ ಶ್ರೀರಂಗಾಂಬಾದೇವಿ–ಅಮ್ಮನ್ ದೇವಸ್ಥಾನದ ಒಂದು ಗ್ರಾಮದಲ್ಲಿ ಒಂದು ನೀರಾವರಿ ಕಾಲುವೆಯನ್ನು ತೋಡಿಸಿದಳು.[3] (೪) ಕ್ರಿ.ಶ. ೧೫೦೭ರಲ್ಲಿ "ಸ್ಥಾನತ್ತಾರ್" ಒಂದು ಶಿಲಾಶಾಸನವನ್ನು ಕೊಟ್ಟರು. ಇದರ ಪ್ರಕಾರ ತಿರುಪತಿಯ ಉಪನಗರದಲ್ಲೊಂದಾದ ನರಸಿಂಗರಾಯಪುರದಲ್ಲಿ ವಾಸಿಸುತ್ತಿದ್ದ ವ್ಯಾಪಾರಿಗಳಲ್ಲೊಬ್ಬನಾದ ತಿಪ್ಪುಶೆಟ್ಟಿ ದೇವಸ್ಥಾನಕ್ಕೆ ಕೊಟ್ಟ ೮೩೦೫ "ಪಣ" ಗಳನ್ನು ದೇವಸ್ಥಾನಗಳ ಗ್ರಾಮಗಳ ಕೆರೆಗಳು ಮತ್ತು ಕಾಲುವೆಗಳನ್ನು ಉತ್ತಮಪಡಿಸಲು ಮತ್ತು ಇತರ ಉದ್ದೇಶಗಳಿಗೆ ಉಪಯೋಗಿಸಬೇಕೆಂದು ದಾಖಲೆಮಾಡಿದರು.[4] ಹೀಗೆ ದೇವಸ್ಥಾನ ಗ್ರಾಮಗಳ ಪುನರ್ವಸತಿಗೆ ಕೆಲಸ ಮಾಡುತ್ತಿದ್ದಿತು. (೫) ಕ್ರಿ.ಶ. ೧೫೧೭ರಲ್ಲಿ "ಸ್ಥಾನತ್ತಾರ್" ಬರೆಸಿದ ಶಿಲಾಶಾಸನದ ಪ್ರಕಾರ ಧರ್ಮಪುರದ ಸಿತ್ತಮುಸೆಟ್ಟಿ ತನ್ನ ಸ್ವಂತ ವೆಚ್ಚದಲ್ಲಿ ಒಂದು ನೀರಾವರಿ ಕೆರೆಯನ್ನು ನಿರ್ಮಿಸಿದನು.[5]

**ದೇವಸ್ಥಾನದ ಖಜಾನೆ:** ದೇವಸ್ಥಾನವು ಒಂದು "ಶ್ರೀ ಭಂಡಾರ"ವನ್ನು (ದೇವಸ್ಥಾನದ ಖಜಾನೆ) ಹೊಂದಿದ್ದು, ಅದು ಬ್ಯಾಂಕಾಗಿ ಕೆಲಸ ಮಾಡುತ್ತಿತ್ತು. ಶಾಸನಗಳು ದೇವಸ್ಥಾನಕ್ಕೆ ಕೊಟ್ಟ ಹಣವನ್ನು ದಾಖಲೆಮಾಡಿ ಅದರಿಂದ ಬಂದ ಬಡ್ಡಿಯಿಂದ ದೇವಸ್ಥಾನವನ್ನು ಸಂರಕ್ಷಿಸಬೇಕೆಂದು ತಿಳಿಸುತ್ತವೆ. ಉದಾಹರಣೆಗೆ, ಕ್ರಿ.ಶ. ೧೫೨೭ ರಲ್ಲಿ ತಿರುಪತಿಯ ಒಬ್ಬ ವ್ಯಾಪಾರಿ, ಶರಣುಸೆಟ್ಟಿಯರ್ ೩೭೦೦ "ನರ್‌ಪಣಂ" ಗಳನ್ನು ಅಸಲಾಗಿ ದೇವಸ್ಥಾನಕ್ಕೆ ಕೊಟ್ಟನು. ಇದರ ಉದ್ದೇಶ್ಯ ಅದರ ಬಡ್ಡಿಯಿಂದ ಹಲವು ಸೇವೆಗಳನ್ನು ನಡೆಸುವುದು.[6] ಕ್ರಿ.ಶ. ೧೫೩೭ ರಲ್ಲಿ ಶಿಂಗರಾಜ

1. *Ibid.*, No. 197.
2. *Ibid.*, No. 223.
3. *Ibid.*, II, No. 25.
4. *Ibid*, III, No. 127.
5. *Ibid.*, No. 118.
6. *Ibid.*, No. 171.

೧೫೦೦ "ನರ್‌ಪಣಂ" ತೇವಣಿಯನ್ನು ಹಲವು ಸೇವೆಗಳಿಗೆ ಕೊಟ್ಟನು.[1] ಕ್ರಿ.ಶ. ೧೫೬೧ರಲ್ಲಿ ಮಹಾಮಂಡಲೇಶ್ವರ ಅರವೀಡು ಬುಕ್ಕರಾಜ ರಾಮರಾಜ ಶ್ರೀರಂಗರಾಜ ೧೬,೫೦೦ "ನರ್‌ಪಣಂ"ಗಳನ್ನು ಹಲವು ಸೇವೆಗಳಿಗೆ ಕೊಟ್ಟನು.[2] "ಸ್ಥಾನತ್ತಾರ್" ಆ ಹಣವನ್ನು ದೇವಸ್ಥಾನದ ಅಭಿವೃದ್ಧಿಗೆ ಮತ್ತು ಇತರ ಸೇವೆಗಳಿಗೆ ಉಪಯೋಗಿಸ ಬಹುದಾಗಿದ್ದಿತು.[3]

ಪಾಂಡಿತ್ಯಕ್ಕೆ ಪ್ರೋತ್ಸಾಹ : ದೇವಸ್ಥಾನವು ಪಾಂಡಿತ್ಯಕ್ಕೆ ಪ್ರೋತ್ಸಾಹ ಕೊಡುತ್ತಿತ್ತು. ದೇವಾರಾಂ ಮತ್ತು ಇತರ ಮತೀಯ ಸಾಹಿತ್ಯವನ್ನು ಹೇಳಲು, ವೇದಗಳನ್ನು ಹೇಳಲು ಮತ್ತು ಪುರಾಣಶ್ರವಣಕ್ಕೆ ಏರ್ಪಾಡು ನಡೆಯುತ್ತಿದ್ದಿತು. ಕ್ರಿ.ಶ. ೧೪೩೩ರ ಒಂದು ಶಾಸನದ ಪ್ರಕಾರ, ತಿರುಪತಿಯ ಶ್ರೀ ವೈಷ್ಣವರಲ್ಲೊಬ್ಬನಾದ ಮುದಲಿಯಾರ್ ತಿರುಕ್ಕಲಿಕನ್ರಿ ದಾಸನ್ ಶ್ರೀನಿವಾಸಪುರ ಅಗ್ರಹಾರದ ೨೪ ಮಹಾಜನಗಳ ಪರವಾಗಿ ಮಾಡಿದ ದಾನವನ್ನು ದಾಖಲೆಮಾಡಿದರು. ಅದರ ಪ್ರಕಾರ ವೇದ ಪಾರಾಯಣವನ್ನು ನಿಲ್ಲಿಸಿದ್ದುದರಿಂದ, ತಿರುಕ್ಕಲಿಕನ್ರಿ ದಾಸನ್, ಅಳಗಪ್ಪಿರಾ ನಾರ್ ದೇವಣ್ಣ ಒಡೆಯರಿಗೆ ವೇದ ಪಾರಾಯಣವನ್ನು ಪುನಃ ಸ್ಥಾಪಿಸಲು ಅಹವಾಲು ಕೊಟ್ಟರು. ಇದರ ಪರಿಣಾಮವಾಗಿ, ಸಿದ್ಧಕುಟ್ಟೈ ರಾಜಭಂಡಾರದಿಂದ ಅರ್ಧ ಭಾಗವನ್ನು ಪಡೆದು, ೨೪ ವ್ಯಕ್ತಿಗಳಿಗೆ ಕೊಟ್ಟನು. ಅದು ಅವರ ಪೋಷಣೆಗೆ ಸಾಕಾಗಿರಲಿಲ್ಲವಾದ್ದರಿಂದ ಅವರು "ಶ್ರೀ ಭಂಡಾರ"ದ ಉಳಿದ ಅರ್ಧ ಭಾಗವನ್ನು ಕೊಡಬೇಕೆಂದು "ಸ್ಥಾನತ್ತಾರ್"ರವರನ್ನು ಬೇಡಿಕೊಂಡರು. "ಸ್ಥಾನತ್ತಾರ್" ಇದಕ್ಕೆ ಒಪ್ಪಿ ೨೪ ಮಹಾಜನಗಳು ಆ ಭಾಗದ ಹತ್ತೋಟ ತೆಗೆದುಕೊಳ್ಳಬೇಕೆಂದು ಅಧಿಕಾರವಿತ್ತು ಪ್ರತಿನಿತ್ಯವೂ ಅವರಲ್ಲಿ ಇಬ್ಬರು ವೇದಪಾರಾಯಣವನ್ನು ಮಾಡಬೇಕೆಂದು ತಿಳಿಸಿದರು.[4]

ದೇವಸ್ಥಾನವು ವ್ಯಾಸಂಗದ ಕೇಂದ್ರಗಳಾಗಿದ್ದ ಮಠಗಳಿಗೆ ಬೆಂಬಲ ಕೊಟ್ಟು ವಿದ್ಯೆಗೆ ಪ್ರೋತ್ಸಾಹ ಕೊಡುತ್ತಿತ್ತು. ಕ್ರಿ.ಶ. ೧೫೨೪ರಲ್ಲಿ "ಸ್ಥಾನತ್ತಾರ್" ಶ್ರೀಮತ್-ವ್ಯಾಸತೀರ್ಥ ಶ್ರೀಪಾದ ಒಡೆಯರಿಗೆ, ಅವರ ಮಠವನ್ನು ಕಟ್ಟಲು (ವ್ಯಾಸರಾಯ ಮಠ), ಒಂದು ಮನೆ ನಿವೇಶನವನ್ನು ಕೊಟ್ಟರು.[5]

ತಿರುಪತಿ ದೇವಸ್ಥಾನದ ಅಧ್ಯಯನದಿಂದ ಆ ದೇವಸ್ಥಾನದ ಮೇಲ್ವಿಚಾರಣೆಯು ಸ್ಥಳೀಯ ಶ್ರೀ ವೈಷ್ಣವರ ಅಧೀನದಲ್ಲಿದ್ದಿತೆಂಬುದು ಸ್ಪಷ್ಟವಾಗಿದೆ. ಈ ಸಂದರ್ಭದಲ್ಲಿ ಎಸ್. ಕೆ. ಐಯ್ಯಂಗಾರ್, ತಿರುಪತಿ ದೇವಸ್ಥಾನದ ಮೇಲ್ವಿಚಾರಣೆಯಲ್ಲಿ ಸ್ವಾಯತ್ತತೆ

---

1. *Ibid.*, IV, No. 88.
2. *Ibid.*, V, No. 168.
3. *Ibid.*, III, No. 127.
4. *Ibid.*, I, Nos. 199-202.
5. *Ibid.*, III, No. 157.

ಇದ್ದಿತೆಂದೂ ಮತ್ತು ಸ್ಥಳೀಯ ಶ್ರೀ ವೈಷ್ಣವರ ಅಧೀನದಲ್ಲಿದ್ದಿತೆಂದೂ ಹೇಳುತ್ತಾರೆ.[1] ಶಾಸನಗಳು ದೇವಸ್ಥಾನದ ಆಡಳಿತದ ಸ್ವಾಯತ್ತತೆ ಲಕ್ಷಣವನ್ನು ಸ್ಪಷ್ಟಪಡಿಸುತ್ತವೆ. ಸರ್ಕಾರವು ದೇವಸ್ಥಾನದ ಪ್ರತಿದಿನದ ಆಡಳಿತದಲ್ಲಿ ಪ್ರವೇಶಿಸುತ್ತಿರಲಿಲ್ಲ. ಆದರೆ ದೇವಸ್ಥಾನದ ಅಧಿಕಾರಿಗಳು ದೇವಸ್ಥಾನದ ಹಣವನ್ನು ದುರುಪಯೋಗಪಡಿಸಿಕೊಂಡಾಗ ಮತ್ತು ಉಸ್ತುವಾರಿ ಸರಿಯಿಲ್ಲದಿದ್ದಾಗ, ಸರ್ಕಾರವು ಪ್ರವೇಶಿಸುತ್ತಿದ್ದಿತು. ಸಾಳುವ ನರಸಿಂಹನ ಕಾಲದಲ್ಲಿ ಈ ರೀತಿಯ ಒಂದು ನಿದರ್ಶನವಿದೆ. ದೇವಸ್ಥಾನದ ಅರ್ಚಕರಲ್ಲೊಬ್ಬನಾಗಿದ್ದ ನಂಬಿ ಶಿರಪ್ಪಯ್ಯನ್ ದೇವಸ್ಥಾನದ ಆಭರಣಗಳನ್ನು ಕದ್ದಾಗ ಅವನ ಮನೆ ಮತ್ತು ಮನೆ ನಿವೇಶನಗಳನ್ನು ವಶಪಡಿಸಿಕೊಳ್ಳಲು ಆಜ್ಞೆಮಾಡಲಾಯಿತು. ತಿರುಪತಿ ದೇವಸ್ಥಾನದ ಈ ಅಧ್ಯಯನದಿಂದ, ದೇವಸ್ಥಾನಗಳು ಸ್ಥಳೀಯ ಆಡಳಿತದಲ್ಲಿ ಭೂಮಾಲೀಕ ಮತ್ತು ಧಣಿ, ಬ್ಯಾಂಕು, ವಿದ್ಯೆಗೆ ಪ್ರೋತ್ಸಾಹ ಮತ್ತು ಮತೀಯ ಜೀವನದ ಕೇಂದ್ರವಾಗಿ–ಹೀಗೆ ನಾನಾ ರೀತಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಿತೆಂದು ತಿಳಿಯಬಹುದು.

**ಮಠಗಳು :** ಸ್ಥಳೀಯ ಆಡಳಿತದಲ್ಲಿ ತಿರುಪತಿ ದೇವಸ್ಥಾನದ ಆಡಳಿತವು ಒಂದು ನಿದರ್ಶನವಾಗಿದ್ದ ಹಾಗೆ, ಶೃಂಗೇರಿ ಮಠದ ಅಧ್ಯಯನವು ಸ್ಥಳೀಯ ಆಡಳಿತದಲ್ಲಿ ಮಠಗಳ ಪಾತ್ರವನ್ನು ಅರಿಯಲು ಸಹಾಯವಾಗುತ್ತದೆ.

ಶೃಂಗೇರಿ, ತುಂಗಭದ್ರ ನದಿಯ ಎಡಗಡೆ ದಂಡೆಯ ಮೇಲೆ ಪಶ್ಚಿಮ ಘಟ್ಟಗಳ ಒಂದು ಫಲವತ್ತಾದ ಪ್ರದೇಶದಲ್ಲಿದೆ. ಈ ಮಠದ ಮುಖ್ಯಸ್ಥರನ್ನು ಜಗದ್ಗುರುಗಳೆಂದು ಕರೆಯುತ್ತಾರೆ. ಕಾಶಿ ಲಕ್ಷ್ಮಣಶಾಸ್ತ್ರಿ ಬರೆದ ಗುರುವಂಶ ಮಹಾಕಾವ್ಯ ಶೃಂಗೇರಿ ಮಠದ ಚರಿತ್ರೆಗೆ ಒಂದು ಮುಖ್ಯ ಆಧಾರ ಗ್ರಂಥವಾಗಿದೆ.[2] ಗ್ರಂಥಕರ್ತರು ಶೃಂಗೇರಿ ಮಠವನ್ನು ಸ್ಥಾಪಿಸಿದ ಶಂಕರಾಚಾರ್ಯರಿಂದ ಗ್ರಂಥವನ್ನು ಪ್ರಾರಂಭಿಸಿದ್ದಾರೆ. ಶ್ರೀ ಭಾರತೀ ಕೃಷ್ಣ ತೀರ್ಥ ಮತ್ತು ಶ್ರೀ ವಿದ್ಯಾರಣ್ಯರ ಕಾಲದವರೆಗೆ ಶೃಂಗೇರಿಯು ಆಶ್ರಮಗಳ ಸ್ಥಳವಾಗಿದ್ದಿತು ಮತ್ತು ಅದರ ಗುರುಗಳು ವ್ಯಾಸಂಗ ಮತ್ತು ತಪಸ್ಸಿನಲ್ಲಿ ಕಾಲಕಳೆಯುತ್ತಿದ್ದರು. ಅದು ಮತೀಯ ಮತ್ತು ತತ್ವಶಾಸ್ತ್ರದ ಅಧ್ಯಯನದ ಕೇಂದ್ರವಾಗಿತ್ತು. ಗುರುಗಳು ಜಹಗೀರುಗಳನ್ನು ಮತ್ತು ಭೂ ದತ್ತಿಗಳನ್ನು ನೋಡಿಕೊಳ್ಳಬೇಕಾಗಿರಲಿಲ್ಲ. ವಿದ್ಯಾರಣ್ಯರು ಬಂದಮೇಲೆ ಒಂದು ಮುಖ್ಯ ಬದಲಾವಣೆಯಾಯಿತು. ಅವರು ವಿಜಯನಗರ ಸಾಮ್ರಾಜ್ಯದ ಪ್ರಾರಂಭದ ಚರಿತ್ರೆಯಲ್ಲಿ ಪ್ರಮುಖ ಪಾತ್ರವಹಿಸಿ, ವಿಜಯನಗರ ಸಾಮ್ರಾಟರಿಂದ ಭೂ ದತ್ತಿಗಳನ್ನೂ, ಹಣವನ್ನೂ ಮತ್ತು ಅನೇಕ "ಬಿರುದ"ಗಳನ್ನೂ ಪಡೆದರು. ಮಠವು ಅರ್ಧ ಪರಮಾಧಿಕಾರವುಳ್ಳ ರಾಜ್ಯವಾಯಿತು. ವೆಂಕಟರಾಮನ್

---

1. *Ibid.*, Aiyangar, S. K. : *A History of Tirupati*, 2 Vols., (Madras, 1940), I, p. 449.
2. See *MAR*, 1928, *Sringeri Math and its Gurus*, pp. 15–21.

ಹೇಳಿರುವ ಹಾಗೆ ಶ್ರೀ ಭಾರತಿ ಕೃಷ್ಣತೀರ್ಥ ಮತ್ತು ಶ್ರೀ ವಿದ್ಯಾರಣ್ಯರ ಕಾಲದಲ್ಲಿ ಆಶ್ರಮಗಳ ಬೀಡಾಗಿದ್ದ ಶೃಂಗೇರಿ ಒಂದು ರಾಜ್ಯವಾಯಿತು. ಈ ಬದಲಾವಣೆ ಪೂರ್ವ ನಿಯೋಜಿತವಲ್ಲದೆ, ಆಕಸ್ಮಿಕವಾಗಿ ಉಂಟಾಗಿತ್ತು.[1] ಹೀಗೆ ಶೃಂಗೇರಿಯು ಸಂಸ್ಥಾನವಾದುದರಿಂದ ಸ್ಥಳೀಯ ಆಡಳಿತದಲ್ಲಿ ಮಠಕ್ಕೆ ಒಂದು ಸ್ಥಾನವಿದೆ.

**ರಾಜರ ಕೊಡುಗೆಗಳು :** ಶೃಂಗೇರಿ ಸಂಸ್ಥಾನವು ಬೆಳೆಯಲು ಮೊದಲನೆ ಹರಿಹರ, ಮೊದಲನೆಯ ಬುಕ್ಕ ಮತ್ತು ಎರಡನೆ ಹರಿಹರ, ಅನೇಕ ಭೂ ದಾನಗಳನ್ನು ಮಾಡಿದರು. ಈ ಸಂಸ್ಥಾನದ ದರ್ಜೆಯನ್ನು ವಿಜಯನಗರ ಸಾಮ್ರಾಜ್ಯದ ಇತರ ಸಾಮ್ರಾಟರು ಮತ್ತು ಬ್ರಿಟಿಷರು ಮುಂದುವರಿಸಿದರು.

ಕ್ರಿ. ಶ. ೧೩೪೬ ರಲ್ಲಿ ಮೊದಲನೆಯ ಹರಿಹರ ಶೃಂಗೇರಿ ಮಠಕ್ಕೆ ಪ್ರಥಮ ಭೂ ದಾನವನ್ನು ಮಾಡಿದನು. ಶೃಂಗೇರಿಯ ಒಂದು ಶಾಸನವು,[2] ಸಂಗಮನ ಮಕ್ಕಳು ಹರಿಹರ ಮತ್ತು ಇತರರು, ಮತ್ತು ಅವರ ಸಂಬಂಧಿಕರು ಭಾರತೀ ತೀರ್ಥಶ್ರೀಪಾದರಿಗೆ ಮಠಕ್ಕೋಸ್ಕರ ಕೊಟ್ಟ ದತ್ತಿಗಳನ್ನು ದಾಖಲೆಮಾಡಿದೆ. ಈ ಶಾಸನವದ್ನು ಹರಿಹರನ ವಿಜಯೋತ್ಸವದ ಸಂದರ್ಭದಲ್ಲಿ ನೀಡಲಾಯಿತೆಂದು ತಿಳಿದುಬರುತ್ತದೆ. ಇದರ ಪ್ರಕಾರ ವೀರ–ಹರಿಯಪೊಡೆಯರ್, ಮುದ್ದಪೊಡೆಯರ್, ಅಳಿಯ ಬಲ್ಲಪ್ಪ ದಣ್ಣಾಯಕ, ಕುಮಾರ ಸೋಮಣ್ಣೊಡೆಯರ್ ಮತ್ತು ಇತರರು ಶೃಂಗೇರಿಯಲ್ಲಿ ವಾಸಿಸುತ್ತಿದ್ದ ಭಾರತೀ ತೀರ್ಥ ಶ್ರೀ ಪಾದ, ಅವರ ಶಿಷ್ಯರು, ೪೦ ಬ್ರಾಹ್ಮಣರು ಮತ್ತು ಇತರರಿಗೆ, ಕೆಲನಾಡಿಗೆ ಸೇರಿದ ಒಂಬತ್ತು ಗ್ರಾಮಗಳನ್ನು ಕೊಟ್ಟರೆಂದು ತಿಳಿಸುತ್ತದೆ. ಈ ಒಂಬತ್ತು ಗ್ರಾಮಗಳು, ಹೆದ್ದಸೆ, ಹೊನ್ನಹೊಳೆ, ಬಬ್ಬಿ, ಹರವಲಿ, ಬೆಲ್ಲೂರು, ಅಂಬಲೂರು, ಬೆಳಂದೂರು, ಹಲಕ ಮತ್ತು ಹೊಸೂರು.

ಕ್ರಿ. ಶ. ೧೩೫೬ ರ ಒಂದು ಶಾಸನವು,[3] ೩೦೦ "ಗದ್ಯಾಣ"ಗಳ ವರಮಾನವಿದ್ದ ಭೂ ದಾನವನ್ನು ದಾಖಲೆಮಾಡುತ್ತದೆ. ಈ ದಾನವನ್ನು ಮೊದಲನೆಯ ಬುಕ್ಕ ವಿದ್ಯಾಶಂಕರ ದೇವಸ್ಥಾನಕ್ಕೆ ಭೇಟಿನೀಡಿದ ಸಂದರ್ಭದಲ್ಲಿ ಮಾಡಿದನು. ನಂತರ ಬುಕ್ಕ ಕೈಕುಂದ ನಾಡಿನಲ್ಲಿ ೨೨೨ ೧/೨ "ಪಗೋಡ"ಗಳ ಬೆಲೆಯುಳ್ಳ ಭೂಮಿಯನ್ನು ದಾನ ಮಾಡಿದನು.[4] ಎರಡನೆ ಹರಿಹರನು ಕೈಕುಂದನಾಡು ಮತ್ತು ಕೊಡನಾಡಿನಲ್ಲಿ ಭೂದಾನ ಮಾಡಿದನು. ಈ ದಾನಗಳನ್ನು ತಪಸ್ವಿಗಳ, ಶಿಷ್ಯರ ಮತ್ತು ಸೇವಕರ ಪೋಷಣೆಗೆ ಉಪಯೋಗಿಸಬೇಕೆಂದು ಶ್ರೀ ವಿದ್ಯಾತೀರ್ಥರಿಗೆ ಕೊಡಲಾಯಿತು.

---

1. Venkataraman: *The Throne of Transcendental Wisdom* (Tiruchirapalli, 1959), p. 47.
2. *EC*, VI, Sg. 1.
3. *MAR*, 1916, p. 56.
4. *Ibid.*, p. 57.

ಕ್ರಿ. ಶ. ೧೩೮೦ ರಲ್ಲಿ ಎರಡನೆ ಹರಿಹರ ಹಿಂದೆ ಕೊಟ್ಟ ಸಮಸ್ತ ದಾನಗಳನ್ನು ಸ್ಥಿರಪಡಿಸಿದುದಲ್ಲದೆ ವಿದ್ಯಾರಣ್ಯರಿಗೆ ಮತ್ತೊಂದು ದಾನ ಮಾಡಿದನು. ಕ್ರಿ.ಶ. ೧೩೮೭[1] ರಲ್ಲಿ ಹರಿಹರನು ಮಾಡಿದ ಇನ್ನೊಂದು ದಾನವನ್ನು ೧೦೦ ವೃತ್ತಿಗಳನ್ನಾಗಿ ವಿಂಗಡಿಸಿ, ಅದರಲ್ಲಿ ಐದನೆ ನಾಲ್ಕು ಭಾಗವನ್ನು ದೇವಸ್ಥಾನಗಳಿಗೂ, ಉಳಿದುದನ್ನು ಅರ್ಹ ಪಂಡಿತರಿಗೂ ಕೊಡಲಾಯಿತು.

ಕ್ರಿ.ಶ. ೧೩೮೯-೯೦ರಲ್ಲಿ ಮೂವತ್ತು ವೃತ್ತಿಗಳ ಇನ್ನೊಂದು ದಾನವನ್ನು ಮಾಡಲಾಯಿತು. ಈ ಎಲ್ಲಾ ಜಮೀನುಗಳ ಬೆಲೆ, ೩೦೦೩ "ಪಗೋಡ"ಗಳಾಗಿದ್ದರಿಂದ ಶೃಂಗೇರಿಗೆ "೩೦೦೦ ಸೀಮೆ" ಎಂದು ಹೆಸರುಬಂದಿತು. ಕ್ರಿ.ಶ. ೧೩೯೨ರಲ್ಲಿ ಶೃಂಗೇರಿಗೆ ಸುಮಾರು ೧೨ ಮೈಲಿಗಳ ದೂರದಲ್ಲಿ ಎರಡನೆ ಹರಿಹರ, ಹರಿಹರಪುರವೆಂಬ ಅಗ್ರಹಾರವನ್ನು ಸ್ಥಾಪಿಸಿದನು.[2] ಅಲ್ಲಿ ಸ್ಥಾಪಿಸಿದ ಮಠಕ್ಕೆ "ಶ್ರೀರಾಮಚಂದ್ರಸರಸ್ವತಿ" ಪ್ರಥಮ "ಆಚಾರ್ಯ"ರಾದರು.

ಕ್ರಿ.ಶ. ೧೬೫೨ರ ಒಂದು ಶಾಸನವು[3] ಶೃಂಗಪುರ ಮತ್ತು ವಿದ್ಯಾರಣ್ಯಪುರವೆಂಬ ಎರಡು ಅಗ್ರಹಾರಗಳನ್ನು ಸ್ಥಾಪಿಸಿ ವಿದ್ವಾಂಸ ಬ್ರಾಹ್ಮಣರಿಗೆ ಕೊಟ್ಟು, ವಿದ್ಯಾರಣ್ಯರ ಸೇವೆಗೆ ಕೃತಜ್ಞತೆಯಿಂದ ಹರಿಹರ ಶೃಂಗೇರಿಯಲ್ಲಿ ಮಠವನ್ನು ಸ್ಥಾಪಿಸಿದನೆಂದು ದಾಖಲೆಮಾಡಿದೆ.

ಈ ಶಾಸನದ ಪ್ರಕಾರ, ಹರಿಹರಮಹಾರಾಯ ಶೃಂಗಾಪುರದಲ್ಲಿ ಮಲ್ಲಿಕಾರ್ಜುನ, ವಿದ್ಯಾಶಂಕರಸ್ವಾಮಿ ಮತ್ತು ಶಾರದಮ್ಮನವರ ಪೂಜೆಗೆ ಒಂದು ಮಠ ಮತ್ತು ಅಗ್ರಹಾರ ಇರಬೇಕೆಂದು ವಿದ್ಯಾರಣ್ಯರ ಪಾದಗಳಲ್ಲಿ ಅರಿಕೆಮಾಡಿಕೊಂಡು ಶೃಂಗಪುರ ಮತ್ತು ವಿದ್ಯಾರಣ್ಯಪುರ ಎಂಬ ಅಗ್ರಹಾರಗಳನ್ನು ಸ್ಥಾಪಿಸಿ, ೨೫೦ ಪಾಲುಗಳನ್ನಾಗಿ ವಿಂಗಡಿಸಿ ವಿದ್ಯಾರಣ್ಯಭಾರತೀಸ್ವಾಮಿಗಳಿಗೆ ಕೊಟ್ಟನು.

ಎರಡನೆ ದೇವರಾಯ ಹೊನ್ನಾವರ ರಾಜ್ಯದಲ್ಲಿ ಮಂಜುಗಣಿಗ್ರಾಮವನ್ನು[4] ಮತ್ತು ಗೋವಾರಾಜ್ಯದಲ್ಲಿ ಕೆಳಗುಂಡನಿ ಮತ್ತು ಕೈಗೈಗ್ರಾಮಗಳನ್ನು ದಾನಮಾಡಿದನು.[5]

ಕೃಷ್ಣ ದೇವರಾಯನ ಕಾಂಜೀವರಂ ಶಾಸನಗಳು ಎರಡು ಗ್ರಾಮಗಳ ದಾನವನ್ನು ದಾಖಲೆಮಾಡಿವೆ.[6] ಕ್ರಿ.ಶ. ೧೫೨೨ರಲ್ಲಿ ಮಹದೇವಸರಸ್ವತಿಯವರ ಶಿಷ್ಯ ಚಂದ್ರಚೂಡ ಸರಸ್ವತಿಗಳಿಗೆ ಪೊಡವೂರ್ ಮತ್ತು ಕಟ್ಟುಪಟ್ಟ ಗ್ರಾಮಗಳನ್ನು ದಾನಮಾಡಿ, ದಾನ ಮಾಡುವ ಸಮಯದಲ್ಲಿ, ಪೊಡವೂರ್ ಗ್ರಾಮದ ಹೆಸರನ್ನು ಕೃಷ್ಣರಾಯಪುರಂ ಎಂದು

---

1. *Ibid.*, p. 56.
2. *EC*, VI, Kp. 49.
3. *Ibid.*, Sg. 11.
4. *MAR*, 1916, pp. 60-61.
5. *Ibid.*, p. 61.
6. *EI*, XIII, pp. 122-132.

ಬದಲಾಯಿಸಲಾಯಿತು. ಅಲ್ಲದೆ ಕ್ರಿ.ಶ. ೧೫೨೭ರಲ್ಲಿ ಆತನು ಉದಯಂಬಾಕ್ಕಂ ಗ್ರಾಮವನ್ನು ಸದಾಶಿವಸರಸ್ವತಿಗಳಿಗೆ ದಾನಮಾಡಿ ದಾನಮಾಡುವ ಸಮಯದಲ್ಲಿ ಆ ಗ್ರಾಮದ ಹೆಸರನ್ನು ಕೃಷ್ಣರಾಯಪುರವೆಂದು ಬದಲಾಯಿಸಿದನು.[1]

ಹೀಗೆ ಶೃಂಗೇರಿ ಮಠವು ವಿಜಯನಗರದ ರಾಜಮನೆತನದೊಡನೆ ನಿಕಟಸಂಬಂಧ ಹೊಂದಿದ್ದಿತು. ರಾಜರು ಮಠದ ಗುರುಗಳನ್ನು ಗೌರವಿಸಿ ಮಠದ ಪೋಷಣೆಗೆ ದಾನಗಳನ್ನು ಮಾಡಿದರು. ಪ್ರಾರಂಭದಿಂದ ಗುರುಗಳು ಭೂಮಿಯನ್ನು ತಮ್ಮ ಸ್ವಂತ ಆಸ್ತಿಯಾಗಿ ಪರಿಗಣಿಸದೆ ಪೀಠವನ್ನು ಮುಂದುವರಿಸಲು ಮತ್ತು ಅದರ ಉದ್ದೇಶಗಳನ್ನು ಹರಡಲು ನ್ಯಾಸವಾಗಿ ಇಟ್ಟ ಆಸ್ತಿ ಎಂದು ಪರಿಗಣಿಸುತ್ತಿದ್ದರು. ವಿಜಯನಗರ ಸಾಮ್ರಾಜ್ಯವು ಉಚ್ಛ್ರಾಯಸ್ಥಿತಿಯಲ್ಲಿರುವ ತನಕ ಶೃಂಗೇರಿ ಸಂಸ್ಥೆಗೆ ರಾಜರ ಪ್ರೋತ್ಸಾಹವಿದ್ದಿತು.

**ಸ್ಥಳೀಯಸಂಸ್ಥೆಗಳಿಂದ ಮತ್ತು ಖಾಸಗಿ ವ್ಯಕ್ತಿಗಳಿಂದ ದಾನಗಳು :** ಶೃಂಗೇರಿ ಮಠವು ಸ್ಥಳೀಯ ಸಂಸ್ಥೆಗಳಿಂದ ಮತ್ತು ವ್ಯಕ್ತಿಗಳಿಂದ ದಾನಗಳನ್ನು ಸ್ವೀಕರಿಸುತ್ತಿದ್ದಿತು. ಅದು ಕೊಂಡುಕೊಳ್ಳುವುದರಿಂದಲೂ ಆಸ್ತಿಯನ್ನು ಹೊಂದುತ್ತಿದ್ದಿತು. ಇದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು—

(೧) ಕ್ರಿ.ಶ. ೧೩೯೨ ರಲ್ಲಿ ನರಸಿಂಹ ಭಾರತೀ ಗುರುವಾಗಿದ್ದಾಗ ಬೇಲೂರಿನ ಬೊಮ್ಮಣ್ಣ ಹೆಗ್ಗಡೆ ಮತ್ತು ತಮ್ಮರಸನ ಮಗ ಬೊಮ್ಮಣ್ಣ ಒಪ್ಪಿ, ವಿದ್ಯಾಶಂಕರ ದೇವರ ನೈವೇದ್ಯಕ್ಕೆ ಬೇಲೂರಿನಲ್ಲಿ ಭೂಮಿಯನ್ನು ದಾನಮಾಡಿದುದಲ್ಲದೆ, ಒಂದು ಹೂವಿನ ತೋಟವನ್ನೂ ದೇವಸ್ಥಾನಕ್ಕೆ ಮಾರಿದರು.[2] (೨) ಕ್ರಿ.ಶ. ೧೪೦೧ ರಲ್ಲಿ ಶಾಸನಗಳಲ್ಲಿ ತಿಳಿಸಿರುವ ಹಲವು ಹೆಬ್ಬಾರರು ಶ್ರೀಮಠದ ಗೋಪಿನಾಥ ಭಟ್ಟರಿಗೆ ಕೆಲವು ಜಮೀನುಗಳನ್ನು ದಾನಮಾಡಿದರು.[3] (೩) ಕ್ರಿ.ಶ. ೧೪೦೭ರ ಒಂದು ಶಾಸನವು, ಶ್ರೀಮಠದ ಅಧಿಕಾರಿ ಕೃಷ್ಣದೇವನಿಗೆ ೪೩ "ಹೊನ್ನು"ಗಳೊಡನೆ ಕೆಲವು ಜಮೀನುಗಳನ್ನು ಮಾರಿದುದನ್ನು ದಾಖಲೆಮಾಡಿದೆ.[4] (೪) ಕ್ರಿ.ಶ. ೧೪೦೮ ರಲ್ಲಿ ಚಂದ್ರಶೇಖರ ಭಾರತೀ ಶ್ರೀಪಾದ ಒಡೆಯರು ಗುರುವಾಗಿದ್ದಾಗ, ಕೆಳನಾಡಿನ ಹೆದ್ದಸೆಯ ಚಿಕ್ಕ ಬೊಮ್ಮಣ ಹೆಗ್ಗಡೆ ಮತ್ತು ಇತರರು ವಿಷ್ಣುಭಟ್ಟರಿಗೆ ೩೩ "ವರಹ"ಕ್ಕೆ ಕೆಲವು ಜಮೀನುಗಳನ್ನು ಮಾರಿದರು. ಅವರು, ಶ್ರೀಮಠಕ್ಕೆ ಸಾಗುವಳಿಗಾಗಿ ಜಕ್ಕಣ್ಣ ಹೆಗ್ಗಡೆ ೩ "ಹೊನ್ನು", ೩ "ಹಣ" ಬಾಡಿಗೆಯನ್ನು ಕೊಡಬೇಕೆಂದು ಏರ್ಪಾಡು

---

1. **Copper Plates, Nos. 4 and 5—Copper Plate Inscriptions belonging to the Sri Sankaracharya of the Kamakoti Pithe, Ed. by Gopinatha Rao, T. A., (Madras, 1916), pp. 40-79.**
2. ***EC*, VI, Sg. 22.**
3. ***Ibid.*, 28.**
4. ***Ibid.*, 26.**

ಮಾಡಲಾಯಿತು. ಈ ನಿದರ್ಶನದಲ್ಲಿ, "ನಾಡು" ಜನರು ಜಮೀನುಗಳನ್ನು ಕೊಟ್ಟರು (ನಾಡವರು ಧಾರೆಯಂ ಎರೆದು.)[1] (೫) ಕ್ರಿ.ಶ. ೧೪೯೯ರಲ್ಲಿ ಪುರುಷೋತ್ತಮ ಭಾರತೀ ಒಡೆಯರು ಗುರುವಾಗಿದ್ದಾಗ ಕೆಳನಾಡಿನ ಹೆಗ್ಗಡೆಗಳು ಶ್ರೀ ಮಠಕ್ಕೆ ೩೨ ಹೊನ್ನುಗಳಿಗೆ ಭೂಮಿಯನ್ನು ವಿಕ್ರಯಿಸಿದರು. (ನಾಡವರು ಪೊಡವಟ್ಟು).[2] (೬) ಕ್ರಿ.ಶ. ೧೪೫೮ ರ ಒಂದು ಶಾಸನದ ಪ್ರಕಾರ, ಮಲಿಕದ ಕರಿಯ ಬೊಮ್ಮಣ ಹೆಗ್ಗಡೆ ಮತ್ತು "ನಾಡು" ಜನರು ಮಲ್ಲಿಕಾರ್ಜುನ ದೇವರಿಗೆ ದಾನಗಳನ್ನು ಮಾಡಿ ವೆಚ್ಚಮಾಡಬಹುದಾದ ದರಗಳನ್ನು ಗೊತ್ತುಮಾಡಿದರು (ನಾಡನು ಕೂಡಿಕೊಂಡು ಬರಸಿದ ಧರ್ಮದ ಶಿಲಾಶಾಸನ . . . . . . ನಾಡ ವಪ್ಪ).[3] (೭) ಕ್ರಿ.ಶ. ೧೫೪೭ರಲ್ಲಿ ಪುರೋಹಿತ ನರಸಿಂಹಭಟ್ಟ ವಿಶ್ವೇಶ್ವರ ದೇವರನ್ನು ಪ್ರತಿಷ್ಠಿಸಿ ಆ ದೇವರ ನೈವೇದ್ಯ ಮತ್ತು ನಿತ್ಯ ದೀಪ ಮತ್ತು ಛತ್ರಕ್ಕೆ ೫೦೦ ಅಡಕೆಮರಗಳನ್ನು ದಾನಮಾಡಿದನು.[4]

ಹೀಗೆ ಮಠವು ಐಶ್ವರ್ಯಯುತ ಭೂಮಾಲೀಕತ್ವ ಹೊಂದಿತ್ತು. ಭೂಮಿಯನ್ನು ದಾನರೂಪವಾಗಿ ಅಥವಾ ಕೊಂಡುಕೊಳ್ಳುವುದರಿಂದ ಪಡೆಯುತ್ತಿತ್ತು. ಅದು ರಾಜ್ಯ ಮತ್ತು ಖಾಸಗಿ ದಾನಗಳಿಂದ ಹಣಕಾಸಿನ ಸಹಾಯ ಪಡೆಯುತ್ತಿತ್ತು.

**ಮಠದ ಕರ್ತವ್ಯಗಳು:** ಮಠವು ಶಂಕರಾಚಾರ್ಯರ ಅದ್ವೈತ ತತ್ವವನ್ನು ಬೋಧಿಸುವ ಮತ್ತು ವಿದ್ಯಾಭ್ಯಾಸವನ್ನು ಜನಪ್ರಿಯಗೊಳಿಸುವ ಎರಡು ಮುಖ್ಯ ಕರ್ತವ್ಯಗಳನ್ನು ಮಾಡುತ್ತಿತ್ತು. ಅದು ಅದರ ಐಶ್ವರ್ಯದ ಮಾಲೀಕತ್ವ ಹೊಂದಿದ್ದು ಹೊರಗಿನ ಯಾವುದೇ ಅಡ್ಡಿ ಇಲ್ಲದೆ ತನಗೆ ತೋಚಿದ ಹಾಗೆ ವೆಚ್ಚಮಾಡುತ್ತಿದ್ದಿತು. ಉದಾಹರಣೆಗೆ, ಕ್ರಿ.ಶ. ೧೪೧೮ರ ಒಂದು ಶಾಸನವು ಮಲ್ಲಣ್ಣನೆಂಬುವನಿಗೆ "ಶ್ರೋತ್ರ ಗುತ್ತಿಗೆ"ಯಾಗಿ, (ಒಬ್ಬ ಬ್ರಾಹ್ಮಣನಿಗೆ ಮತೀಯ ಅಥವಾ ಲೌಕಿಕ ವಿದ್ಯೆಯನ್ನು ಬೋಧಿಸಲು ಕೊಡುತ್ತಿದ್ದ ದಾನ) ಕೊಡಲಾಯಿತು.[5] ಕ್ರಿ.ಶ. ೧೫೬೪ರಲ್ಲಿ ರಾಮಚಂದ್ರ ಭಾರತೀ ಒಡೆಯರು ಕೆಡ ಬೆಲ್ಲೂರು ಗ್ರಾಮದ ಒಂದು ಪಾಲನ್ನು ಕಂದಾಯ ಮಾಫಿ ಮಾಡಿ ಕೊಟ್ಟರು. ವಿಜಯನಗರ ಸಾಮ್ರಾಜ್ಯದಲ್ಲಿ ಶೃಂಗೇರಿ ಮಠವು ಮತಪ್ರಚಾರ ಮತ್ತು ವಿದ್ಯಾಭ್ಯಾಸ ಸಂಸ್ಥೆಯಾಗಿ ಮುಖ್ಯ ಪಾತ್ರ ಹೊಂದಿದ್ದಿತು.

೧೭ನೆ ಶತಮಾನದಲ್ಲಿ ರಾಜಕೀಯ ಅಸ್ಥಿರತೆಯಿಂದ "ಸಂಸ್ಥಾನವು" ತನ್ನ ಕೆಲವು ಬೆಲೆಯುಳ್ಳ ಆಸ್ತಿಯನ್ನು ಕಳೆದುಕೊಳ್ಳಲು ಕಾರಣವಾಯಿತು. ಕ್ರಿ.ಶ. ೧೬೩೦ರ ನಂತರ, ಮುಮ್ಮಡಿ ಶ್ರೀರಂಗನು ದಕ್ಷಿಣದಲ್ಲಿ ದಂಗೆಯನ್ನು ಎದುರಿಸಬೇಕಾದಾಗ ಮತ್ತು ಬಿಜಾಪುರ ಮತ್ತು ಗೋಲ್ಕೊಂಡ ಕಿರುಕುಳ ಕೊಡುತ್ತಿದ್ದಾಗ ಕೆಳದಿ ನಾಯಕನು

---

1. *Ibid.*, 29.
2. *Ibid.*, 36.
3. *Ibid.*, 30.
4. *Ibid*, 10.
5. *Ibid.*, 32.

ಆತನಿಗೆ ಆ ಕ್ರಯ ಕೊಟ್ಟನು. ಮುಮ್ಮಡಿ ಶ್ರೀರಂಗ ಬೇಲೂರಿನಲ್ಲಿ ವಾಸಿಸುತ್ತಿದ್ದನು. ಆದ್ದರಿಂದ ಕೇಂದ್ರಸರ್ಕಾರದ ಬೆಂಬಲವಿಲ್ಲದೆ ಶೃಂಗೇರಿ ಸಂಸ್ಥಾನದ ಗಡಿ ಗ್ರಾಮಗಳು, ಸಾಹಸಗಾರರಿಗೆ ಮತ್ತು ಅದರಲ್ಲಿ ನಿಷ್ಠೆ ಇಲ್ಲದವರ ಪಾಲಾದವು. ಶೃಂಗೇರಿಗೆ ಸಹಾಯ ಮಾಡಿದವರಲ್ಲಿ ಕೆಳದಿ ಮನೆತನದ ವೆಂಕಟಪ್ಪನಾಯಕ (ಕ್ರಿ.ಶ. ೧೫೮೬-೧೬೨೯) ಮೊದಲಿಗ. ಅವನು ಗುರುಗಳನ್ನು ಇಕ್ಕೇರಿಗೆ ಆಹ್ವಾನಿಸಿ ಅವರಿಗೆ ಹಸಿರು ಧ್ವಜವನ್ನು ಬಹುಮಾನವಾಗಿ ಕೊಟ್ಟನು. ಅವನು ಮಠದ ಕಟ್ಟಡವನ್ನು ವಿಸ್ತರಿಸಿದನು. ಅಗ್ರಹಾರಗಳನ್ನು ಸ್ಥಾಪಿಸಿದನು. ಮತ್ತು ಮುಕ್ಕರ್‌ನಾಡಿನಲ್ಲಿ ೫೦ "ಪಗೋಡ" ಗಳಿಗಿಂತ ಹೆಚ್ಚು ವರಮಾನ ಬರುವ ಭೂಮಿಯನ್ನು ದಾನಮಾಡಿದನು.[1] ವೀರಭದ್ರ ನಾಯಕ ಇಕ್ಕೇರಿ ಸಿಂಹಾಸನಕ್ಕೆ ಬಂದಮೇಲೆ (ಕ್ರಿ.ಶ. ೧೬೨೯-೪೫) ಕಳಸದ ನಾಯಕ ಭೈರವ ದಂಡೆತ್ತಿಬಂದು ಇಕ್ಕೇರಿಯೂ ಸೇರಿದಂತೆ ಒಂದು ಭಾಗವನ್ನು ಆಕ್ರಮಿಸಿದನು. ಭೈರವ ಮೂರಾವರ್ತಿ ಶೃಂಗೇರಿಗೆ ಹೋಗಿ ಅದರ ಐಶ್ವರ್ಯವನ್ನು ದೋಚಿದನು. ಇಕ್ಕೇರಿ ಶಿವಪ್ಪನಾಯಕನ ಕಾಲದಲ್ಲಿ (ಕ್ರಿ.ಶ. ೧೬೪೫-೬೦) ಮಠದ ಭೂಮಿ ಮತ್ತು ಇತರ ಸ್ವತ್ತುಗಳನ್ನು ಗುರುಗಳಿಗೆ ಹಿಂದಿರುಗಿಸಲಾಯಿತು. ಆತನು ಮಠಕ್ಕೆ, ಹೊಳೆ ಹೊನ್ನೂರ್ ಮತ್ತು ಇತರ ಜಿಲ್ಲೆಗಳಲ್ಲಿ (೧೨೨ "ಪಗೋಡ" ಗಳಿಗಿಂತ ಹೆಚ್ಚು ಬೆಲೆಯುಳ್ಳ) ಭೂಮಿಯನ್ನು ದಾನಮಾಡಿದನು.[2]

ಈ ಅಧ್ಯಯನದಿಂದ ಶೃಂಗೇರಿ ಮಠವು ಕಂದಾಯವನ್ನು ವಸೂಲು ಮಾಡಲು ಮತ್ತು ವೆಚ್ಚಮಾಡಲು ಅಧಿಕಾರಿಗಳನ್ನು ನೇಮಿಸುತ್ತಿದ್ದ ಮತ್ತು ಪ್ರತಿನಿತ್ಯದ ಮತ್ತು ವಿಶೇಷ ಪೂಜೆಗೆ ಅರ್ಚಕರನ್ನು ನೇಮಿಸುತ್ತಿದ್ದ ವಿಜಯನಗರ ಸಾಮ್ರಾಜ್ಯದೊಳಗಿನ ಒಂದು ಸಣ್ಣ ರಾಜ್ಯವಾಗಿತ್ತೆಂದು ತಿಳಿಯಬಹುದು. ಮಠವು ಶೃಂಗೇರಿಯಿಂದ ಹೊರಗೂ ಆಸ್ತಿ ಹೊಂದಿದ್ದು ಅದಕ್ಕೆ ಸೇರಿದ ಭೂಮಿಯ ಮೇಲೆ ಸಂಪೂರ್ಣ ಹತೋಟಿ ಹೊಂದಿತ್ತು. ಮಠಕ್ಕೆ ಸರ್ಕಾರದ ಸುಂಕಗಳು ಮತ್ತು ತೆರಿಗೆಗಳಿಂದ ಮಾಫಿ ಇದ್ದಿತು. ಶೃಂಗೇರಿ ಸಂಸ್ಥಾನವು ತನ್ನ ಗಡಿಯೊಳಗೆ ಕಾನೂನು ಮತ್ತು ಶಾಂತಿ ಪಾಲನೆ ಮಾಡುವ ಅಧಿಕಾರ ಹೊಂದಿದ್ದಿತು. ಅದು ಜನರ ಮತೀಯ ಮತ್ತು ಆಧ್ಯಾತ್ಮಿಕ ಜೀವನವನ್ನು ಉತ್ತಮಪಡಿಸಲು ಮತ್ತು ವಿದ್ಯೆಯನ್ನು ಹರಡಲು ಉದ್ದೇಶಿಸಿದ್ದ ಒಂದು ಸ್ವಾಯತ್ತತಾ ಸಂಸ್ಥೆಯಾಗಿದ್ದಿತು.

---

1. *Ibid*, V, *MAR*, 1928, p. 15.
2. *MAR*, 1928, p. 17.

# ಸಂಕ್ಷಿಪ್ತ ಸೂಚಿ

| | |
|---|---|
| Admn. | *Administration and Social Life Under Vijayanagar* by T. V. Mahalingam. |
| ARSIE | *Annual Reports of South Indian Epigraphy.* The Inscriptions copied in particular years and published in the reports are refered to as 1 of 1887, 65 of 1922 etc. |
| ASI | *Archaeological Survey of India.* |
| EC | *Epigraphia Carnatica.* |
| EI | *Epigraphia Indica,* |
| Ec. Life | *Economic Life in the Vijayanagara Empire* by T. V. Mahalingam. |
| IA | *Indian Antiquary.* |
| Further Sources | *Further Sources of Vijayanagar History.* |
| HJMU | *Half-Yearly Journal of the Mysore University.* |
| IHQ | *Indian Historical Quarterly.* |
| JAHRS | *Journal of the Andhra Historical Society.* |
| JRAS | *Journal of the Royal Asiatic Society of Great Britain and Ireland.* |
| JIH | *Journal of Indian History.* |
| JASB | *Journal of the Asiatic Society of Bengal.* |
| JOR | *Journal of Oriental Research, Madras.* |
| KI | *Karnataka Inscriptions.* |
| KNV | *Keḷadinripavijaya* by Linganna. |
| MAR | *Annual Reports of the Mysore Archaeological Department.* |
| Nel. Ins. | *Nellore District Inscriptions.* |
| PIHC | *Proceedings of the Indian History Congress.* |
| IPS | *Chronological List of Inscriptions of the Pudukkottai State.* |
| QJMS | *Quarterly Journal of the Mythic Society.* |
| Soc. & Pol. Life. | *Social and Political Life in the Vijayanagara Empire*—B. A. Saletore. |

Studies — *Studies in the History of the Third Dynasty of Vijayanagara* by N. Venkataramanayya.
Sources — *Sources of Vijayanagara History* by S. Krishnaswamy Aiyangar.
SII — *South Indian Inscriptions.*
SIP — *South Indian Polity* by T. V. Mahalingam.
TTDI — *Tirumalai Tirupathi Dēvasthānam Inscriptions.*

## ಗ್ರಂಥಋಣ

*Primary Sources*

(A) *Inscriptions*

Annual Reports of the Archaeological Survey of India, 1887 onwards, Calcutta.

Annual Reports of the Mysore Archaeological Department, 1908 onwards.

Annual Reports of South Indian Epigraphy, Madras, 1887-1951.

Archaeological Survey of Southern India—Lists of Antiquarian. Remains in the Presidency of Madras, by Sewell, Robert, 2 Vols., Madras, 1882-84.

Archaeological Survey of Southern India-Vol. IV, Tamil and Sanskrit Inscriptions by Burgess, James with Translations by Pandit M. Natesa Sastri, Madras, 1886.

The Descriptive Lists of Stone and Copper-plate Inscriptions, examined by the Kannada Research Institute during the years 1941-42 to 1942-43 (Dharwar, 1961).

Summaries of the Inscriptions, 1943–44 to 1949–50 by Desai, P. B., Dharwar, 1966.

A Corpus of Inscriptions in the Kannada Districts of Hyderabad State, by Desai, P. B., Hyderabad, 1958.

Epigraphia Carnatica, Vols. 1-16, Bangalore.

Epigraphia Indica, Calcutta, 1892 onwards.

Hyderabad Archaeological Series.

Annual Report on the Kannada Research in Bombay Province for 1939-40, Ed. by Panchamukhi, R. S. (Dharwar, 1941.)

Karnāṭak Inscriptions, Vols. 1-5 (Dharwar).
Inscriptions of the Deccan by Naik, A. V., Poona, 1947.
Nellore District Inscriptions by Butterworth, A. and Venugopal Chetty, V., 3 Vols., Madras, 1905.
Chronological List of Inscriptions of the Pudukkottai State, 1929.
Pudukkottai State Inscriptions, Puddukkottai, 1929.
A Topographical List of the Inscriptions of the Madras Presidency by Rangacharya, V., Vols.1-3, Madras, 1919.
Historical Inscriptions of Southern India by Sewell, Robert and Krishnaswamy Aiyangar, S., Madras, 1932.
Report on the Inscriptions of Tirumalai Tirupati Devasthanam by Subramanya Sastri, S., Madras, 1930.
South Indian Inscriptions, 1890 onwards, Vols. 1 to 15, 17 & 20.
Tirumalai Tirupati Dēvasthānam Inscriptions, 6 Vols., Madras, 1937-1951.
Travancore Archaeological Series.

(ಆ) ಸಾಹಿತ್ಯ

Aiyangar, Krishnaswamy, S., The Sources of Vijyanagara History (Madras, 1919).
Basavaraja, Śivatattvaratñakaṛa, Edited by B. Rama Rao and Sundara Sastri (Mangalore, 1927).
Bhāskarāchārya, Vaiśyapurāṇamu (Madras, 1929).
Kautilya's Arthaśāstra, Translated by R. Shama Sastri (Bangalore, 1923).
Mādhava, Parāśara-Mādhavīyam or Vidyāraṇya Smṛiti, A portion of this work on Law and Government was Translated by A. C. Burnel under the title Dāyabhāga (Madras, 1868).
The Institutes of Parāśara, Translated into English, Krishnakamal Bhattacharya (Calcutta, 1887).
Manu : The Laws of, Translated by George Buhler, Sacred Books of the East, XXV (Oxford, 1886).

Venkanna, Chincholi (Editor), Parāśara Saṁhitā or Parāśara Mādhavīya Dharma Śāstra (Bangalore, 1890).

Rāyavāchakamu, published in the Journal of the Telugu Academy, Vol. III (Madras).

Sōmēśvara III, Mānasōllāsa, Vol. II, Edited by Shrigondekar, G. K., Gaekwad's Oriental Series, LXXXIV (Baroda, 1939).

Śukrāchārya, Śukranīti, Translated by Sarkar, B. K. (Allahabad 1913).

Venkataramanayya, N. & K. A. Nilakanta Sastri, Further Sources of Vijayanagara History, 3 Vols. (Madras, 1946).

Vijñānēśvara, Mitākshara (Second Edition, Edited by Gharpure, J. R. (Bombay, 1939).

Wilson, H. H: The Mackenzie Collection, A Descriptive Catalogue of the Oriental Manuscripts, and other articles illustrative of History, Statistics and Antiquities of the South of India, collected by the late H. H. Wilson (2nd edition), 2 Vols. (Calcutta, 1828; Madras, 1882).

ಲಿಂಗಣ್ಣ: ಕೆಳದಿ ನೃಪವಿಜಯ, ಸಂಪಾದಕ ಆರ್. ಶಾಮಶಾಸ್ತ್ರಿ, ಮೈಸೂರು–1921.

(ಇ) ಕಥನಗಳು ಮತ್ತು ಪ್ರವಾಸಿ ಬರಹಗಳು

Abdur Razaak in Elliot and Dowson, History of India as Told by Its Own Historians, Vol. IV (London, 1872).

Barbosa, Duratte: The Book of Duratte, Barbosa, translated with notes etc., by Longworth Dames, 2 Vols. (London, 1918).

Caesar Frederick-Samual Purchas, His Pilgrims, Vol. X (Glosglow, 1905).

Chronicle of Domingo Paes, Taanslated by Robert Sewell in 'A Forgotten Empire', pp. 229–278.

Chronicle of Fernao Nuniz, Translated by Robert Sewell in 'A Forgotten Empire', pp. 279–380.

The Story of Barradas (1614)—Translated by Robert Sewell in 'A Forgotten Empire', pp. 213-227.

Firishtah, Mohamed Kassim: History of the Rise of the Mahomedan Power in India, till the Year 1612—Translated by John Briggs, 4 Vols. (Calcutta, 1908-10).

Ibn Batuta—Edited by Denison Ross and Eileen Power (London, 1929).

## ಆಧುನಿಕ ಕೃತಿಗಳು

Altekar, A. S., : A History of Village Communities in Western India (Madras, 1927).

Altekar, A. S., : State and Government in Ancient India (Benares, 1949).

Aiyangar, Krishnaswamy, S :

1. Ancient India (Madras, 1911).
2. A Little Known Chapter of Vijayanagar History (Madras, 1916).
3. The Yet-Remembered Ruler of Long-Forgotten Empire, Krishnadēvarāya of Vijayanagara, A. D. 1509-1530 (Madras, 1917).
4. South India and Her Mohammadan Invaders (Oxford, 1921).
5. Some Contributions of South India to Indian Culture (Calcutta, 1923).
6. Evolution of the Hindu Administrative Institutions in Southern India (Madras, 1931).
7. A History of Tirupati, (Madras, 1940).
8. Ancient India and South Indian History and Culture, 2 Vols. (Poona, 1941).

Aiyar, Subramanya, K. V., : Historical Sketches of Ancient Dakhan, 2 Vols. (Madras, 1957).

Appodorai, A., : Economic Conditions in Southern India, 1000-1500 A. D., Vols. 1 and 2 (Madras, 1936).

Baden Powell, B. P., : The Indian Village Community (London, 1896).

Beni Prasad, The State in Ancient India (Allahabad, 1928).

Bhandarkar, R. G.: Early History of the Deccan Down to the Muslim Conquest (Calcutta, 1928).

Burnell, A. C.: Elements of South Indian Palaeography from 4th to the 7th Century A.D., (London, 1878).

Dikshit, G. S., Local Self-Government in Mediaeval Karnataka (Dharwar, 1964).

Dikshitar, V. R. R.:

1. Hindu Administrative Institutions (Madras, 1929).
2. Studies in Tamil Literature and History (Madras, 1936).

Elphinstone. Mount Stuart,: The History of India, the Hindu and the Mohomedan Periods (Allahabad, 1966).

Francis, W.

1. Anantpur, Madras District Gazetteers (Madras, 1906).
2. Bellary, Madras District Gazetteers (Madras, 1904).
3. Madras, 2 Vols., Madras District Gazetteers (Madras, 1906).
4. South Arcot, Madras District Gazetteers (Madras, 1906).

Gribble, A History of the Deccan, 2 Vols. (London, 1895-1924).

Hayavadana Rao, C., Mysore Gazetteer, Vol. II, Part III (Bangalore, 1930).

Hemingway, C. R., Tanjore, Madras Gazetteers (1906).

Heras, Henry, The Āravidu Dynasty of Vijayanagara (Madras, 1927).

Karnāṭaka Through the Ages (Published by the Government of Mysore, Bangalore, 1968).

1. Dikshit, G. S., Social and Economic Life, Ch. XII.
2. Rajagopal Rao, N., The Rulers of Keḷadi, Ch. XIII.

Kittle, A Kanarese–English Dictionary (Mangalore 1894).

Krishnaswamy, A., The Tamil Country Under Vijayanagar (Annamalainagar, 1964).

Lash Donald, F., India in the Eyes of Europe, The Sixteenth Century (Chicago, 1968).

Longhurst, H. A.: Hampi Ruins Described and Illustrated (Madras, 1917).

Mahalingam, T. V.: Administration and Social Life Under Vijayanagara (Madras, 1940).

Mahalingam, T. V., : Economic Life in the Vijayanagara Empire (Madras, 1951).

Mahalingam, T. V.: South Indian Polity (Madras, 1965, II Edition, 1967).

Majumdar, Ramesh Chandra: Corporate Life in Ancient India (II Ed., Poona, 1922).

Manual of the North Arcot District, Madras District Gazetteers, New Edition, 2 Vols. (Madras, 1894-95).

Menon, Shangonny, P. A., : History of Travancore from the Earyiest Times (Madras, 1873).

Menon, Padmanabha, : History of Kēraḷa, Ed. by T. K. Krishna Menon (Ernakulam, 1924).

Mookerjee, Radha Kumud, : Local Government in Ancient India (III Edition, New Delhi, 1956).

Moore, L.: Trichinopaly, Madras District Gazetteers (Madras, 1898).

Mugali, R. S.: The Heritage of Karnāṭaka (Bangalore, 1946).

Narasimha Rao, R., Corporate Life in Mediavel Andhra Pradesh (Secundrabad, 1967).

Nilakanta Sastri, K. A., : Studies in Chola History and Administration (Madras, 1932).

Nilakanta Sastri, K. A., : The Cholas, II Edition (Madras, 1955).

Nilakanta Sastri, K, A., : A History of South India, II Edition (Madras, 1966).

Pate, H. R., : Tinnevelly, Madras District Gazetteers, 2 Vols. (Madras, 1917).

Puttanna, M. S., : History of Ikkēri (Bangalore, 1931).

Ramesh K. V., : A History of South Kanara (Dharwar, 1970).

Rice, B. Lewis, : Mysore Gazetteers, 2 Vols. (Westminister, 1897).

Rice, B. Lewis, : Mysore and Coorg from Inscriptions (London, 1909).

Saletore, B. A.: Ancient Karnāṭaka, Vol. 1, History of Tuḷuva (Poona, 1936).

Saletore, B. A.: Social Life in the Vijayanagara Empire (A.D. 1346-1646), Vols. 2 (Madras, 1934).

Sathianathaier, R., : History of the Nāyakas of Madura (Madras, 1924).

Sewell, Robert, : A Forgotten Empire, I Indian Edition (Delhi, 1962).

Somasekhara Sarma, M., : History of the Reḍḍi Kingdoms (1325 A.D. to 1448 A.D.) (Waltair, 1948).

Stuart, H. A.,: South Canara, Madras District Gazetteers, 2 Vols. (Madras, 1895).

Swaminathan, K. D., : The Nāyakas of Ikkēri (Madras, 1957).

Venkateswara, S. V., : Indian Culture Through the Ages, 2 Vols. (Mysore, 1932).

Ventkataraman, K. R., : The Throne of Transcendental Wisdom (Tiruchirapalli, 1959).

Venkataramanayya, N., : Origin of Vijayanagara, The City and the Empire (Madras, 1933).

Venkataramanayya, N. : Studies in the History of the Third Dynasty of Vijayanagara (Madras, 1935).

Venkataramanayya, N., : Further Sources of Vijayanagara History (Madras, 1946).

Vijayanagara Sex-Centenary Commemoration Volume (Dharwar, 1936).

Wilks, Mark : Historical Sketches of the South India in an Attempt to Trace the History of Mysore, 3 Vols. (London, 1820).

ಗುಂಡಪ್ಪ, ಡಿ. ವಿ. : ವಿದ್ಯಾರಣ್ಯರ ಸಮಕಾಲೀನರು (ಬೆಂಗಳೂರು, 1933)

ಮುಗಳಿ, ಆರ್. ಎಸ್. : ಕನ್ನಡ ಸಾಹಿತ್ಯ ಚರಿತ್ರೆ (ಮೈಸೂರು, 1960).

ರಮೇಶ್, ಕೆ. ವಿ. : ತುಳುನಾಡಿನ ಇತಿಹಾಸ (ಮೈಸೂರು, 1969).

ಸಂಶೋಧನ ಜರ್ನಲ್‌ಗಳಲ್ಲಿ ಪ್ರಕಟವಾದ ಲೇಖನಗಳು

Acharyulu, Raghava, K., Rāyavāchakamu and other Telugu Sources for Kṛishṇdēvarāya's Reign (JAHRS, IV, pp. 221-226).

Aiyangar, Krishnaswamy, S.:

I. Social Legislation Under Hindu Governments (QJMS, VI, pp. 47-67).

2. Landmark in South Indian History (QJMS, V, pp. 27-37).

3. Mysore and the Decline of the Vijayanagara Empire (QJMS, XIII, pp. 621-627).

4. Foundation of Vijayanagara 742-754 (QJMS, XI).

5. Virupāksha II (Bhandrakar Commemoration Volume, 1917, pp. 255-264).

6. A Little Known Chapter of Vijayanagar History from I450-1509, (Hindustan Review, 1911).

7. Mysore Under the Wodeyars (Madras Review, May, (1960.)

8. Rāja Dēsing of Gingee (JIH, Vol. IX),

9. Rāmarāya of Vijayanagara (Sardesai Commemoration Volume, 1938).

Aiyar, Ramanatha, A. S., The Climacteric of Tāḷikōṭa (JIH, VI, Part I. pp. 67-79).

Ayyar, Venkatarama, K. P., Anarchy in a Part of the Tamilnad How the People Faced It? pp. 300-305 P. I. H. C. 1944.

Baden Powell, B. H., A Study of the Deccan Villages, Their Origin ond Development (JRAS, 1897, pp. 299-279).

Baden Powell, B. H., The Origin cf Village Land-tenures in India:(JRAS, 1896, pp. 605-616).

Baden Powell, B. H., The Villages of Goa in the Early Sixteenth Century (JRAS for 1900, pp. 261-291).

Desikachari, T., Numismatics with Special References to the City of Vijayanagara (QJMS, III, p. 1).

Dikshit G. S., Economic Conditions in the Time of Krishnadeva Raya, Vijayanagara Sex-Centenary Commemoration Volume, pp. 213-231.

Dutt, Iswara, K.: Studies in Vijayanagara Polity, A. D. 1336-1542 (JAHRS, Vol. IV, 1930, pp. 165-188; Vol. V. 1931, pp. 7-20)

Fleet, J. V., Three Copper Plate Grants of the Kings of Vijayanagar (JBBRAS, XII, pp. 336-399).

Heras, Henry,

1. The City of Jingi at the End of the 16th Century (IA, LIV, pp. 41-43).
2. Goa Viragal at the Time of Harihara II of Vijayanagar (QJMS, pp. 1-28).
3. Jesuit Influence at the Court of Vijayanagar (QJMS, XIV, pp. 130-140).
4. The Studies of the Nāyaka of Madura in Pudumaṇṭapam (QJMS, XV, pp. 209-18).
5. Veṇkaṭapatirāya I and the Portuguese (QJMS, XIV, pp. 312-317).
6. Early Relations Between Vijayanagara and Portugal (QJMS, XI, pp. 63-74).
7. Seven Days at Vijayanagar (QJMS, XX, p. 103).
8. Rāmadēvarāya II, An Unknown Emperor of Vijayanagara (JBORS, XVI, pp. 137-153).
9. The Great Civil Wars of Vijayanagara (JIH, V, pp. 164-189).
10. A New Partapa of Kṛishṇdēva Rāya of Vijayanagara (JIA, VIII, pp. 34-35).
11. Rāmarāya of Vijayanagar (JHQ, I, pp. 79-85, 226-233).

Iyengar, Krishnaswamy, B.S.: Expansion of Vijayanagar in the South (HJMU, XI, pp. 21-30).

Iyer, Subramanya, V.: Mādhavāchārya and His Younger Brothers (JMS, VIII, pp. 217-224).

Krishnamacharyulu, C.R., The Religion of Vijayanagara House (IA, XLIV, pp. 219-225).

Krishnamacharyulu, C.R., The Origin, Growth and Decline of the Vijayanagara Empire (IA, LII, pp. 9-12).

Mahalingam, T. V., Two Centuries of Madura (PIHC, 1945).

Narasimhacharya, R., Mādhavāchārya and His Younger Brothers (QJMS, VI, pp. 318-320).

Nilakanta Sastri, K.A., Last Days of Vijayanagar (Sardesai Commemoration Volume 1938).

Puttaiya, B.: The Kempe Gowda Chiefs (QJMS, III, pp. 261-66).

Rangachari, V., A History of the Naik Kingdom of Madura (IA, XLIII, pp. 1, Seq. XLIV, p. 37. Seq. XLV, p. 32).

Rama Rao, R., Some Problems of Identity in the Early History of Vijayanagar (QJMS, XIX, pp. 251-69).

Rama, Rao, S., Vidyāraṇya and Mādhavāchārya (IHQ, VI, pp. 701-717).

Rao, Hanumantha, S., The Influence of the Religious School of Sri Madhava on the History of Vijayanagar (QJMS, XX, pp. 284-287).

Rao, Venkata Gurty, Sources for the History of Vijayanagar (JIH, pp. 249-264).

Saletore, B. A:

1. The Rise of Vijayanagara (IHQ, VII, pp. 294-301, 768-774, IX, pp. 521-566).
2. Dynastic Continuity of Vijayanagara History (IA, LXII, 1933, pp. 1-11).
3. Yachama Nāyaka, The King-maker (JIH, Vol. XIII, p. 51).

Sarma, Rama: Studies in Vijayanagara History (QJMS, XY, pp. 5-14, 89-106 & 210-211).

Sastri, Srikanta, S.: Dēvarāya, II (IA, VII, pp. 77-85).

Sastri, Krishna, H.

1. The First Vijayanagara Dynasty : Its Viceroy's and Ministers (ASI 1907-08, pp. 235-253).
2. The Second Vijayanagara Dynasty : Its Viceroys and Ministers (ASI, 1908-09, pp. 164-201).
3. The Third Vijayanagara Dynasty : Its Viceroys and Ministers (ASI, 1911-12, pp. 177-197) :

Sewell, Robert, A Note on Virūpāksha of Vijayanagara (IA, XXXIV, p. 19).

Sherwani, Mahamad III and the Fall of Vijayanagar (JIH XIX, pp. 46-55, 249).

Slater, A. R., Ruins of Vijayanagar (QJMS, II, pp. 49-55).

Srinivasachari, C. S., The Origin of the Right Hand and Left Hand Divisions. (JAHRS, IV, pp. 77-85).

Sundaram, K.: The Balañja Merchant Community of Medieval Andhra, Journal of Oriental Research, XXX, 1960-61.

Thiruvenkatachari, S., Kampaṇa, a Viceroy of Vijayanagra (PIHC, 1945).

Venkataramanayya, N.

1. Founders of Vijayanagara Before the Foundation of the City (JOR, XII, pp. 17-30).
2. Ballāḷa III and Vijayanagar (JAHRS, V, pp. 123-136).



# ವಿಷಯ ಸೂಚಿ

ಆ



ಇ



ಉ

## ಗ

## ಪ

ಬ

‡

## ಶ

ಷ



ಸ

# ಕನ್ನಡ ಅಧ್ಯಯನ ಸಂಸ್ಥೆ
## ಪಠ್ಯಪುಸ್ತಕ ಮಾಲೆ

### ಅರ್ಥಶಾಸ್ತ್ರ ಪಠ್ಯಪುಸ್ತಕಗಳು

1. ಅರ್ಥಶಾಸ್ತ್ರ ಪರಿಚಯ (ಭಾಗ ೧) : ಡಾ. ಹುಚ್ಚಪ್ಪ ಮತ್ತು ಇತರರು
2. ಅರ್ಥಶಾಸ್ತ್ರ ಪರಿಚಯ (ಭಾಗ ೨) : ಡಾ. ಹುಚ್ಚಪ್ಪ ಮತ್ತು ಇತರರು
3. ಹಣದ ಸ್ಥೂಲವಿವರಣೆ: ಜಿ. ಕ್ರೌಥರ್;
   ಅನು : ಎ. ಪಿ. ಶ್ರೀನಿವಾಸ ಮೂರ್ತಿ
4. ಆರ್ಥಿಕ ಚಿಂತನೆಯ ಬೆಳವಣಿಗೆ : ಬಿ. ಎಂ. ಕುಮಾರಸ್ವಾಮಿ
5. ಇಂಡಿಯಾ ದೇಶದ ಸಾರ್ವಜನಿಕ ಆಯವ್ಯಯ :
   ಆರ್. ಎನ್. ಭಾರ್ಗವ ; ಅನು : ಡಿ. ಕೃಷ್ಣ ಅಯ್ಯಂಗಾರ್
6. ಗ್ರೇಟ್ ಬ್ರಿಟನ್ನಿನ ಆರ್ಥಿಕ ಬೆಳವಣಿಗೆ : ಸಿ. ಕೆ. ರೇಣುಕಾರ್ಯ
7. ಆರ್ಥಿಕ ಆವರ್ತಗಳು : ಎ. ಪಿ. ಶ್ರೀನಿವಾಸ ಮೂರ್ತಿ
8. ಹಣ-ಒಂದು ವಿಶ್ಲೇಷಣೆ : ಬಿ. ಎಸ್. ಸಿದ್ದೇಗೌಡ
9. ಸಹಕಾರದ ಮುನ್ನಡೆ : ಡಿ. ಕೃಷ್ಣ ಅಯ್ಯಂಗಾರ್
10. ಸಾರ್ವಜನಿಕ ಹಣಕಾಸು : ಡಾ. ಬಿ. ಎಸ್. ಶ್ರೀಕಂಠಾರಾಧ್ಯ
11. ಆಧುನಿಕ ಜಪಾನಿನ ಸಂಕ್ಷಿಪ್ತ ಆರ್ಥಿಕ ಇತಿಹಾಸ : ಜಿ. ಸಿ. ಅಲೆನ್ ;
    ಅನು : ಎ. ಪಿ. ಶ್ರೀನಿವಾಸ ಮೂರ್ತಿ
12. ಆರ್ಥಿಕಾಭಿವೃದ್ಧಿ–ಕೆಲವು ಸಮಸ್ಯೆಗಳು : ಎ. ಪಿ. ಶ್ರೀನಿವಾಸ ಮೂರ್ತಿ
13. ಭಾರತೀಯ ಕರೆನ್ಸಿ ಮತ್ತು ಬ್ಯಾಂಕಿಂಗ್ ಸಮಸ್ಯೆಗಳು :
    ಎನ್. ಜಿ. ಚಂದ್ರಶೇಖರಯ್ಯ
14. ಜಪಾನಿನ ಆರ್ಥಿಕ ಪುನರುದಯ : ಜಿ. ಸಿ ಅಲೆನ್ ; ಅನು : ಎ. ಪಿ.
    ಶ್ರೀನಿವಾಸ ಮೂರ್ತಿ
15. ಸಹಕಾರ–ತತ್ವಗಳು ಹಾಗೂ ಸಮಸ್ಯೆಗಳು :
    ಎ. ಪಿ. ಶ್ರೀನಿವಾಸ ಮೂರ್ತಿ